# ಶ್ರೀ ಬ್ರಾಹ್ಮೀಯ ಚಿತ್ರಕರ್ಮ ಶಾಸ್ತ್ರಂ

ಸಂಪುಟ - ೨



## ಆದಿಮೂರ್ತಿ - ೮೩ ಚಿತ್ರಗಳು

*ತಿರುಮಲ ತಿರುಪತಿ ದೇವಸ್ಥಾನಗಳವರ ಉದಾರ*
*ಆರ್ಥಿಕ ನೆರವಿನಿಂದ ಈ ಸಂಪುಟ ಪ್ರಕಟವಾಗಿದೆ.*

ಸಂಪಾದನೆ - ವಿಶೇಷ ವಿವರ
**ಜಿ. ಜ್ಞಾನಾನಂದ. ಎಂ. ಎ.**

**ಸಂಸ್ಕೃತಿ ಸಾಹಿತ್ಯ ಪ್ರಸಾರ ಸಮಿತಿ**
ಜ್ಞಾನಭಂಡಾರ, ಭಾರತ್‌ನಗರ ಬಿ. ಇ. ಎಂ. ಎಲ್ ಅಂಚೆ.
ಕೆ.ಜಿ.ಎಫ್ - ೫೬೩ ೧೧೪

# ಶ್ರೀ ಬ್ರಾಹ್ಮೀಯ ಚಿತ್ರಕರ್ಮ ಶಾಸ್ತ್ರಂ

## ಸಂಪುಟ - ೨

## ಆದಿಮೂರ್ತಿ - ೮೩ ಚಿತ್ರಗಳು

*ತಿರುಮಲ ತಿರುಪತಿ ದೇವಸ್ಥಾನಗಳವರ ಉದಾರ*
*ಆರ್ಥಿಕ ನೆರವಿನಿಂದ ಈ ಸಂಪುಟ ಪ್ರಕಟವಾಗಿದೆ.*

ಸಂಪಾದನೆ ಮತ್ತು ಅನುವಾದ
ಜಿ. ಜ್ಞಾನಾನಂದ. ಎಂ. ಎ.

**ಸಂಸ್ಕೃತಿ ಸಾಹಿತ್ಯ ಪ್ರಸಾರ ಸಮಿತಿ**
ಜ್ಞಾನಭಂಡಾರ, ಭಾರತ್‌ನಗರ ಬಿ. ಇ. ಎಂ. ಎಲ್ ಅಂಚೆ.
ಕೆ.ಜಿ.ಎಫ್ ೫೬೩ ೧೧೫

**Sri BRAHMEEYA CHITRA KARMA SHASTRAM**, Vol II Sanskrit original edited with Kannada gist & explanatary notes by **Sri G. Gnanananda. M. A.**, Published by **SANRITI SAHITYA PRASARA SAMITHI, JNANA BHANDARA, BHARATH NAGAR, K G F 563115 (Karnataka)**

Pages . 232 Price Rs. 175/-

No off copies . 1000



Published with financial assistance from T T D, Tirupathi under scheme aid to authors



First Edition Sept 99

ಬೆಲೆ ರೂ 175 /

ಮುದ್ರಣ :
ಚಂದನ ಪ್ರಿಂಟರ್ಸ್
ರಾಮಾಂಜನೇಯ ಮುಖ್ಯರಸ್ತೆ
ಶ್ರೀನಗರ ಬೆಂಗಳೂರು 50

## ಅಥ ಏಕಾದಶೋಽಧ್ಯಾಯಃ

# ಆದಿ ಮೂರ್ತಿ ಲಕ್ಷಣಮ್

**ಆದಿ ಮೂರ್ತಿ ವಿಧಿಂ ವಕ್ಷ್ಯೇ ವಿಧಿವತ್ ಪಂಕಜಾಸನ**
**ಶ್ರೇಷ್ಠೇ [ಷ್ಠೋ] ನ ದಶತಾಲೇನ ಮಾನನೀಯಂ ಮುನೀಷಿಭಿಃ ॥ ೧ ॥**
**ಅನಂತೋಪರಿ ಸುಖಾಸೀನಂ [ಸುಖಮಾಸೀನಂ] ಸರ್ವ [ಸರ್ವ] ಸೃಷ್ಟ್ಯಾದಿ ಹೇತುಕಮ್**
**ನವ ಸಪ್ತ ತಥಾ ಪಂಚ ಫಣಾನಾಂ ಸಂಪ್ರಕೀರ್ತಿತಾ ॥ ೨ ॥**
**ವಲಯತ್ರಯ ಸಂ [ಸಮಾ] ಯುಕ್ತಂ ಸಮವೃತ್ತಂ ಸಮಾಸನಮ್**
**ಆಯತಾಯ ತಸಂ ಯುಕ್ತಂ ಯಥಾ ಯೋಗಂ ಯಥಾರ್ಹಕಮ್ ॥ ೩ ॥**

ಎಲೈ ಪಂಕಜಾಸನನೇ, ಆದಿಮೂರ್ತಿಯ ಲಕ್ಷಣಗಳನ್ನು ಶಾಸ್ತ್ರ ವಿಧಿಯನುಸಾರವಾಗಿ ಹೇಳುತ್ತೇನೆ. ಆಲಿಸು. ಆದಿಮೂರ್ತಿಯನ್ನು ಶ್ರೇಷ್ಠ ದಶತಾಲದಲ್ಲಿ (೧೨೪ ಅಂಗುಳ) ನಿರ್ಮಿಸಬೇಕು. ಈ ಸಕಲ ಸೃಷ್ಟಿಗಳಿಗೂ ಕಾರಣವಾಗಿರುವ ಆದಿಮೂರ್ತಿಯು ಅನಂತನ ಮೇಲೆ ಸುಖಾಸನದಲ್ಲಿ ಕುಳಿತಿರುತ್ತಾನೆ. ಆ ಅನಂತನಿಗೆ ಫಣೆಗಳು (ಹೆಡೆಗಳು) ಒಂಬತ್ತು, ಏಳು ಅಥವ ಐದು ಇರಬಹುದು. ಅನಂತನು ಸಮನಾದ ಮೂರು ವೃತ್ತ ವಲಯಗಳಲ್ಲಿ ಅಥವ ಆಯತವೃತ್ತ ವಲಯಗಳಲ್ಲಿರುತ್ತಾನೆ. ಸಂದರ್ಭ ಮತ್ತು ಸನ್ನಿವೇಶಕ್ಕೆ ಸೂಕ್ತವಾಗಿರುವಂತೆ ಇವನ್ನು ರೂಪಿಸಬಹುದು.

**ಬೇರೋದಯ ತ್ರಿಭಾಗೈಕಮಾಸನೋತ್ಸೇಧಮಿಷ್ಯತೇ**
**ಚತುರ್ಭಾಗೈಕ ಭಾಗಂ ವಾ ಪ್ರಮಾಣಂ ಪರಿಗೀಯತೇ ॥ ೪ ॥**
**ಬೇರೋಚ್ಛ್ರೇ ನವಾಂಶಸಪ್ತಾಂಶೇಂಶೇ ಚತುರ್ಭಾಗಿಕಮ್**
**[ಬೇರೋದಯತು ಚಾತ್ರಸ್ತ್ರ್ಯಂಶೇಂಶೇ ಚತುರ್ಭಾಗಿಕಮ್]**
**ಸಾರ್ಧ ದ್ವಿಭಾಗ ಸಂಯುಕ್ತಮಾಸನಂ ಪರಿಗೀಯತೇ ॥ ೫ ॥**

ಮೂರ್ತಿಯ ಎತ್ತರವನ್ನು ಮೂರು ಸಮಭಾಗಗಳನ್ನಾಗಿ ಮಾಡಿ ಅದರಲ್ಲಿ ಒಂದು ಭಾಗದಷ್ಟು ಆಸನದ ಎತ್ತರವನ್ನಾಗಿ ಸ್ವೀಕರಿಸಬಹುದು. ಅಥವ ನಾಲ್ಕು ಸಮಭಾಗಗಳನ್ನಾಗಿ ಮಾಡಿ ಅದರಲ್ಲಿ ಒಂದು ಭಾಗವನ್ನು ಆಸನದ ಎತ್ತರವನ್ನಾಗಿ ಸ್ವೀಕರಿಸಬಹುದು.

ಮೂರ್ತಿಯ ಎತ್ತರವನ್ನು ಒಂಬತ್ತು ಸಮಭಾಗಗಳಾಗಿ ಮಾಡಿದಾಗ ನಾಲ್ಕು ಭಾಗಗಳಷ್ಟು, ಎಂಟು ಸಮಭಾಗಗಳನ್ನಾಗಿ ಮಾಡಿದಾಗ ಅದರಲ್ಲಿ ಮೂರುಭಾಗಗಳಷ್ಟು, ಏಳು ಸಮಭಾಗಗಳನ್ನಾಗಿ ಮಾಡಿದಾಗ ಅದರಲ್ಲಿ ಎರಡೂವರೆ ಭಾಗದಷ್ಟು ಆಸನದ ಅಗಲ ಇರಬೇಕು.

ದ್ವಿಸಾಲಂ ತತಿರಾ [ವಿಶಾಲಮಾ] ಯಾಮಂ ಷಣ್ಮಾತ್ರಂ ವದನಂ ವಿದುಃ
ನತಂ ಚತುರ್ಯವಂ ತ್ರೀಣೇ ಫಣಮಾನಂ [ಫಣ ಮಾನಮಾತ್ರಂ] ತು ಪೂರ್ವತಃ ॥ ೬ ॥
ಫಣಾನಾಂ ಪಂಚ ಸಂಖ್ಯಾ ವಿಪುಲಾಯತ ಫಣಾನಿ ಚ
ದ್ವಿಮಾತ್ರ ತ್ರಿಮಾತ್ರ ಹಾನಿಃ ಫಣಾನಾಂ ವಿಪುಲೇ ಕ್ರಮಾತ್
[ದ್ವಿಮಾತ್ರಂ ತ್ರಿಮಾತ್ರ ಹಾನಿಃ ಸ್ಯಾತ್ ಫಣಾನಾಂ ವಿಪುಲಂ ಕ್ರಮಾತ್] ॥ ೭ ॥
ಮಾತ್ರಾ ದ್ವಿಮಾತ್ರಹಾನಿರ್ವಾ ಫಣಾ ನಾಮಾಸು ಪೂರ್ವತಃ
ಶುದ್ಧ ಕಾಂಚನ ಸಕಾಂತಂ ದಕ್ಷಿ(ಣೇ) ವಲಯ ವೃತಮ್ ॥ ೮ ॥
ವಾಮಾಂಘ್ರಿಮಾಸನೋದ್ವೃತ್ಯ ದಕ್ಷಿಣಂ ತು ಪ್ರಲಂಬಯೇತ್
ಜಾನ್ವೋಃ ಪರ್ಯಂತಂ ಸಾರ್ಧ ಪಂಚಾಶತ್ ಸಪ್ತಕೋಲಕಮ್ ॥ ೯ ॥

ಆದಿಶೇಷನ ಹೆಡೆಯ ಉದ್ದ, ಅಗಲಗಳು ಕ್ರಮವಾಗಿ ೨೪ ಅಂಗುಳಗಳು. ಮುಖದ ಅಗಲವು ೬ ಅಂಗುಳ. ಹೆಡೆಯ (ಫಣೆಯ) ನತಮಾನವು ೩ ಅಥವ ೪ ಯವಗಳು. ನತಮಾನ ಎಂದರೆ ಹೆಡೆಯು ಅಕ್ಕ ಪಕ್ಕಕ್ಕೆ ಬಗ್ಗುವುದರಿಂದ ಹೆಡೆಯ ಎತ್ತರದಲ್ಲಿ ಉಂಟಾಗುವ ಕಡಿತ. ಉಳಿದ ಹೆಡೆಗಳ ಎತ್ತರವು ಮಧ್ಯದ ಹೆಡೆಗಿಂತಲೂ ಕ್ರಮವಾಗಿ ೨ ಅಥವ ೩ ಅಂಗುಳ ಕಡಿಮೆಯಾಗಿರುತ್ತವೆ. ಅಗಲದಲ್ಲಿ ೧ ಅಂಗುಳ, ಉದ್ದದಲ್ಲಿ ೧ ಅಂಗುಳ ಕಡಿಮೆಯಾಗಿರುತ್ತವೆ. ಪುಟಕ್ಕಿಟ್ಟಿರುವ ಅಪರಂಜಿಯಂತೆ ಅವುಗಳ ಬಣ್ಣವಿರುತ್ತದೆ. ಅವು ಬಲಗಡೆಗೆ ಸುತ್ತಿಕೊಂಡಿರುತ್ತವೆ. ಸ್ವಾಮಿಯು ಎಡಗಾಲನ್ನು ಮಡಚಿ ಅದರ ಮೇಲಿರಿಸಿಕೊಂಡು ಇನ್ನೊಂದು ಕಾಲನ್ನು (ಎಂದರೆ ಬಲದ ಕಾಲನ್ನು) ಕೆಳಕ್ಕೆ ಜೋತು ಬಿಟ್ಟಿರುತ್ತಾನೆ. ಕೇಶಾಂತದಿಂದ ಮೊಣಕಾಲಿನ ತನಕ ಇರುವ ಪುರಸೂತ್ರದಉದ್ದವು ೬೪ ಅಂಗುಳ ೪ಯವಗಳು.

ವರ್ಗತ್ರಯ ಸಮಾಯುಕ್ತಂ ಯಾಥಾ ಶೋಭಂ ಚ ಗೀಯತೇ
ವಾಮಾಗುಷ್ಠಾಂತರಂ ಸೂತ್ರಾತ್ ಕಲಾರಂಧ್ರಾಂಗುಲಂ ಭವೇತ್ ॥ ೧೦ ॥
ಅಂಗುಲಂ ಸಾರ್ಧಮಾತ್ರಂ ವಾ ನ್ಯೂನ ಮುಕ್ತ ಪ್ರಮಾಣತಃ
ವಸುಮಾತ್ರಂ ಕಲಾಸೂತ್ರಾತ್ ದಕ್ಷಾಂತರ ಮಥಾಪಿ ವಾ ॥ ೧೧ ॥

ಬಹು ಸುಂದರನಾಗಿರುವ ಸ್ವಾಮಿಯು ಆದಿಶೇಷನ ಮೂರು ಸುರುಳಿಗಳ ಮೇಲೆ ಕುಳಿತಿರುತ್ತಾನೆ. ಈ ಸ್ವಾಮಿಯ ಮಧ್ಯಸೂತ್ರಕ್ಕೂ ಎಡಗಾಲಿನ ಹೆಬ್ಬೆರಳಿನ ಮಧ್ಯೆ ದೂರವು ೧೧ ಅಂಗುಳಗಳಿರುತ್ತವೆ. ಇದರಲ್ಲಿ ೧ ಅಥವ ೧ ಅಂಗುಳ ೪ಯವದಷ್ಟು ಕಡಿಮೆಯಾದರೂ ಆಗಬಹುದು. ಮಧ್ಯ ಸೂತ್ರಕ್ಕೂ ಬಲಗಾಲಿನ ಹೆಬ್ಬೆರಳಿಗೂ ನಡುವೆ ೧೦ ಅಂಗುಳ ದೂರವಿರಬೇಕು.

(ಸವ್ಯ) ಹಸ್ತತಲಂ ತಸ್ಮಿನ್ ಆಸನೇ ಸಂಪ್ರಯುಜ್ಯತೇ
ಅಂಗುಷ್ಠಸ್ಯಾವ ಸಾನಂ ಸ್ಯಾತ್ ಊರುಮೂಲಂ ಮುಖಾಂತರಮ್ ॥ ೧೨ ॥
ಸೂತ್ರಾತ್ತು ನಳಕಾಮಧ್ಯಂ ರುದ್ರಮಾತ್ರಾಂಗುಲಂ ಭವೇತ್
ವಸು (ಚ) ರಂಧ್ರ ಮಾತ್ರಂ ವಾ ಯಥೋಚಿತ ಮಥಾಚರೇತ್ ॥ ೧೩ ॥
ವಾಮದಂಡಕರಂ ಜಾನೂಪರಿಷ್ಠಾದ್ವಾಮಪಾದ ಭಾಕ್
ಸವ್ಯಹಸ್ತೇನ ಸಂ ಶ್ಲಿಷ್ಟಂ ಕಾಯಂ ತತ್ ಹೃದಯಾವಧಿ ॥ ೧೪ ॥

**ಶಂಖ ಚಕ್ರ ಧರೌ [ಧೃತೌ] ಹಸ್ತೌ ತಾರಂ ಕಾಯಾರ್ಧಮಿಷ್ಯತೇ**
**ಮುಖಾಂತರ ಸಮಾಯುಕ್ತಮರ್ಧ ಮಾತ್ರಾಧಿಕೋಥವಾ ॥ ೧೫ ॥**
**ಮಣಿಬಂಧಾವಧಿ ಕಾರ್ಯಂ ಬಾಹ್ವ(ಭ್ವ)ಂತರಮೇವ ಚ**
**ಶಂಖ ಚಕ್ರ ನತಂ ನೇತ್ರಸಮಂ ಭ್ರೂ ಪರ್ಯಂತಮಿಷ್ಯತೇ ॥ ೧೬ ॥**

ಬಲಗೈಯನ್ನು ಸ್ವಾಮಿಯು ತಾನು ಕುಳಿತಿರುವ ಸರ್ಪ ವರ್ತುಲದ ಮೇಲೆ ಊರಿಯತ್ತಾನೆ. ಹೀಗೆ ಊರಿರುವ ಬಲಗೈಹೆಬ್ಬೆರಳಿಗೂ ಬಲತೊಡೆಯ ಮೂಲಕ್ಕೂ ಮಧ್ಯೆ ಇರುವ ದೂರವು ೧೨ ಅಂಗುಳ. ಆಸನದ ಮೇಲೆ ಊರಿರುವ ಕಾಲಿನ ಪಾದದ ಕೀಲಿನ ಮೇಲ್ಭಾಗದ ನಳಕಾವು ಸೂತ್ರದಿಂದ ೧೨ ಅಂಗುಳ ದೂರವಿರುತ್ತದೆ. ಅಥವ ಈ ದೂರವು ೮ ಅಥವ ೯ ಅಂಗುಳಗಳಷ್ಟಾದರೂ ಆಗಿರಬಹುದು. ಎಡಹಸ್ತವು ಎಡ ಮೊಣಕಾಲಿನ ಮೇಲಿರಬೇಕು. ಎಡಗೈ ಹೃದಯದವರೆಗೂ ಒಡಲಿನೊಂದಿಗೆ ಸೇರಿಕೊಂಡಿರಬೇಕು. ಮೇಲಿನ ಹಸ್ತಗಳೆರಡರಲ್ಲಿರುವ ಶಂಖ, ಚಕ್ರಗಳು ಶಿರಸ್ಸಿನ ಎತ್ತರಕ್ಕೆ ಸಮನಾಗಿರುತ್ತವೆ. ಚಕ್ರವನ್ನು ಧರಿಸಿರುವ ತೋಳಿನ ಮಣಿಕಟ್ಟಿನ ಹೊರಭಾಗಕ್ಕೂ, ಆ ತೋಳಿನ ಭುಜಕ್ಕೂ ನಡುವೆ ಇರುವ ಅಂತರ ೧೨ ಅಂಗುಳ ಅಥವ ೧೨ ಅಂಗುಳ ಳಯವ ಇರುತ್ತದೆ. ಶಂಖವನ್ನು ಧರಿಸಿರುವ ಹಸ್ತವೂ ಕೂಡ ಇದೇ ರೀತಿಯಾಗಿರುತ್ತದೆ. ಶಂಖ ಚಕ್ರಗಳ ಎತ್ತರವು ನೇತ್ರಕ್ಕೆ ಸಮವಾಗಿ ಅಥವ ಭ್ರೂಮಧ್ಯಕ್ಕೆ ಸಮನಾಗಿ ಇರಬೇಕು.

**ನಾಸಾಗ್ರೋದರ ಮಧ್ಯಂತು ಸ್ಪೃಶನ್ ಸೂತ್ರಂ ಪ್ರಲಂಬಯೇತ್**
**ಶ್ರೋಣೀ ಮಧ್ಯಾಂಗುಲಂ ಸಾರ್ಧಂ ಮೇಢ್ರಾಂತಂ ವೇದ ಮಾತ್ರಕಮ್ ॥ ೧೭ ॥**
**ಸವ್ಯಹಸ್ತತಲಂ ಚೋರು (ಮೂಲಂ) ಪಂಚಾಂಗುಲಾಂತರಮ್**
**ಸಪ್ತಮಾತ್ರಾಂತರಂ ವಾಪಿ ಯಥಾ ಯುಕ್ತಪ್ರಮಾಣತಃ ॥ ೧೮ ॥**
**ಸೂತ್ರಾತ್ಸವ್ಯಸ್ಯ ಪಾದಾಂಗುಷ್ಠಾಂತರಂ ದಶಮಾತ್ರಕಮ್**
**ಸೂತ್ರಾಲ್ಲಲಾಟ ಪರ್ಯಂತಂ ತ್ರಿಮಾತ್ರಾಂತರ ಮೇವ ಚ ॥ ೧೯ ॥**
**ನೇತ್ರಾತ್ತು ಜಾನು ಪರ್ಯಂತ ಮೂರ್ಧ್ವಕಾಯಸಮಂ ಮತಮ್**
**ಜಾನೂ ಪರಿಷ್ಠಾತ್ ಕೇಶಾಂತಂ ಷಣ್ಮಾತ್ರಾಧಿಕಸ್ಯಕಾ ॥ ೨೦ ॥**
**ಅಂಗುಷ್ಠಾದ್ದಂಡ ಹಸ್ತಾಂತಂ ದ್ವಿಮುಖಂ ಚಾಂತರಂ ಭವೇತ್**
**ವಿಷ್ಣುಮಾತ್ರಂ ತಥಾಧಿಕ್ಯಂ ಪ್ರಮಾಣಂ ಪರಿಕೀರ್ತಿತಮ್ ॥ ೨೧ ॥**
**ಪ್ರಲಂಬಿತ ಪದಾಥ [ಪಾದಾದ್ಯ]ಸ್ತಾತ್ ಪದ್ಮಂ ನಕ್ಷತ್ರಮಾತ್ರಕಮ್**
**ವಿಸ್ತಾರೇ ಚ ತಥಾಯಾಮೇ ಪ್ರಮಾಣಂ ಪರಿಕಲ್ಪ್ಯತೇ ॥ ೨೨ ॥**
**ಸುವೃತ್ತಂ ದ್ವಿಧಾಯಾಮಂ ವೃತ್ತಂ ಪಾದಾದ್ಯಥೋಚಿತಮ್**
**ತತ್ ತ್ರಿಭಾಗ ಚತುರ್ಭಾಗೈಕೋದಯಂ ಸಮುದಾಹೃತಮ್ ॥ ೨೩ ॥**

ಸೂತ್ರವು ನಾಸಾಗ್ರವನ್ನು, ಉದರದ ಮಧ್ಯಭಾಗವನ್ನು ಸ್ಪರ್ಶಿಸುತ್ತಿರಬೇಕು. ಈ ಸೂತ್ರಕ್ಕೂ ಶ್ರೋಣಿ ಮಧ್ಯ ಭಾಗಕ್ಕೂ (ನಾಭಿಗೂ) ಇರುವ ಅಂತರವು ೧ ಅಂಗುಳ ಳಯವ.

ಸೂತ್ರಕ್ಕೂ ಮೇಢ್ರಕ್ಕೂ ಮಧ್ಯೆ ಇರುವ ಅಂತರವು ೪ ಅಂಗುಳ. ಎಡ ಅಂಗೈಗೂ ತೊಡೆಯ ಮೂಲಕ್ಕೂ ಇರುವ ಅಂತರವು ೫ ಅಂಗುಳ. ಅಥವ ಇದು ಅವಶ್ಯಕತಾನು ಸಾರವಾಗಿ ೭ ಅಂಗುಳಗಳ ತನಕ ಇದ್ದರೂ ಇರಬಹುದು. ಸೂತ್ರದಿಂದ ಎಡಗಾಲಿನ ಹೆಬ್ಬೆರಳಿನ ಮಧ್ಯೆ ಇರುವ ಅಂತರವು ೧೦ ಅಂಗುಲ.

ಸೂತ್ರದಿಂದ ಲಲಾಟ ಮಧ್ಯೆ (ನೆತ್ತಿಯ ಮಧ್ಯೆ) ೩ ಅಂಗುಳ ದೂರವಿರುತ್ತದೆ. ನೇತ್ರದಿಂದ ಮೊಣಕಾಲಿನ ತನಕದ ಎತ್ತರವು ಊರ್ಧ್ವಕಾಯಕ್ಕೆ ಸಮಾನವಾಗಿರುತ್ತದೆ. ಎಂದರೆ ೬೨ ಅಂಗುಳ. ಮೊಣಕಾಲಿನಿಂದ ಕೇಶಾಂತದವರೆವಿಗೂ ೬೬ ಅಂಗುಳಗಳು. ಎಡಗಾಲಿನ ಅಂಗುಷ್ಠ ದಂಡಹಸ್ತದಲ್ಲಿರುವ ಎಡಗೈಯ ಅಂಗೈಗೂ ಮಧ್ಯೆ ಇರುವ ಅಂತರವು ೨೪ ಅಂಗುಳ. ಅಥವ ಇದು ಇನ್ನೂ ಒಂದು ಅಂಗುಳ ಹೆಚ್ಚಾಗಿ ಎಂದರೆ ೨೫ ಅಂಗುಳದತನಕ ಇರಬಹುದು. ತೂಗುಬಿಟ್ಟಿರುವ ಪಾದದ ಕೆಳಗೆ ಇರುವ ಪದ್ಮದ ಅಗಲವು ೨೭ ಅಂಗುಳ. ಉದ್ದವು ಅಷ್ಟೇ ಎಂದರೆ ೨೭ ಅಂಗುಳ. ಆ ಪದ್ಮವು ವೃತ್ತಾಕಾರವಾಗಿ ಅಥವ ಬಾದಾಮಿಯ ಆಕಾರದಲ್ಲಿ ಸೂಕ್ತವಾದ ರೀತಿಯಲ್ಲಿ ಅಂದವಾಗಿರುವಂತೆ ರೂಪಿಸಬಹುದು. ಪದ್ಮದ ಅಗಲದಲ್ಲಿ ಮೂರು ಭಾಗಗಳಲ್ಲಿ ಒಂದು ಭಾಗದಷ್ಟಾಗಲಿ ಅಥವ ನಾಲ್ಕು ಭಾಗಗಳಲ್ಲಿ ಒಂದು ಭಾಗದಷ್ಟಾಗಲಿ ಎತ್ತರವಾಗಿರಬೇಕು.

**ಲಲಾಟ ಸವ್ಯಾಗ್ರಕ ಪಾರ್ಶ್ವ ನಾಸಾ ಪುಟಾಂತರೇ ಸವ್ಯಹನೌಸ್ತನೇ ಚ**
**ನಾಭ್ಯಂತರೇ ಮೇಢ್ರಕಸವ್ಯ ಪಾರ್ಷ್ಣೀ ನೀಸ್ತ್ಯಾಷ್ಟ ಮಾತ್ರಂ**
**ಪರಿಲಂಬ ಸೂತ್ರಮ್ ॥ ೨೪ ॥**

**ದಕ್ಷಿಣೇऽದಕ್ಷಿಣೇ ಶ್ರೀ ಭೂಮಿಸ್ಥಿತಿ (ಸ್ತು) ಕೃತಾಂಜಲಿಃ**
**ವಾಮಾऽವಾಮ (ಮಾ) ಪದಂ ಚೈಷತ್ [ಟ್] ಕುಂಚಿತಾಭಂಗಸೂತ್ರಭಾಕ್ ॥ ೨೫ ॥**

ನೆತ್ತಿಯ ಬಲಗಡೆ, ಬಲ ನಾಸಾಪುಟದ ಮಧ್ಯಭಾಗದಲ್ಲಿ, ಹನುವಿನ ಬಲಭಾಗದಲ್ಲಿ ಸ್ಥನದ ಮಧ್ಯಭಾಗದಲ್ಲಿ, ನಾಭಿಯ ನಡುವೆ, ಮೇಢ್ರದ ಮಧ್ಯಭಾಗದಲ್ಲಿ, ಮಧ್ಯ ಸೂತ್ರವು ಹಾದು ಹಿಮ್ಮಡಿಯ ಬಲಭಾಗದಲ್ಲಿ ೮ ಅಂಗುಳ ದೂರದಲ್ಲಿರುತ್ತದೆ.

ಸ್ವಾಮಿಯ ಎಡ ಮತ್ತು ಬಲ ಭಾಗಗಳಲ್ಲಿ ಲಕ್ಷ್ಮೀದೇವಿ ಮತ್ತು ಭೂದೇವಿಯರು ಅಂಜಲೀ ಬದ್ಧರಾಗಿರುತ್ತಾರೆ. ಆಭಂಗದಲ್ಲಿ ಅವರಿಬ್ಬರೂ ಇದ್ದು ಅವರ ಎಡ ಮತ್ತು ಬಲ ಕಾಲುಗಳು ಸ್ವಲ್ಪವಾಗಿ ಬಗ್ಗಿರಬೇಕು.

**ಲಕ್ಷ್ಮೀ ಮೇದಿನೀ ಪಾದಾಂತರಂ ಸೂತ್ರಾಚ್ಚತುರ್ಮುಖಮ್**
**ಮೂರ್ತೇ ಸ್ಸೂತ್ರಾದ್ರಮಾ ಭೂಮಿ ಸ್ಥಿತಾಂಘ್ರೇರ್ಮಧ್ಯಮೇವಹಿ ॥ ೨೬ ॥**
**ಸಪ್ತರ್ಷೀ ನ [ನಥ] (ಪಿ ದೇವಾಂಶ್ಚ ದಶ ) ತಾಲಸ ಮಾಪಯೇತ್**
**ಸಪ್ತರ್ಷಿ (ಭಿ) ರ್ದೇವಗಣ್ಯೆ ಸ್ತಥಾ ಚೇಂದ್ರ ಪುರಸ್ಸರೈಃ ॥ ೨೭ ॥**
**ಕೃತಾಂಜಲಿ ಸಮಾಯುಕ್ತೈ ರ್ಮೋಕ್ಷಸಾಧನತತ್ಪರೈಃ**
**ಮತ್ಸ್ಯಃ ಕೂರ್ಮೋ ವರಾಹಶ್ಚ ನಾರಸಿಂಹೋऽಥ ವಾಮನಃ ॥ ೨೮ ॥**



ಚಿತ್ರ ೫೯ : ಆದಿ ಮೂರ್ತಿ - ೧

**ರಾಮೋ ರಾಮಶ್ಚ ರಾಮಶ್ಚ ಕೃಷ್ಣ: ಕಲ್ಕೀತಿ [ಕರ್ಕಿಯತೇ] ದಶ**
**ಏತೈರ್ದಶವಿಧೈ: ಪ್ರಾದುರ್ಭಾವೈ: ಪ್ರಾಗಾದಿಷು ವೃತೈ: ॥ ೨೯ ॥**
**ಪುಷ್ಪಾಂಜಲಿ ಪುಟೈ ಸ್ಸಮ್ಯಕ್ ದಿವ್ಯ ಧ್ಯಾನ ಪರಾಯಣೈ:**
**ಕಿಷ್ಕಿಂಧಾ ಸುಂದರೈರ್ಯುಕ್ತ ಸ್ಸನಕಾದಿ ಕುಮಾರ ಕೈ: ॥ ೩೦ ॥**

ಮಧ್ಯಸೂತ್ರದಿಂದ ಶ್ರೀದೇವಿ (ಲಕ್ಷ್ಮೀ) ಭೂದೇವಿ ಇವರ ಪಾದಗಳು ೪೮ ಅಂಗುಳದೂರದಲ್ಲಿ ಇರಬೇಕು. ಸಪ್ತರ್ಷಿಗಳನ್ನು, ದೇವತೆಗಳನ್ನು ದಶತಾಲದಲ್ಲಿ ರೂಪಿಸಬೇಕು. ಮೋಕ್ಷಾರ್ಥಿಗಳಾಗಿ ಅಂಜಲಿ ಬದ್ಧರಾಗಿ ನಿಂತಿರುವ ಸಪ್ತರ್ಷಿಗಳಿಂದಲೂ, ಇಂದ್ರ ಮೊದಲಾದ ದೇವಗಣಗಳಿಂದಲೂ, ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಭಾರ್ಗವ ರಾಮ (ಪರಶುರಾಮ), ರಾಮದಾಶರಥಿ, ಬಲರಾಮ, ಕೃಷ್ಣ, ಕಲ್ಕಿ ಮೊದಲಾದ ದಶಾವತಾರಗಳಿಂದಲೂ ಸುತ್ತುವರೆಯಲ್ಪಟ್ಟಿರುತ್ತಾನೆ. ಅಂಜಲಿಗಳಲ್ಲಿ ಪುಷ್ಪಗಳನ್ನು ಇರಿಸಿಕೊಂಡು ಈ ದಿವ್ಯರೂಪವನ್ನು ಧ್ಯಾನಿಸುತ್ತಿರುವವರು ಸನಕ ಸನಂದನಾದಿಗಳು, ವಾನರರು, ಬ್ರಹ್ಮ, ಶಿವ, ಮುನಿಗಳು ಮುಂತಾದವವರೆಲ್ಲಾ ಸಮನಾಗಿ ಇಕ್ಕೆಲಗಳಲ್ಲೂ ನಿಂತಿರುತ್ತಾರೆ.

**ಬ್ರಹ್ಮೇಶಾಭ್ಯಾಂ ಮುನಿಭ್ಯಾಂ ಚ ವಾಮೇಽವಾಮೇ ಕೃತಾಂಜಲಿ:**
**ಸಮಭಂಗ ವಿಧಾನೇನ (ವಿಧಿ:) ದ್ವಿ ತ್ರಿ ಪಂಚ ಕರಾಂತರಮ್ ॥ ೩೧ ॥**
**ನವತಾಲಾಂತರಂ ವಾಽ ಪಿ ಪಂಚಾಶಚ್ಚತುರಂಗುಲೈ:**
**ದಿವ್ಯ ಸೂತ್ರಾತ್ ಬಹಿಷ್ಠಾಭಿ: ಪ್ರಮಾಣಮನುಗೀಯತೇ ॥ ೩೨ ॥**
**ನಾಸಾಸ್ಯದ್ವಿಬುಕಾಹಿಕ್ಕಾ ಸ್ತಾನಾಂತಮುಪಗಮ್ಯತೇ**
**ತದ್ದೇವೀನಾಂ ಮುನೀನಾಂ [ಭ್ಯಾಂ] ಚ ಮೂರ್ತೇರುನ್ನತ ಮುತ್ತಮಮ್ ॥ ೩೩ ॥**

ಇವರೆಲ್ಲರೂ ಆದಿ ಮೂರ್ತಿಯ ದಿವ್ಯ ಸೂತ್ರದಿಂದ ೪ ಹಸ್ತ, ೬ ಹಸ್ತ, ೧೦ ಹಸ್ತ, ಅಥವ ೧೦೮ ಅಂಗುಳ ಅಥವ ೫೪ ಅಂಗುಳ ದೂರದಲ್ಲಿರುತ್ತಾರೆ.

ದೇವತೆಗಳ ಪ್ರಮಾಣಗಳನ್ನು ಹೇಳಲಾಗುತ್ತದೆ. ಆದಿಮೂರ್ತಿಯ ನಾಸಿಕ, ಬಾಯಿ, ಹನು, ಹಿಕ್ಕ , ಸ್ತನ ಇವುಗಳ ಮಟ್ಟದ ಎತ್ತರದಲ್ಲಿ ದೇವಿಯರು, ಮುನಿಗಳು ಮುಂತಾದವರ ಎತ್ತರ ಇರುವುದು ಶ್ರೇಷ್ಠ.

**ಬ್ರಹ್ಮಶಂಕರ ಯೋರ್ಮಧ್ಯೇ ಉನ್ನತಂ ವಾಪಿ ಗಣ್ಯತೇ**
**ಶ್ರೇಷ್ಠೇನ ದಶತಾಲೇನ ಮಾನನೀಯಂ ವಿಚಕ್ಷಣೈ: ॥ ೩೪ ॥**
**ಕೇಶಾಂತ ನೇತ್ರಪರ್ಯಂತಂ ಮಧ್ಯಮಂ ಚಾಧಮಂ ಭವೇತ್**
**ಪ್ರಾದುರ್ಭಾವಾದ್ವಾಪಿ ಷೋಽಪಿ ಶಂಕರ: [ರಂ] ಪಂಕಜಾಸನ: ॥ ೩೫ ॥**
**ಸರ್ವೇಷಾ ಮೃಪಿ ದೇವಾನಾಂ ಪ್ರದಕ್ಷಿಣ ಗತಾ ವೃತಮ್**
**ದಕ್ಷಿಣೇಽ ದಕ್ಷಿಣೇ ಶಂಭೂರ್ದಿವ್ಯರೂಪ: ಪಿತಾಮಹ: [ಶಂಭುಂ ದಿವ್ಯರೂಪಂ ಪಿತಾಮಹ]**
**ಅನುಕ್ತಮೇವಮೂಹ್ಯಂ ಯತ್ ವಿಷ್ಟರೇ ಪದ್ಮವಿಷ್ಟರ [ರೇ] ॥ ೩೬ ॥**

**ಮಾನೋಪಮಾನ್ಯೈ: ಪರಿಮಾಣಲಂಬ್ಯೈ: ಪ್ರಮಾಣಮುನ್ಮಾನ ವ [ದ ] ಶೇನ ಬಿಂಬಂ**
**ಯತ್ತದ್ವಿವೃದ್ಧ್ಯೈ ವಿಪದಾಕರೋತ್ಯನ್ಯ ತತ್ಸರ್ವ ಮಾಲೋಚ್ಯ ಸಮೃದ್ಧಿ ಕಾಮ್ಯೈ: ॥ ೩೭ ॥**

ಬ್ರಹ್ಮ ಶಂಕರ ಇವರುಗಳ ಎತ್ತರವು ಆದಿಮೂರ್ತಿಯಷ್ಟೇ ಇರುವುದು, ಎಂದರೆ ಉತ್ತಮ ದಶತಾಲದಲ್ಲಿ ಆದಿಮೂರ್ತಿಯ ಎತ್ತರವು ಪಾದಾದಿ ಉಷ್ಣೀಷ ಪರ್ಯಂತ ಎಷ್ಟು ಇರುವುದೋ ಅಷ್ಟೇ ಎತ್ತರವಾಗಿರುವುದು ಉತ್ತಮ. ಕೇಶಾಂತದಷ್ಟು ಮಾತ್ರವೇ ಇರುವುದು ಮಧ್ಯಮ. ನೇತ್ರಾಂತದಷ್ಟು ಎತ್ತರವಾಗಿದ್ದರೆ ಅದು ಅಧಮ. ಶಂಕರನು ಬಲಗಡೆಯೂ, ಬ್ರಹ್ಮನು ಎಡಗಡೆಯೂ ನಿಂತಿರಬೇಕು. ದಶಾವತಾರಗಳ ನಂತರ ಹೊರಗೆ ಬ್ರಹ್ಮ, ಶಂಕರರು ಇರುತ್ತಾರೆ. ಇತರ ದೇವತೆಗಳು, ಋಷಿಗಳು ಎಲ್ಲರೂ ಸ್ವಾಮಿಯನ್ನು ಪ್ರದಕ್ಷಿಣೆ ಮಾಡುತ್ತಿರುತ್ತಾರೆ.

ಎಲ್ಲೆ ಬ್ರಹ್ಮದೇವನೇ, ಆಸನ ಭಂಗಿಯಲ್ಲಿರುವ ಆದಿಮೂರ್ತಿಯ ಎಲ್ಲಾ ಅಳತೆಗಳನ್ನು ವಿವರವಾಗಿಯೇ ಹೇಳಲಾಗಿದೆ. ಮಾನ, ಉಪಮಾನ, ಪರಿಮಾಣ, ಲಂಬಮಾನ, ಪ್ರಮಾಣ, ಉನ್ಮಾನ, ಮುಂತಾದುವನ್ನು ಅನುಸರಿಸಿ ರೂಪಿಸಿ ಮಾಡಿರುವ ಬಿಂಬಗಳು ಮಾತ್ರವೇ ಕ್ಷೇಮವನ್ನು, ಶುಭವನ್ನು ಉಂಟುಮಾಡಬಲ್ಲವು. ಹಾಗೆ ಶಾಸ್ತ್ರೋಕ್ತ ಮಾನಗಳನ್ನು ಅನುಸರಿಸದೆ ಇದ್ದ ಪಕ್ಷದಲ್ಲಿ ಅದರಿಂದ ಖಚಿತವಾಗಿ ಆಪತ್ತು ಉಂಟಾಗುತ್ತದೆ. ಆದ್ದರಿಂದ ಅರಿತು ಚೆನ್ನಾಗಿ ಯೋಚಿಸಿ ಮೂರ್ತಿಗಳನ್ನು ಶಾಸ್ತ್ರವಿಧಿಯನ್ನು ಅನುಸರಿಸಿ ನಿರ್ಮಿಸಬೇಕು. ಆದ್ದರಿಂದ ಕ್ಷೇಮ ಸಮೃದ್ಧಿ ಕಾಮರಾಗಿರುವ ಯಜಮಾನ, ಭಕ್ತ ಮುಂತಾದವರೂ ಶಾಸ್ತ್ರೋಕ್ತ ಪ್ರಮಾಣಾನುಸಾರ ನಿರ್ಮಿತವಾಗಿರುವ ಬೇರಗಳನ್ನೇ ಪೂಜಿಸಬೇಕು. ಈ ರೀತಿಯಾಗಿ ಶಾಸ್ತ್ರಾನುಸಾರ ಪ್ರತಿಮಾ ನಿರ್ಮಾಣವನ್ನು ಮಾಡುವ ಶಿಲ್ಪಿಗೂ ಒಳಿತಾಗುತ್ತದೆ.

## *ವಿಶೇಷ ವಿವರ*

ಜಗತ್ತಿನ ಸಂಹಾರಕನಾಗಿ ಮತ್ತು ಜಗತ್ತಿನ ಆದ್ಯದೇವನಾಗಿ ಅಂಗೀಕರಿಸಲ್ಪಟ್ಟಿರುವ ರುದ್ರ - ಶಿವನೊಂದಿಗೆ ಭಾರತದಾದ್ಯಂತ ಅಂಗೀಕೃತನಾಗಿರುವ ಹಾಗೂ ಭಕ್ತಿ ಭಾವದಿಂದ ಪುಜಿಸಲ್ಪಡುತ್ತಿರುವ ಇನ್ನೊಬ್ಬ ಆದಿದೇವನು ವಿಷ್ಣು. ವೈದಿಕ ದೇವತಾ ವಿಜ್ಞಾನ ಕಲ್ಪದಲ್ಲಿ ನಿರ್ದಿಷ್ಟವಾಗಿರುವ ದೇವತೆಗಳಲ್ಲಿ ವಿಷ್ಣು ಹಾಗೂ ರುದ್ರ - ಶಿವ ಇವರಿಬ್ಬರು ಸ್ಥಳ, ಕಾಲಗಳ ಬಂಧನಗಳನ್ನು ಅಧಿಗಮಿಸಿ ಶತ ಶತಮಾನಗಳಿಂದಲೂ ಭಾರತೀಯರ ಶ್ರದ್ಧೆ ಭಕ್ತಿಗಳನ್ನು ಏಕ ರೀತಿಯಲ್ಲಿ ಅನಿರ್ಬಂಧಿತವಾಗಿ ಬೆಳಸಿಕೊಂಡು ಬರುತ್ತಿದ್ದಾರೆ. ಇದೇ ಕಾರಣಕ್ಕಾಗಿಯೇ ಕೇವಲ ದೇವತೆಗಳು ಮಾತ್ರವೆಂದು ಅಂಗೀಕರಿಸದೆ ಭಾರತೀಯ ಸಂಸ್ಕೃತಿಯ ಒಂದು ಅವಿಭಾಜ್ಯ ಅಂಗವಾಗಿ ಇವರನ್ನು ಪರಿಗಣಿಸಲಾಗುತ್ತದೆ.

ಭಾರತೀಯ ದೇವತಾ ವಿಜ್ಞಾನದ ಇತಿಹಾಸದಲ್ಲಿ ವಿಷ್ಣು ಮತ್ತು ರುದ್ರ - ಶಿವ ಇಬ್ಬರೂ ಮಾನವಾಕೃತಿ ದೈವೋಪಾಸನದ ಆದ್ಯಪ್ರತೀಕಗಳೆಂದು ಅಂಗೀಕರಿಸಲಾಗಿದೆ. ಈ ದೇವತೆಗಳ ಮಾನವೀಕರಣವು ವೇದಗಳು ವಿಧಿಸಿದ್ದ ಯಜ್ಞಾತ್ಮಕವಾದ ಉಪಾಸನಾ ಪದ್ಧತಿಯು ಹೆಚ್ಚು ಹೆಚ್ಚು ತಂತ್ರ ಬದ್ಧವಾಗಿ ನಿತ್ಯಾಚರಣೆಯಲ್ಲಿ ರೂಢಿಯಲ್ಲಿರಿಸಿಕೊಳ್ಳಲು ಕಠಿಣವಾಗುತ್ತಾ ಬಂದಂತೆಲ್ಲಾ, ಹೇಗೆ ವೇದಗಳಲ್ಲಿ ನಿರ್ದಿಷ್ಟವಾದ ರುದ್ರ - ಶಿವನ ಪರಿವರ್ಧಿತ ಮಾನವೀಯ ರೂಪವು ಶೈವೋಪಾಸನಾ ಪದ್ಧತಿಯ ಮೂಲಕವಾಗಿ ಸಾಕಾರಗೊಂಡಿತೋ, ಅದೇ ರೀತಿಯಾಗಿ

ವಿಷ್ಣುವಿನ ಪರಿವರ್ಧಿತ ಮಾನವೀಯ ರೂಪವು ವೈಷ್ಣವ ಉಪಾಸನೆಯ ಸಂಪ್ರದಾಯಗಳ ಮೂಲಕ ಮುಂದುವರೆಯಿತು.

ವೈದಿಕ ಸಾಹಿತ್ಯದಲ್ಲಿ ನಿರ್ದಿಷ್ಟವಾಗಿರುವಂತೆ ಮೊದಲಿಗೆ ವಿಷ್ಣುವು ಸಾತ್ವತರಿಂದ ಪೂಜಿಸಲ್ಪಡುತ್ತಿದ್ದ. ಬ್ರಾಹ್ಮಣಾದಿಗಳಲ್ಲಿ ನಿರ್ದೇಶಿತವಾದ ಜಗತ್ತಿನ ಸಂಚಲನೆಗೆ ಕಾರಣನಾದ ನಾರಾಯಣ ದೇವನನ್ನು ವಾಸುದೇವನು ಕೂಡಿಕೊಂಡು ವಿಷ್ಣುದೇವನ ಈ ಪರಿವರ್ಧಿತ ನೂತನ ಸ್ವರೂಪವು ಯಶಸ್ವಿಯಾಗಿ ಬಳಕೆಗೆ ಬಂತು. ಪೌರಾಣಿಕ ಸಾಹಿತ್ಯದಲ್ಲಿ ಅನೇಕ ಅವತಾರಗಳ ಕಲ್ಪನೆಯು ಕೂಡಿಕೊಂಡು ವೈಷ್ಣವ ಉಪಾಸನೆಯ ವ್ಯಾಪ್ತಿಯು ಮತ್ತಷ್ಟು ವರ್ಧನೆಗೊಂಡಿತು. ಇದರ ಪ್ರಕಾರ ಕೃಷ್ಣ, ರಾಮ ದಾಶರಥಿ ಮುಂತಾದ ದೇವತಾ ಸಮಾನರಾದ ಪುರುಷರನ್ನು ದೇವತಾ ಅವತಾರಗಳೆಂದು ಸ್ವೀಕರಿಸಿ ಪ್ರಚಾರಕ್ಕೆ ತಂದರು. ಈ ರೀತಿಯಾಗಿ ಋಗ್ವೇದದಲ್ಲಿ ಚತುರ್ಥಶ್ರೇಣಿಯ ದೇವನಾಗಿ ಉಲ್ಲೇಖಿತನಾಗಿರುವ ವಿಷ್ಣುವು ಪೌರಾಣಿಕಯುಗಕ್ಕೆ ಸರ್ವಶ್ರೇಷ್ಠ ದೇವತೆಯಾಗಿ ಜನಪ್ರಿಯನಾದ.

ವೇದಗಳಲ್ಲಿ ಉಕ್ತರಾಗಿರುವ ಇಂದ್ರ, ವರುಣ, ಅಗ್ನಿ ಇತ್ಯಾದಿ ದೇವತೆಗಳ ತುಲನೆಗಳಲ್ಲಿ ವಿಷ್ಣುವು ತೀರಾ ಕನಿಷ್ಠ ಸ್ಥಾನವನ್ನು ಹೊಂದಿರುವ ದೇವನೆಂಬುದು ಸ್ಪಷ್ಟವಾಗಿ ಭಾಸವಾಗುತ್ತದೆ. ಋಗ್ವೇದದಲ್ಲಿ ಕೇವಲ ಐದೇ ಸೂಕ್ತಗಳು ವಿಷ್ಣುವಿಗೆ ಸೇರಿವೆ. ಈ ಸೂಕ್ತಗಳಲ್ಲೂ ಈತನಿಗೆ ಸ್ವತಂತ್ರ ಅಸ್ತಿತ್ವವಾಗಲಿ, ಈತನ ಪರಾಕ್ರಮವಾಗಲಿ ವಿವರಿತವಾಗಿಲ್ಲ. ಸೂರ್ಯನ ಪ್ರತಿರೂಪ ಎಂದೇ ಹೇಳಲಾಗಿದೆ. ಇಂದ್ರನ ಸಹಾಯಕ ಎಂಬ ವಿವರಣೆಯೂ ದೊರೆಯುತ್ತದೆ.

ಈತನನ್ನು ಬೃಹದಾಕಾರದ ಶರೀರವುಳ್ಳ ನವಯುವಕನೆಂದು ಋಗ್ವೇದದಲ್ಲಿ ವರ್ಣಿಸಲಾಗಿದೆ. ಈತನನ್ನು ಉರುಗಾಯ (ವಿಶಾಲವಾದ ಪಾದಗಳನ್ನು ಇರಿಸುವವನು) ಮತ್ತು ಊರು ಕ್ರಮ (ಅಗಲವಾಗಿ ಹೆಜ್ಜೆ ಇರಿಸುವವನು) ಎಂದು ಹೇಳಲಾಗಿದೆ. ತನ್ನ ಹೆಜ್ಜೆಗಳಿಂದ ಈತನು ವಿಶ್ವವನ್ನೆಲ್ಲಾ ಅಳೆಯುತ್ತಾನೆ ಎಂಬ ಉಕ್ತಿಯೂ ಅಲ್ಲಿ ದೊರೆಯುತ್ತದೆ. ತನ್ನ ಮೂರು ಹೆಜ್ಜೆಗಳಿಂದ ವಿಷ್ಣುವು ಪಾರ್ಥಿವ ಸ್ಥಾನಗಳನ್ನೆಲ್ಲಾ (ಪೃಥ್ವಿಯನ್ನೆಲ್ಲಾ) ಅಳೆದ ಎಂದು ಋಗ್ವೇದ ಹೇಳುತ್ತದೆ. ಇವುಗಳಲ್ಲಿ ಎರಡು ಹೆಜ್ಜೆಗಳು ಅಥವ ಸ್ಥಾನಗಳು ಮಾತ್ರವೇ ಮನುಷ್ಯರಿಗೆ ಕಾಣಿಸುತ್ತವೆ. ವಿಷ್ಣುವಿನ ಮೂರನೆಯ ಹೆಜ್ಜೆಯು ಹೊರಗೆ ಇದೆ. ಅಷ್ಟು ಮಾತ್ರವಲ್ಲ ಪಕ್ಷಿಗಳ ಹಾರಾಟದಿಂದಲೂ ಹೊರಗೆ ಇದೆ (ಋ ೧ : ೧೫೫ :೫). ವಿಷ್ಣುವಿನ ಈ ಉಚ್ಚತಮ ಸ್ಥಾನವನ್ನು (ಪರಮಂ ಪದಂ) ಅಗ್ನಿಯ ಉಚ್ಚತಮ ಸ್ಥಾನಕ್ಕೆ ಸಮಾನವೆಂದು ಅಂಗೀಕರಿಸಲಾಗಿದೆ. ಅಗ್ನಿಯು ಅಲ್ಲಿ ವಿಷ್ಣುವಿನ ರಹಸ್ಯಾತ್ಮಕ ಗೋವು (ಮೇಘ) ಗಳನ್ನು ರಕ್ಷಿಸುತ್ತಾನೆ (ಋ ೫ : ೩೩).

ಅಲ್ಲಿ ವಿಷ್ಣುವಿನ ನಿವಾಸವಿರುತ್ತದೆ. ಪುಣ್ಯಾತ್ಮರು ಅಲ್ಲಿ ಆನಂದದಿಂದ ಇರುತ್ತಾರೆ. ಅಲ್ಲಿ ಮಧುವಿನ ಒಂದು ಭಾವಿ ಇದೆ. ದೇವತೆಗಳು ಬಹು ಸುಖವಾಗಿರುತ್ತಾರೆ (ಋ ೧ : ೧೫೪: ೫ ; ೮ : ೨೯). ಈ ತೇಜಸ್ವೀ ನಿವಾಸಸ್ಥಾನದಲ್ಲಿ ಇಂದ್ರ ಮತ್ತು ವಿಷ್ಣುವಿನ ನಿವಾಸ ಇರುತ್ತದೆ. ಆ ಲೋಕವನ್ನು ಸೇರುವುದು ಪ್ರತಿಯೊಬ್ಬ ಸಾಧಕನ ಗುರಿಯೂ ಆಗಿರುತ್ತದೆ. ಋಗ್ವೇದಲ್ಲಿ ಈತನನ್ನು ತ್ರಿಷಧಸ್ಥ ಎಂದು ಹೇಳಿ (ಋ ೧ : ೧೫೬ : ೫) ಮೂರು ನಿವಾಸ ಸ್ಥಾನಗಳುಳ್ಳವನು ಎಂದು ಹೇಳಲಾಗಿದೆ. ಅನ್ಯತ್ರ ಈತನನ್ನು ಬೆಟ್ಟಗಳಲ್ಲಿ ಇರುವವನು

(ಗಿರಿಕ್ಷಿತ್) ಮತ್ತು ಬೆಟ್ಟಗಳಲ್ಲಿರಲು ಇಚ್ಛಿಸುವವನು (ಗಿರಿಷ್ಠಾ) ಎಂದು ಹೇಳಲಾಗಿದೆ (ಋ ೧ : ೧೫೪).

ಇಂದ್ರನು ವಿಷ್ಣುವನ್ನು ಜೊತೆಯಲ್ಲಿರಿಸಿಕೊಂಡು ವೃತ್ರನ ವಧೆಯನ್ನು ಮಾಡಿದ (ಋ ೬ : ೨೦). ಇವರಿಬ್ಬರೂ ಸೇರಿ ದಾಸರನ್ನು ಸೋಲಿಸಿದರು. ಶಂಬರನ ೯೯ ದುರ್ಗಗಳನ್ನು ನಾಶಮಾಡಿದರು. ಹಾಗೂ ವರ್ಚಿನ್‌ನ ಗುಂಪಿನ ಮೇಲೆ ಜಯವನ್ನು ಗಳಿಸಿದರು (ಋ ೭ : ೯೭). ವಿಷ್ಣುವಿನ ಬಹು ದೊಡ್ಡ ಪರಾಕ್ರಮ - ಇದನ್ನು ವಿಕ್ರಮ ಎನ್ನಲಾಗಿದೆ - ತ್ರಿಪಾದ. ಸಮಸ್ತ ಪೃಥ್ವಿ, ದ್ಯುಲೋಕ ಮತ್ತು ಅಂತರಿಕ್ಷವನ್ನು ಕೇವಲ ಮೂರೇ ಹೆಜ್ಜೆಗಳಿಂದ ಆವರಿಸಿದ್ದು (ಋ ೧ : ೨೨ : ೧೭ - ೧೮). ಯಾಸ್ಕರ ಪೂರ್ವಾಚಾರ್ಯರು ಮತ್ತು ಬಹು ಮಂದಿ ವಿದ್ವಾಂಸರು ಇದನ್ನು ಸೂರ್ಯೋದಯ, ಮಧ್ಯಾಹ್ನ ಮತ್ತು ಸೂರ್ಯಾಸ್ತವೆಂದೇ ಭಾವಿಸುತ್ತಾರೆ. ಆದರೆ ಇದರಲ್ಲಿ ವಿಷ್ಣುವಿನ ಪರಮಂ ಪದಂ ಎಂದು ಹೇಳಲಾಗುವ ಅತ್ಯುಚ್ಛವಾದ ಮೂರನೆಯ ಪಾದಕ್ಕೆ ಸ್ಪಷ್ಟೀಕರಣ ದೊರೆಯುವುದಿಲ್ಲ. ಈ ಮೂರನೆಯ ಪಾದವು ಸೂರ್ಯಾಸ್ತ ಎಂಬುದಾಗಿ ಅಂಗೀಕರಿಸುವುದು ಅವಾಸ್ತವವೆನಿಸುತ್ತದೆ. ಇದನ್ನೇ ಶಾಕಾಪೂಣಿ ಮುಂತಾದ ಭಾರತೀಯ ಆಚಾರ್ಯರೂ ಹೇಳಿದ್ದಾರೆ. ಇದೇ ಕಾರಣದಿಂದ ವಿಷ್ಣು ಸೌರದೇವನೇ ಆಗಿದ್ದರೂ ಆತನ ಮೂರು ಹೆಜ್ಜೆಗಳ ಅರ್ಥವು ಸೂರ್ಯೋದಯ, ಮಧ್ಯಾಹ್ನ, ಸೂರ್ಯಾಸ್ತಗಳಲ್ಲದೆ ಪೃಥ್ವಿ, ಅಂತರಿಕ್ಷ ಮತ್ತು ಆಕಾಶಗಳನ್ನು ವಿಷ್ಣುವು ವ್ಯಾಪಿಸಿದ ನೆಂಬುದರ ವಿವರಣೆ ಇದಾಗಿರುತ್ತದೆ. ಹೀಗೆ ಅನ್ವಯಿಸುವುದರಿಂದ ವಿಷ್ಣುವಿನ ಪರಮಪದವು ಸ್ವರ್ಗ ಲೋಕದೊಂದಿಗೆ ಸಮೀಕೃತಗೊಳಿಸುವುದು ಸಾಧ್ಯವಾಗುತ್ತದೆ. ಪರಮಪದ ಇತರ ವಿವರಣೆಗಳೊಂದಿಗೆ ಈ ರೀತಿಯ ಸಮನ್ವಯದಿಂದ ಹೋಲಿಕೆ ಹೆಚ್ಚು ನಿಖರವಾಗುತ್ತದೆ.

ವಿಷ್ಣುವಿನ ಈ ಪರಾಕ್ರಮದೊಂದಿಗೆ ವಿಷ್ಣು ಅತ್ಯಂತ ಗತಿಮಾನ, ದ್ರುತಗಾಮಿ ಮತ್ತು ತೇಜಸ್ವಿಯೂ ಆಗಿದ್ದಾನೆ. ಈತನು ಅಗ್ನಿ, ಸೋಮ, ಸೂರ್ಯ, ಉಷಸ್‌ಗಳಂತೆಯೇ ವಿಶ್ವದ ವಿವಿಧ ನಿಯಮಗಳನ್ನು ಪಾಲಿಸುವ ಹಾಗೂ ಆ ನಿಯಮಗಳ ಪ್ರೇರಕರನೂ ಆಗಿದ್ದಾನೆ. ಇದೇ ಕಾರಣದಿಂದಲೇ ಈತನನ್ನು ಕ್ಷಿಪ್ರ, ಏಷ, ಏವಯಾ, ಸ್ವದರ್ಶ, ವಿಭೂತದ್ಯುಮ್ನ, ಎವಯಾವನ್ ಎಂದು ಹೇಳಲಾಗಿದೆ (ಋ ೧ : ೧೫೫ : ೫ , ೧೫೬ : ೧).

**ಆಪೋವಾ ಇದಮಗ್ರೇ ಸಲಿಲಮಾಸೀತ್ತಸ್ಮಿನ್ ಪ್ರಜಾಪತಿರ್ವಾಯುರ್ಭೂತ್ವಾ ಚರತ್ಸ ಇಮಾ ಪಶ್ಯತ್ತಾಂ ವರಾಹೋ ಭೂತ್ವಾ ಹರತ್ತಾಂ ವಿಶ್ವಕರ್ಮಾ ಭೂತ್ವಾ ವ್ಯಮಾರ್ಟ್ಸಾ ಪ್ರಥತ ಸಾಪೃಥಿವ್ಯ ಭವತ್ತತ್‌ಪೃಥಿವ್ಯೈ ಪೃಥಿವಿತ್ವಂ ತಸ್ಯಾಮಶ್ರಾಮ್ಯ ತ್ಪ್ರಜಾಪತಿ ಸ್ಸದೇವಾನಸೃಜತ ವಸೂನ್ ರುದ್ರಾನಾದಿತ್ಯಾನ್ ತೇ ದೇವಾಃ ಪ್ರಜಾಪತಿ ಮಬ್ರುವನ್ ಪ್ರಜಾಯಾ ಮಹಾ ಇತಿ ಸೋಽಬ್ರವೀತ್॥**

(ಯಜುರ್ವೇದ ಕಾಂ ೮ : ಪ್ರ ೧ : ಅ ೫)

ಇದಕ್ಕೆ ಸಾಯಣ ಭಾಷ್ಯಾನುಸಾರ ತಾತ್ಪರ್ಯ ಇಂತಿರುತ್ತದೆ : ಈ ಕಣ್ಣುಗಳಿಗೆ ಕಾಣಿಸುವಂತಹ ನದಿ ಸಾಗರಾದಿಗಳು ಜಗತ್ತಿನ ಸೃಷ್ಟಿಗೆ ಮೊದಲು ನೀರಿನ ರೂಪದಲ್ಲಿಯೇ ಇತ್ತು. ಆ ಜಲದಲ್ಲಿ ವಿಶ್ವಕರ್ಮ ಪ್ರಜಾಪತಿ ಸ್ವಶರೀರದಲ್ಲಿ ವಾಸಿಸುವ ಅವಕಾಶವಿರಲಿಲ್ಲ. ಏಕೆಂದರೆ ಈತನು ನಿರೂಪನು ನಿರ್ಗುಣನೂ ಆದ ಪರಮ ಪರಮೇಶ್ವರನು. ಆದ್ದರಿಂದ ವಾಯುರೂಪದಲ್ಲಿ ನೀರಿನಲ್ಲೆಲ್ಲಾ ಸಂಚರಿಸಿದ. ಹೀಗೆ ಜನಿಸಿ ಜಲಮಗ್ನವಾಗಿದ್ದ

ಭೂಮಿಯನ್ನು ವರಾಹಮೂರ್ತಿಯಾಗಿ ತನ್ನ ಕೋರೆಯಿಂದ ಭೂಮಿಯನ್ನು ಹೊರಕ್ಕೆ ತೆಗೆದು ಉದ್ಧರಿಸಿ, ವರಾಹ ರೂಪವನ್ನು ಉಪಸಂಹಾರಗೊಳಿಸಿ ವಿಶ್ವಕರ್ಮರೂಪವನ್ನು ಧರಿಸಿ ಭೂದೇವಿಯ ಅಂಗಾಂಗಗಳಿಂದ ನೀರನ್ನು ಒರೆಸಿ ಭೂಮಿಯನ್ನು ವಿಸ್ತಾರಗೊಳಿಸಿದನು. ನಂತರ ಕಾಣಿಸುವ ಈ ಭೂಮಿಯು ಸಕಲ ಪ್ರಾಣಿಗಳಿಗೆ ಆಧಾರವಾಗುವಂತೆ ನೀರನ್ನು ಪ್ರತ್ಯೇಕಿಸಿದ್ದರಿಂದ ಭೂಮಿಗೆ ಪೃಥ್ವೀ ಎಂಬ ಹೆಸರಾಯಿತು. ವಿಶ್ವಕರ್ಮ ಪ್ರಜಾಪತಿಯು (ವಿಶ್ವಕರ್ಮ ಮತ್ತು ಪ್ರಜಾಪತಿ ಒಂದೇ ಶಕ್ತಿಯ ಭಿನ್ನ ರೂಪಗಳೆಂದು ಸಾಯಣರು ಈ ಮೊದಲೇ ಹೇಳಿದ್ದಾರೆ) ಪೃಥ್ವೀ ಭೂತದಲ್ಲಿ ಅಧಿವಾಸವನ್ನು ನಡೆಸಿ, ತಪಸ್ಸು ಮಾಡಿ, ಅಷ್ಟವಸುಗಳನ್ನು, ಏಕಾದಶ ರುದ್ರರನ್ನು, ದ್ವಾದಶ ಆದಿತ್ಯರನ್ನೂ ಸೃಷ್ಟಿಮಾಡಿದ. ಹೀಗೆ ಜಗದೀಶ್ವರನಾದ ವಿಶ್ವಕರ್ಮನು ಸರ್ವಪ್ರಪಂಚಗಳ ಸೃಷ್ಟಿಕರ್ತನಾದನು. ಸ್ವಕೀಯ ತೇಜಃ ಪ್ರತಿಬಿಂಬ ಮೂರ್ತಿಯನ್ನು ಲೋಕ ಸರ್ಜನಾಕಲಾತಿರೇಕನಿಗೆ ತ್ವಷ್ಟ್ಯನಾಮದ ಪ್ರತ್ಯೇಕ ಪುತ್ರ ರೂಪವಾಗಿ ವ್ಯಕ್ತಗೊಂಡ. ಆದ್ದರಿಂದಲೇ ವಿಶ್ವಕರ್ಮಣ ಸ್ವಮವರ್ತತಾದಿ ತಸ್ಯ ತ್ವಷ್ಟಾವಿದಧದ್ರೂಪಮೇತಿ ಎಂಬ ಯಜುರಾರಣ್ಯಕದ ವಚನನ್ನು ಜಗತ್ಕಾರಣ ಕರ್ತನಾದ ವಿಶ್ವಕರ್ಮನಿಂದ ಸಮಸ್ತ ಜಗತ್ತು ಸೃಷ್ಟಿಗೊಂಡಿತು, ಆ ವಿರಾಟ್‌ಮೂರ್ತಿಯು ಶಕ್ತಿಯಿಂದ ನಾನಾ ರೂಪಗಳನ್ನು ನಿರ್ಮಿಸುತ್ತಾ ತ್ವಷ್ಟ್ರು ಪ್ರವರ್ತಿಸುತ್ತಿದ್ದಾನೆ ಎಂದು ಭಾಷ್ಯಾಚಾರ್ಯರು ವಿವರಿಸಿರುವುದು.

**ತ್ವಷ್ಟಾ ದುಹಿತ್ರೇ ವಹಂತು ಕೃಣೋತೀತೀದಂ ವಿಶ್ವಂಭುವನಂ ಸಮೇತಿ**

**ಯಮಸ್ಯಮಾತಾಪರ್ಯೂಹ್ಯ ಮಾನಾಮ ಹೋಜಯಾ ವಿವಸ್ವತೋ ಸನಾಶ**

ತ್ವಷ್ಟ್ರುವಿಶ್ವಕರ್ಮನು ತನ್ನ ಮಗಳ ಕ್ಷೇಮಕ್ಕಾಗಿ ಅಹೋ ರಾತ್ರಿಗಳು ಕರ್ತವ್ಯನಿಷ್ಠನಾಗಿದ್ದ ಸೂರ್ಯನನ್ನು ಮರದಂತೆ ತರಗಣೆಯಲ್ಲಿ ಸಿಲುಕಿಸಿ ಅವನ ಸುಡುವ ಕಿರಣಗಳ ಶಕ್ತಿಯನ್ನು ಕಡಿಮೆಮಾಡಿದ. ಹೀಗೆ ತ್ವಷ್ಟ್ರುವು ಸೂರ್ಯನ ಶಾಖವನ್ನು ಕಡಿಮೆಮಾಡಿದ್ದು ಲೋಕಕ್ಕೆಲ್ಲಾ ಗೊತ್ತಿದೆ. ಸೂರ್ಯನ ಹೆಂಡತಿಯು, ಯಮನ ತಾಯಿಯೂ ಆದ ಸಂಜ್ಞಾದೇವಿಯು ಗಂಡನ ಶಾಖವನ್ನು ತಡೆಯಲಾರದೆ, ಕಾಣೆಸದಾದಾಗ ಈ ಕಾರ್ಯವು ನಡೆಯಿತು ಎಂದು ಹೇಳಲಾಗಿದೆ.

ಇದಕ್ಕೆ ಪುರಾಣ ಕಥೆಯಲ್ಲಿ ಸಂಜ್ಞಾ ಸೂರ್ಯರ ವಿವಾಹದ ಬಗ್ಗೆ ವಿವರ ಹೇಳಲಾಗುತ್ತದೆ. ಇದನ್ನು ವಿಷ್ಣು ಪುರಾಣವು ಹೀಗೆ ವಿವರಿಸುತ್ತದೆ :

**ಶಾತಿತಂ ತೇಜಸೋಽಕಿಮೇಕಿದ್ಯಕ್ರಿಯತಾಮಿತಿ ಭಾಸ್ಕರ:**

**ತಂ ಚಾಹ ವಿಶ್ವಕರ್ಮಾಣಂ ಸಂಜ್ಞಾಯಾ: ಪಿತರಂ ದ್ವಿಜಂ ||**

**ಸಂವತ್ಸರ ಭ್ರಮತ್ತ್ರಸ್ಯ ವಿಶ್ವಕರ್ಮಾರ ವೇಸ್ತ್ರತ:**

**ತೇಜಸ: ಶಾತನಂ ಚಕ್ರೇ ಸ್ತೂಯಮಾನಸ್ಯ ದೈವತೈ: ||**

ಭಾಸ್ಕರನು ನನ್ನ ತೇಜಸ್ಸನ್ನು ಕಡಿಮೆ ಮಾಡಿ ಎಂದು ಸಂಜ್ಞಾ ಜನಕನನೂ, ಬ್ರಾಹ್ಮಣನೂ ಆದ (ತ್ವಷ್ಟ್ರು) ವಿಶ್ವಕರ್ಮನನ್ನು ಕೇಳಿದಾಗ ಸಂವತ್ಸರ ಚಕ್ರದ ನಿರ್ವಹಣೆಯಿಂದ ದೇವತೆಗಳಿಂದ ಸುತ್ತಿಸಲ್ಪಡುತ್ತಿದ್ದ ಸೂರ್ಯನ ತೇಜಸ್ಸು ಕಡಿಮೆ ಮಾಡಿದ.

ವಿಷ್ಣುರ್ಯೋನಿಕಲ್ಪಯತು, ತ್ವಷ್ಟಾ ರೂಪಾಣಿಗ್‌ಂ ಪಿಂಶತು ಎಂದು ಪ್ರಾರಂಭವಾದ ಈ ಸಹಚರ್ಯವು ನಿಕಟಗೊಂಡು ಆದಿತ್ಯರೊಂದಿಗೆ ಸಂಬಂಧ ಕೂಡಿಸಿತು. ದ್ವಾದಶ ಆದಿತ್ಯರಲ್ಲಿ ತ್ವಷ್ಟ್ರು ಎಂಬುವನೊಬ್ಬ ಉಂಟು. ಹೀಗಾಗಿ ಸೂರ್ಯನ ಸಂಬಂಧವು ವಿಷ್ಣುವಿಗೆ ನಿಕಟಗೊಂಡಿತು.

ವಿಷ್ಣುವಿನ ಸೌರ ಸಂಬಂಧವು ಮೂರು ಲೋಕಗಳನ್ನು ಅಳೆದ ತ್ರಿವಿಕ್ರಮ ಪಾದಗಳಿಂದಲೇ ಪ್ರಾರಂಭವಾಗುತ್ತದೆ. ಪ್ರತ್ಯೇಕವಾದ ನಾಲ್ಕು ಹೆಸರುಗಳನ್ನು (ಋತು) ಧರಿಸುವವನು. ತನ್ನ ತೊಂಬತ್ತು ಅಶ್ವಗಳನ್ನು (ದಿನಗಳನ್ನು) ತಿರುಗುತ್ತಿರುವ ಗಾಲಿಯಂತೆ ಚಲನೆಯಲ್ಲಿರಿಸಿರುವವನು ಎಂಬ ವರ್ಣನೆಯು ಋಗ್ವೇದದಲ್ಲಿ ದೊರೆಯುತ್ತದೆ (ಋ ೧ : ೧೫೫ : ೬). ಇದರಿಂದ ವರ್ಷದ ೩೬೦ ದಿನಗಳನ್ನು ಈತನು ಚಲನೆಯಲ್ಲಿರಿಸುವವನು ಎಂಬುದು ಸ್ಪಷ್ಟವಾಗಿ ಭಾಸವಾಗುತ್ತದೆ.

ಬ್ರಾಹ್ಮಣ ಗ್ರಂಥಗಳಲ್ಲಿ ವಿಷ್ಣುವಿನ ಕತ್ತರಿಸಿದ ಶಿರವೇ ಸೂರ್ಯನಾಗಿರುವಂತೆ ಉಲ್ಲೇಖದೊರೆಯುತ್ತದೆ (ಶತಪಥಬ್ರಾಹ್ಮಣ ೧೪ : ೧ : ೧ : ೧೦). ವಿಷ್ಣುವಿನ ತಲೆ ಕತ್ತರಿಸಿಹೋದ ಪ್ರಸಂಗವು ವಿಷ್ಣುವಿನ ಹಯಗ್ರೀವಾವತಾರಕ್ಕೆ ಕಾರಣವಾಯಿತು. ಈ ಬಗ್ಗೆ ವಿಶ್ವಕರ್ಮ ಸಂಹಿತೆಯಲ್ಲಿ ಈ ವಿವರಣೆ ದೊರೆಯುತ್ತದೆ (ನೋಡಿ ಪುಟ ४೭೨) . - ಈತನ ಕೈಯಲ್ಲಿ ತಿರುಗುವ ಚಕ್ರವು ಸೂರ್ಯನಂತೆಯೇ ಭಾಸವಾಗುತ್ತದೆ (ಋ ೫ : ೬೩). ಈತನ ವಾಹನವಾದ ಗರುಡನಿಗೆ ಗರುತ್ಮತ್, ಸುಪರ್ಣ, ಸೂರ್ಯಪಕ್ಷಿ ಮುಂತಾದ ಅರ್ಥದ ಉಪಾಧಿಗಳು ಇವೆ (ಋ ೧೦ : ೧೪೪ : ४). ವಿಷ್ಣುವಿನ ವಕ್ಷ ಸ್ಥಳದಲ್ಲಿ ಧರಿಸಲ್ಪಡುವ ಕೌಸ್ತುಭಮಣಿ, ಈತನ ಹಸ್ತದಲ್ಲಿ ಧರಿಸಿರುವ ಪದ್ಮ, ಈತನು ತೊಟ್ಟಿರುವ ಪೀತಾಂಬರ, ಈತನ ಕೇಶವ ಮತ್ತು ಹೃಷೀಕೇಶ ಎಂಬ ನಾಮಾಂತರ ಇವೆಲ್ಲಾ ಈತನ ಸೌರ ರೂಪವನ್ನು ಸ್ಪಷ್ಟಗೊಳಿಸುತ್ತವೆ.

ಹಲವು ವಿದ್ವಾಂಸರ ಪ್ರಕಾರ ವಿಷ್ಣುವು ರೂಪುಗೊಂಡಿದ್ದು *ಸೂರ್ಯಪಕ್ಷಿ* ಎಂಬ ಹೆಸರಿನಂದಲೇ. ಋಗ್ವೇದದಲ್ಲಿ ವಿಷ್ಣುವಿನ ಆದ್ಯಸ್ವರೂಪವು ಪ್ರಕಟವಾಗುವುದೇ *ಸುಪರ್ಣ*ದಿಂದ (ಋ ೧೦ : ೧೪೯ : ೩). ವಿಷ್ಣುವಿನ ಶ್ರೀವತ್ಸ, ಕೌಸ್ತುಭ, ಚತುರ್ಭುಜ, ನಾಭಿಕಮಲ ಮುಂತಾದುವೆಲ್ಲಾ ಈತನ ಪಕ್ಷಿ ಸ್ವರೂಪದ ಕಾರಣದಿಂದಲೇ ಈತನಿಗೆ ಸಂಕ್ರಮವಾಗಿರುವ ಗುಣಗಳು.

ವಿಷ್ಣುವಿನ ಭಕ್ತವತ್ಸಲ ಗುಣವು ಅನೇಕ ಬಾರಿ ಋಗ್ವೇದದಲ್ಲಿ ಕಾಣಸಿಗುತ್ತದೆ. ವಿಷ್ಣುವಿನ ಪರಾಕ್ರಮವೆಲ್ಲಾ ಸಂತ್ರಸ್ತರಾಗಿರುವವರಿಗೆ ಒಂದು ನಿರ್ದಿಷ್ಟ ನೆಲೆಯನ್ನು ಒದಗಿಸುವುದು ಮತ್ತು ಲೋಕ ರಕ್ಷಣೆಗಾಗಿಯೇ ಮೀಸಲಾಗಿದೆ. (ಋ. ೬ : ೪೯ : ೧೩, ೭: ೧೦೦, ೧ : ೧೫೫). ಈ ಭಕ್ತವತ್ಸಲತೆಯು ಕಾಲಕ್ರಮದಲ್ಲಿ ವಿಷ್ಣುವಿನ ಅನೇಕ ಅವತಾರಗಳ ಕಲ್ಪನೆಗೆ ಮೂಲ ಕಾರಣವಾಯಿತು. ಈ ಅವತಾರಗಳ ಕಲ್ಪನೆಗೆ ನಾನಾ ರೂಪಧಾರಣೆ ಮಾಡುವ ಶಕ್ತಿಯನ್ನು ಬಳಕೆ ಮಾಡಿಕೊಳ್ಳಲಾಯಿತು (ಋ ೭ : ೧೦೦ : ೯).

ವಿಷ್ಣುವಿನ ಅವತಾರಗಳ ಸ್ಪಷ್ಟ ನಿರ್ದೇಶನವು ಋಗ್ವೇದದಲ್ಲಿ ಇಲ್ಲವಾದರೂ ವಾಮನ ಮತ್ತು ವರಾಹ ಅವತಾರಗಳ ಸೂಚನೆಗಳು ಋಗ್ವೇದದಲ್ಲಿಯೇ ದೊರೆಯುತ್ತವೆ (೧ : ೬೧ : ೭, ೭ : ೭೭ : ೧೦). ಈ ಅವತಾರಗಳ ಕಲ್ಪನೆಯು ಬ್ರಾಹ್ಮಣ ಗ್ರಂಥಗಳಲ್ಲಿ ವಿಕಸಿತಗೊಂಡಿರುವಂತೆ ಸ್ಪಷ್ಟವಾಗಿ ಗೊತ್ತಾಗುತ್ತದೆ.

ಡಾ || ಆರ್. ಎನ್. ದಂಡೇಕರ್ ಅವರ ಪ್ರಕಾರ ವಿಷ್ಣುವು ಸಂಮೃದ್ಧಿ ಸಂತಾನದ ದೇವನಾಗಿ ಋಗ್ವೇದದಲ್ಲಿ ಉಲ್ಲೇಖಿತನಾಗಿದ್ದಾನೆ. ಇಂದ್ರ - ವೃಷಾಕಪಿ ಸೂಕ್ತದಲ್ಲಿ

ನಿರ್ದಿಷ್ಟವಾಗಿರುವ ವೃಷಾಕಪಿಯೇ ವಿಷ್ಣು (ಋ ೧೦ : ೮೬). ಋಗ್ವೇದದಲ್ಲಿ ಬೇರೆಯ ಕಡೆ ವಿಷ್ಣುವನ್ನು ಶಿಪಿವಿಷ್ಟಾ (ಗೂಢವಾದ ರೂಪವನ್ನು ಧರಿಸುವವನು) ಎಂದು ಹೇಳಲಾಗಿದೆ. ನಿನ್ನ ರೂಪವನ್ನು ನಮ್ಮಿಂದ ಗುಪ್ತವಾಗಿರಿಸ ಬೇಡವೆಂದು ವಿಷ್ಣುವನ್ನು ಕುರಿತ ಪ್ರಾರ್ಥನೆ ಇದೆ (ಋ. ೭ : ೧೦೦ : ೬). ಈತನು ಭ್ರೂಣಗಳ ರಕ್ಷಕನಾಗಿದ್ದಾನೆ. ಗರ್ಭಾದಾನಕ್ಕಾಗಿ ಅನ್ಯ ದೇವತೆಗಳೊಂದಿಗೆ ಈತನನ್ನೂ ಆಹ್ವಾನಿಸಲಾಗಿದೆ (ಋ ೭ : ೩೬). ಅತಿ ಸುಂದರ ಬಾಲಕನನ್ನು ಗರ್ಭದಲ್ಲಿರಿಸಲು ಈತನನ್ನು ಪ್ರಾರ್ಥಿಸಲಾಗಿದೆ.

ವಿಷ್ಣು ಶಬ್ದದ ಮೂಲವು ವಿಷ್ (ಸತತವಾಗಿ ಕ್ರಿಯಾಶೀಲ ನಾಗಿರುವುದು) ಎಂಬುದಾಗಿ ಅಂಗೀಕರಿಸಲಾಗಿದೆ. ಮ್ಯಾಕ್ಡೊನೆಲ್, ಶ್ರೇಡರ್ ಇವರ ಪ್ರಕಾರ ಸದಾ ಕ್ರಿಯಾತ್ಮಕವಾಗಿರುವ ಸೌರರೂಪದ ವಿಷ್ಣುವಿಗೆ ಇದು ಸಾರ್ಥಕವಾದ ನಾಮಧೇಯವೆನ್ನಲಾಗಿದೆ. ಇತರ ವಿದ್ವಾಂಸರ ಪ್ರಕಾರ ಇದು ವಿಶ್ (ಎಂದರೆ ವ್ಯಾಪಕಗೊಳ್ಳುವ ತತ್ತ್ವ) ಎಂದು ಅಂಗೀಕರಿಸಲಾಗುತ್ತದೆ. ವಿಶ್ವದ ಉತ್ಪತ್ತಿಯ ನಂತರ ಅದನ್ನು ವ್ಯಾಪನಗೊಳಿಸಿದ್ದರಿಂದಲೇ ಈತನು ವಿಷ್ಣುವಾದ ಎಂದು ಅವರು ನಂಬುತ್ತಾರೆ. ಪೌರಾಣಿಕ ಸಾಹಿತ್ಯದಲ್ಲೂ ಇದೇ ಅರ್ಥವನ್ನೇ ಗ್ರಹಿಸಲಾಗಿದೆ. ವಿಷ್ಣು ಸಹಸ್ರನಾಮದ ಟೀಕೆಯಲ್ಲಿ **ಚರಾಚರೇಷು ಭೂತೇಷು ವೇಶನಾತ್ ವಿಷ್ಣುರುಚ್ಯತೇ** ಎಂದೇ ವಿವರಿಸಲಾಗಿದೆ. ಡಾ|| ಆರ್. ಎನ್. ದಂಡೇಕರ್ ಅವರು 'ವಿ+ಸ್ತು ಎಂಬುದು ವಿಷ್ಣುವಿನ ಹೆಸರಿನ ಮೂಲರೂಪ. ಆದ್ದರಿಂದ ಇದು ಗಾಳಿಯಲ್ಲಿ ಹಾರುವ ಪಕ್ಷಿಯತ್ತ ಬೊಟ್ಟುಮಾಡಿ ತೋರಿಸುತ್ತದೆ ' ಎಂದು ಹೇಳುತ್ತಾರೆ.

ಋಗ್ವೇದದಲ್ಲಿ ಕನಿಷ್ಠ ಶ್ರೇಣಿಯ ದೇವನೆಂದು ವಿವರಿತನಾಗಿರುವ ವಿಷ್ಣುವು ಬ್ರಾಹ್ಮಣ ಗ್ರಂಥಗಳಲ್ಲಿ ಸರ್ವಶ್ರೇಷ್ಠನೆಂದು ವ್ಯಾಪಕರೀತಿಯಲ್ಲಿ ಅಂಗೀಕೃತವಾಗಿರುವುದು ಸ್ಪಷ್ಟವಾಗುತ್ತದೆ (ಶತಪಥ ಬ್ರಾಹ್ಮಣ ೧೪ : ೧ : ೧ : ೫).

ಯಜ್ಞ ವಿಧಿಯಲ್ಲಿ ಸರ್ವಶ್ರೇಷ್ಠ ದೇವನು ವಿಷ್ಣು ಹಾಗೂ ಕನಿಷ್ಠನಾದವನು ಅಗ್ನಿ ಎಂಬ ಸ್ಪಷ್ಟ ನಿರ್ದೇಶನವು ನಮಗೆ ದೊರೆಯುತ್ತದೆ -

**ಅಗ್ನಿರ್ವೈ ದೇವಾನಾಮವಮೋ ವಿಷ್ಣು: ಪರಮಃ**
**ತದಂತರೇಣ ಸರ್ವಾ: ಅನ್ಯ ದೇವತಾ : ||** (ಐತರೇಯ ಬ್ರಾಹ್ಮಣ ೧ : ೧)

ಅಥರ್ವವೇದದಲ್ಲಿ ಯಜ್ಞದಲ್ಲಿ ಶಾಖವನ್ನು ಕೊಡಲು ವಿಷ್ಣುವನ್ನು ಸ್ತುತಿಸಲಾಗಿದೆ. ಬ್ರಾಹ್ಮಣಗಳಲ್ಲಿ ವಿಷ್ಣುವಿನ ಮೂರು ಹೆಜ್ಜೆಗಳು ಪೃಥ್ವಿಯಿಂದ ಪ್ರಾರಂಭಗೊಂಡು ದ್ಯುಲೋಕದಲ್ಲಿ ಸಮಾಪ್ತಗೊಳ್ಳುವುದಾಗಿ ಹೇಳಲಾಗಿದೆ. ವಿಷ್ಣುವಿನ ಪರಮಪದವನ್ನು ಮನುಷ್ಯರಾದವರಿಗೆ ಅಂತಿಮ ಸ್ಥಾನ ಹಾಗೂ ಶರಣಾಗತರಿಗೆ ಸುರಕ್ಷಿತ ತಾಣವೆಂದು ಹೇಳಲಾಗಿದೆ.

ಬ್ರಾಹ್ಮಣಗಳ ಈ ಹೇಳಿಕೆಗಳಿಂದ ಆ ಕಾಲದಲ್ಲಿ ವಿಷ್ಣುವು ಸರ್ವಶ್ರೇಷ್ಠದೇವತೆಯಾಗಿ ಅಂಗೀಕೃತವಾಗಿದ್ದ ಎಂಬುದು ಖಚಿತವಾಗುತ್ತದೆ. ಈ ಶ್ರೇಷ್ಠತೆಯ ಸಿದ್ಧಿಗಾಗಿ ಬಗೆಬಗೆಯ ಕಥೆಗಳನ್ನು ಆ ಗ್ರಂಥಗಳಲ್ಲಿ ಸೇರ್ಪಡೆಮಾಡಲಾಗಿದೆ. ಅವುಗಳಲ್ಲಿ ಈ ಎರಡು ಬಹು ಪ್ರಮುಖವಾದುವು :

ಒಮ್ಮೆದೇವತೆಗಳು ಐಶ್ವರ್ಯ ಪ್ರಾಪ್ತಿಗಾಗಿ ಒಂದು ಯಜ್ಞವನ್ನು ಮಾಡಿದರು. ಆಗ ಯಾವ ದೇವ ಯಜ್ಞದ ಸಮಾಪ್ತಿಯನ್ನು ಮೊದಲಿಗೆ ಯಶಸ್ವಿಯಾಗಿ ತಲುಪುತ್ತಾನೆಯೋ ಆ

ದೇವನು ಶ್ರೇಷ್ಠನು ಎಂದು ಅಂಗೀಕರಿಸಲು ತೀರ್ಮಾನಿಸಲಾಯಿತು. ಆಗ ಯಜ್ಞ ಸ್ವರೂಪಿಯಾದ ವಿಷ್ಣುವು ಎಲ್ಲಾ ದೇವತೆಗಳಿಗಿಂತಲೂ ಮೊದಲು ಯಜ್ಞದ ಸಮಾಪ್ತಿಯನ್ನು ತಲುಪಿದನು. ಆದ್ದರಿಂದ ಈತನೇ ಶ್ರೇಷ್ಠ ದೇವನಾದ. ವಿಷ್ಣುವಿನ ಧನುಸ್ಸಿನ ಹುರಿ ಮುರಿದಿದ್ದರಿಂದ ಈತನ ತಲೆಯು ಕತ್ತರಿಸಿತು. ಆ ತಲೆಯು ಸೂರ್ಯಗೋಳವಾಗಿ ಆಕಾಶದಲ್ಲಿ ಪ್ರಜ್ವಲಿಸತೊಡಗಿತು (ಶ. ಬ್ರಾ. ೧೪ : ೧ : ೧ : ೧೦). ಆ ತಲೆಯನ್ನು ಅಶ್ವಿನಿ ದೇವತೆಗಳು ಮತ್ತೆ ಸೇರಿಸಿದರು. ವಿಷ್ಣು ದ್ಯುಲೋಕದ ಒಡೆಯನಾದ (ತೈತ್ತಿರೀಯ ಆರಣ್ಯಕ ೯ : ೫ : ೧ : ೧ - ೭).

ಒಮ್ಮೆ ದೇವಾಸುರರ ಸಂಗ್ರಾಮದಲ್ಲಿ ದೇವತೆಗಳು ಸೋತರು. ಆಗ ಅಸುರರು ಪೃಥ್ವಿಯನ್ನು ವಿಭಜಿಸಲು ಪ್ರಾರಂಭಿಸಿದರು. ವಾಮನಾಕೃತಿಯ ವಿಷ್ಣುವಿನೊಂದಿಗೆ ದೇವತೆಗಳು ಅಸುರರ ಬಳಿಗೆ ಹೋಗಿ ಭೂಮಿಯ ಒಂದು ಭಾಗವನ್ನು ಬೇಡಿದರು. ಕೊಡಲು ಅವರು ಅಂಗೀಕರಿಸಿದ ಕೂಡಲೇ ವಿಷ್ಣುವು ತ್ರಿವಿಕ್ರಮ ರೂಪವನ್ನು ಧರಿಸಿ ತನ್ನ ಮೂರೇ ಹೆಜ್ಜೆಗಳಿಂದ ಮೂರು ಲೋಕಗಳನ್ನು, ವೇದ ಮತ್ತು ವಾಕ್ಕನ್ನು ಆಳತೆಮಾಡಿದ (ಶ. ಬ್ರಾ ೧ : ೨ : ೫, ಮತ್ತು ಐ. ಬ್ರಾ ೬ : ೧೫).

ವಾಮನಾವತಾರದೊಂದಿಗೆ ವರಾಹಾವತಾರದ ನಿರ್ದೇಶನವೂ ಕೂಡ ಬ್ರಾಹ್ಮಣ ಗ್ರಂಥಗಳಲ್ಲಿ ದೊರೆಯುತ್ತದೆ. ನೀರಿನಿಂದ ಭೂಮಿಯನ್ನು ಹೊರತಂದು ಉದ್ಧರಿಸಿದ ಪ್ರಸಂಗದ ವಿವರಣೆ ದೊರೆಯುತ್ತದೆ (ಶ. ಬ್ರಾ ೨೪ : ೨ : ೨). ವರಾಹದ ಹೆಸರು ಎಮುಷ ಎಂದು ಹೇಳಲಾಗಿದೆ. ಇದೇ ಅಲ್ಲದೆ ಇನ್ನೂ ಎರಡು ಅವತಾರಗಳ ಉಲ್ಲೇಖವಿದ್ದರೂ ಅವು ವಿಷ್ಣುವಿನ ಅವತಾರಗಳೆಂಬ ಸ್ಪಷ್ಟತೆ ಇಲ್ಲ. ಜಲಪ್ರಳಯದಲ್ಲಿ ಮನುವನ್ನು ಉಳಿಸುವ ಮತ್ಸ್ಯ. ಹಾಗೂ ಆದ್ಯಜಲದಲ್ಲಿ ಭ್ರಮಣ ಮಾಡುವ ವಿಶ್ವಕರ್ಮ ಪ್ರಜಾಪತಿ. ಇವೆರಡು ಶತಪಥ ಬ್ರಾಹ್ಮಣದಲ್ಲಿ ದೊರೆಯುವ ಎರಡು ಅವತಾರಗಳ ನಿರ್ದೇಶಗಳು (ಶ. ಬ್ರಾ. ೧ : ೮ : ೧, ೭ : ೫೧). ಇವನ್ನು ಪೌರಾಣಿಕ ಸಾಹಿತ್ಯದಲ್ಲಿ ವಿಷ್ಣುವಿನ ಅವತಾರಗಳೆಂದು ಜನಪ್ರಿಯಗೊಳಿಸಲಾಗಿದೆ. ಜಲದಲ್ಲಿ ಸಂಚರಿಸಿದ ಆದ್ಯ ವಿಶ್ವಕರ್ಮಪ್ರಜಾಪತಿಯನ್ನು ವರಾಹಾವತಾರ ಮೂಲವಾಗಿ ಪರಿಗಣಿಸಿ ಅದನ್ನು ವಿಷ್ಣುವಿನ ದಶಾವತಾರಗಳಲ್ಲಿ ಒಂದು ಎಂದು ಹೇಳಲಾಗಿದೆ.

ಮೈತ್ರಿ ಉಪನಿಷತ್ತಿನಲ್ಲಿ ಸಮಸ್ತ ಸೃಷ್ಟಿಯನ್ನೂ ಧರಿಸಿರುವ ಅನ್ನ ಪರಬ್ರಹ್ಮನನ್ನು ಭಗವಾನ್ ವಿಷ್ಣುವೆಂದು ಕರೆಯಲಾಗಿದೆ. ಕಠೋಪನಿಷತ್ತಿನಲ್ಲಿ ಸಾಧಕನಾದವನ ಆಧ್ಯಾತ್ಮಿಕ ಸಾಧನೆಯ ಅಂತಿಮ ಗುರಿಯೇ ವಿಷ್ಣುವಿನ ಪರಮಪದವೆಂದು ಹೇಳಲಾಗಿದೆ. ಇದರಿಂದ ಉಪನಿಷತ್ತುಗಳ ಕಾಲಕ್ಕೆ ವಿಷ್ಣುವು ಸರ್ವೋಚ್ಚ ದೇವನೆಂದು ಅಂಗೀಕರಿಸಲ್ಪಟ್ಟಿದ್ದ ಎಂಬುದು ಸ್ಪಷ್ಟವಾಗುತ್ತದೆ. ಡಾ|| ಆರ್. ಜಿ. ಭಂಡಾರ್ಕರ್ ಅವರು 'ಉಪನಿಷತ್ತಿನಲ್ಲಿ ವರ್ಣಿಸಿರುವ ಪರಬ್ರಹ್ಮನ ಕಲ್ಪನೆಯು ವೈದಿಕ ಸಾಹಿತ್ಯದಲ್ಲಿ ಉಕ್ತವಾಗಿರುವ ವಿಷ್ಣುವಿನ ಪರಮಪದದ ಕಲ್ಪನೆಯೊಂದಿಗೆ ಬಹುವಾಗಿ ಸಮೀಕರಣಗೊಳ್ಳುತ್ತದೆ. ಇದೇ ಸಮಾನತೆಯ ಕಾರಣದಿಂದಾಗಿ ವೈದಿಕೋತ್ತರಕಾಲದಲ್ಲಿ ವಿಷ್ಣುವು, ತತ್ತ್ವಜ್ಞರ ಮುಖಾಂತರ ಪೂಜಿತನಾಗುವ ಸರ್ವಮಾನ್ಯ ದೇವನಾದ' ಎಂದು ಹೇಳಿದ್ದಾರೆ.

ಕ್ರಮಕ್ರಮವಾಗಿ ವಿಷ್ಣುವು ಹಿಂದೂವಿನ ನಿತ್ಯಪೂಜೆ ಕೈಗೊಳ್ಳುವ ದೇವನಾಗಿ ರೂಪಿಸಲ್ಪಟ್ಟ. ಆಪಸ್ತಂಬ, ಹಿರಣ್ಯಕೇಶಿನ್, ಪರಾಸ್ಕರ ಮುಂತಾದ ಆಚಾರ್ಯರು ರೂಪಿಸಿರುವ ವಿವಾಹ ವಿಧಿಯಲ್ಲಿ, ಸಪ್ತಪದಿಯಲ್ಲಿ ವೈದಿಕಮಂತ್ರಗಳೊಂದಿಗೆ ಬಹು ಶ್ರದ್ಧೆಭಕ್ತಿಗಳಿಂದ

**ವಿಷ್ಣುಸ್ತ್ವಾಂ ಆನಯತು** (ಪರಾಸ್ಕರ ಗೃಹ್ಯಸೂತ್ರ, ೧ : ೭ : ೧) ಎಂದು ಹೇಳಲಾಗುತ್ತದೆ. ಎಂದರೆ ನಿನ್ನ ಈ ವೈವಾಹಿಕ ಜೀವನದಲ್ಲಿ ವಿಷ್ಣುವು ಸದಾ ನಿನಗೆ ಮಾರ್ಗದರ್ಶನ ಮಾಡುತ್ತಿರಲಿ ಎಂದು ಅರ್ಥ.

ಹೀಗೆ ವಿಷ್ಣುವಿನ ಮಹಾತ್ಮೆಯು ವರ್ಧಿಸುತ್ತಾ ಮಹಾಭಾರತದ ಕಾಲಕ್ಕೆ ವಿಷ್ಣುವು ಸಮಸ್ತ ಸೃಷ್ಟಿಯ ನಿಯಂತೃವೂ, ಶಾಸಕನೂ ಆದ. ಮಹಾಭಾರತದಲ್ಲಿ ಬ್ರಹ್ಮ - ಪರಮೇಶ್ವರನ ಸಂವಾದದಲ್ಲಿ ಬ್ರಹ್ಮನು ನಾರಾಯಣನನ್ನು ವಿಷ್ಣು ಹಾಗೂ ವಾಸುದೇವ ಮುಂತಾದ ಹೆಸರುಗಳಿಂದ ಸಂಬೋಧಿಸಿದ್ದಾನೆ. ಆದ್ದರಿಂದ ಈ ಮೂರೂ ದೇವತಾ ರೂಪಗಳು ಒಂದಾಗಿ ಈ ಮುವ್ವರ ಉಪಾಸನೆ ಪ್ರಾರಂಭವಾಯಿತು (ಮಹಾಭಾರತ, ಭೀಷ್ಮಪರ್ವ, ೬೧ : ೬೨).

ಮಹಾಭಾರತದಲ್ಲಿ ಲಭಿಸುವ **ಅನುಗೀತೆ**ಯು ವಾಸುದೇವ ಕೃಷ್ಣ ಹಾಗೂ ಶ್ರೀ ವಿಷ್ಣುವಿನ ಸಾಧರ್ಮ್ಯವನ್ನು ಸ್ಪಷ್ಟಗೊಳಿಸುತ್ತದೆ. ಭಗವದ್ಗೀತೆಯವರೆವಿಗೆ ಸಮಸ್ತ ವೈಷ್ಣವ ಸಾಹಿತ್ಯದಲ್ಲಿ ಒಬ್ಬನೇ ವಾಸುದೇವ ಕೃಷ್ಣನ ಔಪಾಸನೆಯನ್ನು ಪ್ರತಿಪಾದಿಸಲಾಗಿದೆ. ಅಲ್ಲೆಲ್ಲೂ ವಿಷ್ಣುವಿನ ಉಲ್ಲೇಖ ದೊರೆಯುವುದೇ ಇಲ್ಲ. ಆದರೆ ಅನುಗೀತೆಯಲ್ಲಿ ವಿಷ್ಣುವಿನ ಉಲ್ಲೇಖ ಮೊದಲ ಬಾರಿಗೆ ದೊರೆಯುತ್ತದೆ.

ಮಹಾಭಾರತದ ಯುದ್ಧದ ನಂತರ ದ್ವಾರಕೆಗೆ ಬರುತ್ತಿರುವಾಗ ಭಗವಾನ್ ಶ್ರೀಕೃಷ್ಣನು ಭೃಗುವಂಶದ ಉತ್ತಂಕ ಋಷಿಯನ್ನು ಕಂಡ. ಯುದ್ಧದಲ್ಲಿ ನಡೆದ ಮಾರಣ ಹೋಮವನ್ನು ಕೇಳಿದ ಉತ್ತಂಕ ಋಷಿಯು ಕೃಷ್ಣನಿಗೆ ಶಾಪವನ್ನು ಕೊಡುವಷ್ಟು ಕೋಪಗೊಂಡ. ಆಗ ಕೃಷ್ಣನು ಅನುಗೀತೆಯ ರೂಪದಲ್ಲಿ ಆಧ್ಯಾತ್ಮ ತತ್ತ್ವವನ್ನು ವಿವರಿಸಿದ. ಅಲ್ಲಿಯೇ ಉತ್ತಂಕನಿಗೆ ತನ್ನ ವಿರಾಟ್‌ಸ್ವರೂಪವನ್ನು ತೋರಿಸಿದ. ಇದೇ ರೀತಿಯಲ್ಲಿ ಅರ್ಜುನನಿಗೂ ವಿರಾಟ್ ಸ್ವರೂಪವನ್ನು ಭಗವದ್ಗೀತೆಯ ಉಪದೇಶದ ಸಂದರ್ಭದಲ್ಲಿ ತೋರಿಸಿದ್ದು ಉಂಟು. ಆಗ ಅದನ್ನು ವಾಸುದೇವನ ನಿಜರೂಪವೆಂದು ಹೇಳಲಾಗಿದೆ. (ಮಹಾಭಾರತ ಅಶ್ವಮೇಧಪರ್ವ, ೫೩ - ೫೫). ಆದರೆ ಅನುಗೀತೆಯಲ್ಲಿ ಇದನ್ನು ವೈಷ್ಣವ ರೂಪ ಎಂದು ಹೇಳಿ, ಇದೇ ವಿಷ್ಣುವಿನ ನಿಜರೂಪವೆಂದು ಖಚಿತಪಡಿಸಲಾಗಿದೆ.

ಮಹಾಭಾರತದಲ್ಲಿ ಧರ್ಮರಾಯನು ಮಾಡಿರುವ ಕೃಷ್ಣಸ್ತವನದಲ್ಲಿ ಕೃಷ್ಣನನ್ನು ವಿಷ್ಣುವಿನ ಅವತಾರವೆಂದು ಹೇಳಲಾಗಿದೆ. ಆದರೂ ವಿಷ್ಣು ರೂಪದಲ್ಲಿ ಅಲ್ಲಿ ದೊರೆಯುವ ವಿರಣೆಗಳಲ್ಲಿ ನಾರಾಯಣ ಮತ್ತು ವಾಸುದೇವ ಕೃಷ್ಣರ ನಿರ್ದೇಶನವೇ ಹೆಚ್ಚಾಗಿ ದೊರೆಯುತ್ತದೆ.

ಮಹಾಭಾರತ ಮತ್ತು ನಂತರದಲ್ಲಿ ಪ್ರಚಲಿತವಾಗಿದ್ದ ವಿಷ್ಣು ಉಪಾಸನೆಯಲ್ಲಿ, ವೈದಿಕ ವಿಷ್ಣುವಿನಲ್ಲಿ ವಾಸುದೇವ ಕೃಷ್ಣ ಮತ್ತು ನಾರಾಯಣ ಈ ಇಬ್ಬರು ದೇವತೆಗಳ ಸೇರ್ಪಡೆ ಒಂದು ಪ್ರವಾಹವನ್ನಾಗಿ ನಾವು ಭಾವಿಸಿದರೆ, ಇದರಿಂದ ಪ್ರತ್ಯೇಕವಾಗಿರುವ ಇನ್ನೆರಡು ವಾಹಿನಿಗಳನ್ನು ನಾವು ಪರಿಶೀಲಿಸಬೇಕು.

ವಾಸುದೇವ ಕೃಷ್ಣನ ಉಪಸಾನೆಯ ಮೊದಲ ಉಲ್ಲೇಖ ನಮಗೆ ದೊರೆಯುವುದು ಪತಂಜಲಿಯ ವ್ಯಾಕರಣದ ಮಹಾಭಾಷ್ಯದಲ್ಲಿ. ಅಲ್ಲಿ ವಾಸುದೇವನು ಒಬ್ಬ ಉಪಾಸನೀಯ ದೇವನೆಂದು ಹೇಳಲಾಗಿದೆ (ಮಹಾ ಭಾಷ್ಯ ೪ : ೩ : ೧೮). ಇದರಿಂದ ಪಾಣಿನಿಯ ಕಾಲದಲ್ಲಿಯೇ

ವಾಸುದೇವನನ್ನು ಪೂಜಿಸುತ್ತಿದ್ದರು ಎಂಬುದು ಸ್ಪಷ್ಟವಾಗುತ್ತದೆ. ರಾಜಸ್ಥಾನದ ಘೋಸುಂಡಿಯಲ್ಲಿ ದೊರೆತಿರುವ ಕ್ರಿ.ಪೂ. ೨೦೦ರ ಶಿಲಾಶಾಸನದಲ್ಲಿ ವಾಸುದೇವ ಮತ್ತು ಸಂಕರ್ಷಣರ ಉಪಾಸನೆಯ ಉಲ್ಲೇಖ ದೊರೆಯುತ್ತದೆ. ಅದರಲ್ಲಿ ಹೆಲಿಯೋದರಸ್ ವಾಸುದೇವನ ಪ್ರೀತ್ಯರ್ಥವಾಗಿ ಒಂದು ಗರುಡ ಧ್ವಜವನ್ನು ಸ್ಥಾಪಿಸಿದ್ದರ ಉಲ್ಲೇಖವಿದೆ. ಅದರಲ್ಲಿ ಹೆಲಿಯೋದರಸ್ ತನ್ನನ್ನು ತಾನೇ ಭಾಗವತನೆಂದು ಕರೆದುಕೊಂಡಿದ್ದಾನೆ. ಇದರಿಂದ ಪೂರ್ವಮಾಳವ ದೇಶದಲ್ಲಿ ಕ್ರಿ.ಪೂ. ೨೦೦ರವೇಳೆಗೇ ವಾಸುದೇವನನ್ನು ದೇವನೆಂದು ಅಂಗೀಕರಿಸಿ ಪೂಜಿಸಲಾಗುತ್ತಿತ್ತು. ಈ ರೀತಿಯ ಉಪಾಸಕರನ್ನು ಭಾಗವತರು ಎಂದು ಕರೆಯಲಾಗುತ್ತಿತ್ತು ಎಂಬುದು ಸ್ಪಷ್ಟವಾಗುತ್ತದೆ. ಹೆಲಿಯೋದರಸ್ ತಕ್ಷಶಿಲೆಯಲ್ಲಿದ್ದ ಗ್ರೀಸ್ ದೇಶದ ರಾಯಭಾರಿ. ಆದ್ದರಿಂದ ಭಾರತದ ವಾಯುವ್ಯ ಪ್ರದೇಶದಲ್ಲಿ ಗ್ರೀಕರಲ್ಲಿ ಕೂಡ ಭಾಗವತ ಧರ್ಮ ಪ್ರಚಾರದಲ್ಲಿತ್ತು ಎಂಬುದು ಖಚಿತವಾಗುತ್ತದೆ. ಕ್ರಿ.ಶ. ೧ನೆಯ ಶತಮಾನದ ನಾನಾಘಟದಲ್ಲಿ ದೊರೆತಿರುವ ಶಿಲಾಲೇಖದಲ್ಲೂ ವಾಸುದೇವ - ಸಂಕರ್ಷಣರ ಉಲ್ಲೇಖ ದೊರೆಯುತ್ತದೆ.

ಪತಂಜಲಿಯ ಮಹಾಭಾಷ್ಯದಲ್ಲಿ ವಾಸುದೇವ ದೇವತೆಯ ಬಗ್ಗೆ ವಿವರಿಸುತ್ತಾ ವೃಷ್ಣೀ ವಂಶದಲ್ಲಿ ಹುಟ್ಟಿದ ಕ್ಷತ್ರಿಯ ರಾಜನಲ್ಲ, ಒಬ್ಬ ಸ್ವತಂತ್ರದೇವ ಎಂಬ ಸ್ಪಷ್ಟೀಕರಣವು ದೊರೆಯುತ್ತದೆ. ಆದರೂ ಭಾಗವತ ಸಂಪ್ರದಾಯದಲ್ಲಿ ಎಲ್ಲರೂ ವಾಸುದೇವ ಕೃಷ್ಣನನ್ನು ವೃಷ್ಣೀ ರಾಜಕುಮಾರನೆಂದೇ ಅಂಗೀಕರಿಸುತ್ತಾರೆ.

ಡಾ|| ಆರ್. ಜಿ. ಭಂಡಾರ್ಕರ್ ಅವರ ಅನುಸಾರ ವಾಸುದೇವ, ಸಂಕರ್ಷಣ ಮತ್ತು ಅನಿರುದ್ಧ ಈ ಮೂವ್ವರೂ ಸಾತ್ವತ ರಾಜಕುಮಾರರು. ಇವರಲ್ಲಿ ವಾಸುದೇವನನ್ನು ಪರಮಾತ್ಮನೆಂದು ಪತಂಜಲಿಯ ಕಾಲದಿಂದಲೂ ಸಾತ್ವತರಲ್ಲಿ ಪೂಜಿಸುವುದು ವಾಡಿಕೆಯಲ್ಲಿತ್ತು. ಮೆಗಾಸ್ತನೀಸನ ಪ್ರವಾಸ ವರ್ಣನೆಯಲ್ಲಿ ಶೂರಸೇನ ದೇಶದಲ್ಲಿ ವಾಸುದೇವ ಕೃಷ್ಣನ ಪೂಜೆಯು ರೂಢಿಯಲ್ಲಿದ್ದುದರ ಉಲ್ಲೇಖವು ದೊರೆಯುತ್ತದೆ. ಆದರೆ ಈ ಪ್ರಾಚೀನ ಕಾಲದಲ್ಲಿ ಕೇವಲ ವಾಸುದೇವನ ಪೂಜೆ ಮಾತ್ರವೇ ಪ್ರಚಲಿತವಾಗಿತ್ತು.

ಮಹಾಭಾರತದ ಶಾಂತಿಪರ್ವದಲ್ಲಿ ನಾರಾಯಣೀಯ ಎಂಬ ಉಪಾಖ್ಯಾನವು ನಾರಾಯಣೋಪಾಸನೆಯ ಬಗ್ಗೆ ವಿಸ್ತಾರವಾದ ತಿಳಿವನ್ನು ಕೊಡುತ್ತದೆ. ಇದರ ಅನುಸಾರ ಈ ಸೃಷ್ಟಿಯನ್ನು ನಡೆಸಿದವನು ಪರಮಾತ್ಮನಾದ ನಾರಾಯಣ. ನಾರಾಯಣನು ತನ್ನ ಏಕಾಂತಿಕ ಧರ್ಮದ ವಿವರಣೆ ಮೊದಲ ಬಾರಿಗೆ ನಾರದನಿಗೆ ಆತನೇ ತಿಳಿಸಿದ. ಈ ಸಂವಾದವು ನಂತರ ಕಾಲದಲ್ಲಿ **ಹರಿಗೀತೆ**ಯಾಗಿ ಪ್ರಚಲಿತಕ್ಕೆ ಬಂತು. ಇದನ್ನೇ ಕೃಷ್ಣ ರೂಪಧಾರಿ ನಾರಾಯಣನು ಮಹಾಭಾರತ ಯುದ್ಧದ ಪ್ರಾರಂಭದಲ್ಲಿ ಅರ್ಜುನನಿಗೆ ಉಪದೇಶಿಸಿದ. ಈ ಸಾತ್ವತ ಧರ್ಮದ ಉಪದೇಶವನ್ನು ನಾರಾಯಣನೇ ಪ್ರತಿ ಮನ್ವಂತರದ ಪ್ರಾರಂಭದಲ್ಲೂ ಮಾಡುತ್ತಾನೆ. ಆ ಮನ್ವಂತರದ ಅಂತ್ಯದಲ್ಲಿ ಇದು ನಷ್ಟವಾಗಿಬಿಡುತ್ತದೆ. ಈ ಮನ್ವಂತರದಲ್ಲೂ ನಾರಾಯಣನು ಈ ಧರ್ಮದ ಉಪದೇಶವನ್ನು ದಕ್ಷ, ವಿವಸ್ವಾನ್ ( ಈತನು ತ್ವಷ್ಟ್ರುಪ್ರಜಾಪತಿಯ ಅಳಿಯ), ಮನು ( ಈತನು ವಿವಸ್ವಾನ್ ಮಗ ) ಮತ್ತು ಇಕ್ಷ್ವಾಕು ರಾಜರಿಗೆ ಮಾಡಿದ. ಇದನ್ನೇ ಭಗವದ್ಗೀತೆಯು **ವಿವಸ್ವತೇ ಯೋಗಂ** ಎಂದು ಹೇಳುತ್ತದೆ.

ಈ ಧರ್ಮದಲ್ಲಿ ಯಜ್ಞದಲ್ಲಿ ನಡೆಯುವ ಪಶುಹಿಂಸೆ ಹಾಗೂ ಋಷಿಗಳು ಅರಣ್ಯಗಳಲ್ಲಿ

ನಡೆಸುವ ತಪಸ್ಸು ತ್ಯಾಜ್ಯವೆಂದು ನಂಬಲಾಗುತ್ತದೆ. ಈ ಎರಡೂ ಉಪಾಸನೆಗಳಿಗೆ ಬದಲಾಗಿ ನಾರಾಯಣನಲ್ಲಿ ನಿಷ್ಠಾಪೂರ್ವಕ ಭಕ್ತಿಯನ್ನು ( ಪ್ರಪತ್ತಿಯನ್ನು ) ಪ್ರತಿಪಾದಿಸಲಾಗಿದೆ. ಇದೇ ಸಂದರ್ಭದಲ್ಲಿ ಬೃಹಸ್ಪತಿ ನಡೆಸಿರುವ ಯಜ್ಞಸಾಧನೆ ಮತ್ತು ಆಪ್ತ್ಯತ್ರಯರು (ಏಕತ, ದ್ವಿತ ಮತ್ತು ತ್ರಿತ ಆಪ್ತ್ಯರು. ಇವರು ರಥಕಾರ ಶಿಲ್ಪಿಗಳು. ) ಸಾವಿರಾರು ವರ್ಷಗಳ ಕಾಲ ನಡೆಸಿರುವ ಯಜ್ಞಸಾಧನೆಯು ನಿಷ್ಫಲವೆಂದು ಸ್ಪಷ್ಟವಾಗಿ ಹೇಳಲಾಗಿದೆ. ಇವೆಲ್ಲವನ್ನೂ ದೂರೀಕರಿಸಿ ಹರಿಭಕ್ತಿಯನ್ನು ಇರಿಸಿಕೊಂಡಿರುವವರೇ ಇವರಿಗಿಂತಲೂ ಮಹಾಶ್ರೇಷ್ಠರಾದವರು ಎಂದು ಹೇಳಲಾಗಿದೆ. ಇದರಿಂದ ಯಜ್ಞ ಮಾರ್ಗವನ್ನು, ತಪಸ್ಸನ್ನು ಬಿಟ್ಟು ಆರಣ್ಯಕಗಳಲ್ಲಿ ಸೂಚಿತ ಮಾರ್ಗಗಳಿಂದ ಅಂಟದ ಭಕ್ತಿಯನ್ನು ಬೋಧಿಸುವ ನಾರಾಯಣ ಸಂಪ್ರದಾಯವು ಒಂದು ಶ್ರೇಷ್ಠ ಶ್ರೇಣಿಯ ಭಕ್ತಿ ಮಾರ್ಗವಾಗಿದೆ. ಇದು ಬೌದ್ಧ ಮತ್ತು ಜೈನ ಧರ್ಮಗಳಿಗೆ ಪ್ರತಿಕ್ರಿಯೆಯಾಗಿ ಮೊದಲು ಜನ್ಮಿಸಿ, ಹಾಗೆಯೇ ಮುಂದುವರೆದು ವೈಷ್ಣವ ಸಂಪ್ರದಾಯದ ವಿಕಾಸಕ್ಕೆ ಕಾರಣವಾಯಿತು.

ಈ ಸಂಪ್ರದಾಯದಲ್ಲಿ ಕಂಸವಧೆಯನ್ನು ನಡೆಸಿದ, ಮಥುರಾದಲ್ಲಿ ಹುಟ್ಟಿದ ಕೃಷ್ಣನನ್ನು ನಾರಾಯಣ ಅಥವ ವಾಸುದೇವನ ಅವತಾರವೆಂದು ಹೇಳಲಾಯಿತು. ನಾರಾಯಣನು ಈ ಅವತಾರದಲ್ಲಿ ಉಪದೇಶಿಸಿದ ಭಗವದ್ಗೀತೆಯಿಂದ ವೈಷ್ಣವ ಧರ್ಮದ ಪುನರುತ್ಥಾನವಾಯಿತು. ದೇಶವ್ಯಾಪಿಯಾಗಿ ಒಂದು ಆಂದೋಲನ ರೂಪದಲ್ಲಿ ಈ ಧರ್ಮವು ಪುನರಾವಿಷ್ಕೃತವಾಯಿತು.

ವೇದದಲ್ಲಿ ವಿಶ್ವಕರ್ಮ, ಪ್ರಜಾಪತಿಗಳ ಮೂಲಕ ಸೌರದೇವತೆಯಾಗಿ ವರ್ಣಿತನಾದ ವಿಷ್ಣುವು ಬ್ರಾಹ್ಮಣಗಳಲ್ಲಿ ಯಜ್ಞದೇವತೆಯಾದ. *ಸಮಾಜದಲ್ಲಿ ಯಜ್ಞಯಾಗಾದಿ ಕರ್ಮಕಾಂಡದಿಂದ ಲಭಿಸುವ ಪುಣ್ಯವು ಅವುಗಳಿಲ್ಲದೆಯೇ ಕೇವಲ ವಿಷ್ಣುವಿನ ಉಪಾಸನೆಯಿಂದ, ಪ್ರಪತ್ತಿಯಿಂದ ಲಭಿಸುತ್ತದೆ ಎಂಬ ನಂಬಿಕೆಯು ಸಮಾಜದಲ್ಲಿ ದೃಢಮೂಲವಾಯಿತು* (ಮಹಾಭಾರತ, ಉದ್ಯೋಗ ಪರ್ವ, ೬ : ೧೬). ಇದೇ ಕಾಲದಲ್ಲಿ ಬ್ರಹ್ಮ, ವಿಷ್ಣು, ಶಿವ ಎಂಬ ತ್ರಿಮೂರ್ತಿಯ ಕಲ್ಪನೆ ಪ್ರಾಚುರ್ಯಕ್ಕೆ ಬಂತು. ಈ ಮೂವ್ವರೂ ಸೃಷ್ಟಿ, ಸ್ಥಿತಿ, ಲಯಗಳ ಅಧಿಷ್ಠಾನ ದೇವತೆಗಳಾದರು (ಮೈತ್ರೇಯ ಉಪನಿಷತ್, ೪ : ೫ : ೨). ಇದೇ ಸಮಯದಲ್ಲಿ ವಿಷ್ಣುವಿಗೆ ಓಂಕಾರ ಉಪಾಸನೆಯಲ್ಲಿ ಸ್ಥಾನ ದೊರೆಯಿತು. ಓಂಕಾರದಲ್ಲಿ ಉಕಾರದೊಂದಿಗೆ ವಿಷ್ಣುವನ್ನು ಸಮೀಕೃತಗೊಳಿಸಲಾಯಿತು (ನೃಸಿಂಹೋತ್ತರ ತಾಪನೀ, ೩). ವಿಷ್ಣುವಿನ ಹೆಸರಿನಲ್ಲಿ ಒಂದು ಉಪನಿಷತ್ತಿನಲ್ಲಿ ಗಾಯತ್ರಿ ಮಂತ್ರವನ್ನು ಹೇಳಲಾಯಿತು. ಗೋಪೀಚಂದನವನ್ನು ವಿಷ್ಣುಚಂದನ ಎಂದು ಹೇಳಲಾಯಿತು. ಪೌರಾಣಿಕ ಸಾಹಿತ್ಯದಲ್ಲಿ ಈ ದೇವನನ್ನು ಸತ್ವಗುಣ ಪ್ರಧಾನ ದೇವತೆ, ಜಗತ್ತಿನ ಸಂಚಾಲನೆ ಹಾಗೂ ಪಾಲನೆಯ ಕಾರ್ಯವು ಈತನ ಕೆಲಸವೆಂದು ಅಂಗೀಕರಿಸಲಾಯಿತು. ಇದೇ ಕಾರಣದಿಂದ ವಿಷ್ಣುವು ಬೇರೆ ಬೇರೆ ಯುಗಗಳಲ್ಲಿ ಬೇರೆ ಬೇರೆ ಅವತಾರಗಳನ್ನು ಧರಿಸಿ ಭೂಮಿಯ ಮೇಲೆ ಬಂದು ದುಷ್ಟಸಂಹಾರವನ್ನು ನಡೆಸಿದ.

ವಿಷ್ಣುವಿನ ಬಗೆಬಗೆಯ ಸ್ವರೂಪದ ವರ್ಣನೆಗಳು ಪುರಾಣಗಳಲ್ಲಿ ದೊರೆಯುತ್ತವೆ. ಚತುರ್ಭುಜಗಳಿದ್ದು ಶಂಖ - ಚಕ್ರ ಗದೆ - ಪದ್ಮ ಧರಿಸಿರುವುದು ಪ್ರಮುಖ ರೂಪ. ಈ ದೇವನ ಆಭೂಷಣಗಳಲ್ಲಿ ವನಮಾಲೆ, ಶ್ರೀವತ್ಸ, ಕೌಸ್ತುಭ ಮತ್ತು ಕಿರೀಟ ಕುಂಡಲಗಳು

ಬಹುಮುಖ್ಯ. ಈತನ ಹೆಂಡತಿ ಲಕ್ಷ್ಮೀ. ಈತನಿರುವುದು ವೈಕುಂಠ. ಆಗಾಗ ಕ್ಷೀರಸಾಗರದಲ್ಲಿ ಶೇಷನಾಗನ ಮೇಲೆ ಮಲಗಿರುತ್ತಾನೆ. ಈತನ ವಾಹನ ಗರುಡ. ಈ ಎಲ್ಲಾ ಗುಣಾತಿಶಯಗಳನ್ನು ಸೇರಿಸಿಕೊಂಡು ವಿಷ್ಣು ಸಹಸ್ರನಾಮವೆಂದು ಈತನ ಸಾವಿರ ಹೆಸರುಗಳನ್ನು ಹೇಳಲಾಗುತ್ತದೆ.

ಭಾಗವತದಲ್ಲಿ (೮ : ೪ : ೧೮ - ೨೦) ವಿಷ್ಣು ತನ್ನ ಪ್ರಿಯವಸ್ತುಗಳ ಬಗ್ಗೆ ಇಂತು ಹೇಳುತ್ತಾನೆ.

**ಕ್ಷೀರೋದಂ ಮೇ ಪ್ರಿಯಂ ಧಾಮ ಶ್ವೇತದ್ವೀಪಂ ಚ ಭಾಸ್ವರಮ್ ।**

**ಶ್ರೀವತ್ಸಂ ಕೌಸ್ತುಭಂ ಮಾಲಾಂ ಗದಾಂ ಕೌಮೋದಕೀಂ ಮಮ ॥**

**ಸುದರ್ಶನಂ ಪಾಂಚಜನ್ಯಂ ಸುಪರ್ಣಂ ಪತಗೇಶ್ವರಮ್ ।**

**ಶೇಷಂ ಮತ್ಕಲಾಂ ಸೂಕ್ಷ್ಮಾಂ ಶ್ರೀಯಂ ದೇವೀಂ ಮದಾಶ್ರಯಾಮ್ ॥**

ವೈದಿಕ ಸಾಹಿತ್ಯದಲ್ಲಿ ವಿಶ್ವಕರ್ಮ ಪ್ರಜಾಪತಿಯ ಅವತಾರವಾಗಿ ವಿಷ್ಣುವು ಹೇಳಲ್ಪಟ್ಟಿದ್ದಾನೆ. ಮಹಾಭಾರತದ ನಾರಾಯಣೀಯದಲ್ಲಿ ವಿಷ್ಣುವಿನ ಅವತಾರವು ದುಷ್ಟಶಿಕ್ಷಣ, ಶಿಷ್ಟರಕ್ಷಣೆಗಾಗಿ ಧರಿಸಿದ ಪಾರ್ಥಿವ ರೂಪವೇ ಅವತಾರ ಎಂದು ಹೇಳಿದೆ. ವರಾಹ, ನಾರಸಿಂಹ, ವಾಮನ, ಪರಶುರಾಮ, ರಾಮ ದಾಶರಥಿ, ವಾಸುದೇವ ಕೃಷ್ಣ, ಹಂಸ, ಕೂರ್ಮ, ಮತ್ಸ್ಯ ಮತ್ತು ಕಲ್ಕಿ (ಮ. ಶಾಂತಿಪರ್ವ, ೩೨೬ : ೮೩೫) ಇವು ಅವತಾರಗಳು. ವಾಯು ಪುರಾಣದಲ್ಲಿ ವಿಷ್ಣುವಿನ ಅವತಾರಗಳು ಹತ್ತು ಎಂದು ಹೇಳಿದ್ದರೂ ಹಂಸ, ಕೂರ್ಮ ಮತ್ತು ಮತ್ಸ್ಯಕ್ಕೆ ಬದಲಾಗಿ ದತ್ತಾತ್ರೇಯ, ವೇದವ್ಯಾಸ ಮತ್ತು ಅನಾಮಿಕ ಅವತಾರವೊಂದನ್ನು ಹೇಳಲಾಗಿದೆ (ವಾಯು ೯೧ : ೨೧೧, ವರಾಹ ೧೧೩). ಅದೇ ಪುರಾಣದಲ್ಲಿ ಬೇರೊಂದೆಡೆ ವಿಷ್ಣುವಿನ ಅವತಾರಗಳು ೭೭ ಎಂದು ಹೇಳಲಾಗಿದೆ (ವಾಯು ೧೭ : ೬೪).

ಭಾಗವತ ಪುರಾಣದಲ್ಲಿ ವಿಷ್ಣುವಿನ ಅವತಾರಗಳು ೧೨ ಎಂದು ಹೇಳಲಾಗಿದೆ. ಅಲ್ಲಿ ಕಪಿಲ, ದತ್ತಾತ್ರೇಯ, ಋಷಭ ಮತ್ತು ಧನ್ವಂತ್ರಿ ಇವರು ವಿಷ್ಣುವಿನ ಅವತಾರಗಳೆಂದು ಹೇಳಲಾಗಿದೆ. ಮತ್ಸ್ಯ ಪುರಾಣದಲ್ಲಿಯ ದಶಾವತಾರದಲ್ಲಿ ನಾರಾಯಣ, ವೇದವ್ಯಾಸ ಮತ್ತು ಗೌತಮಬುದ್ಧ ಹೊಸ ಅವತಾರಗಳೆಂದು ಹೇಳಲಾಗಿದೆ (ಮತ್ಸ್ಯ ४೭ : ೨३೭ - ೨३೨). ಹರಿವಂಶ ಪುರಾಣದಲ್ಲಿ ವಿಷ್ಣುವಿನ ಅವತಾರಗಳು ಅನಂತ ಎಂದು ಹೇಳಲಾಗಿದೆ

**ಪ್ರಾದುರ್ಭಾವ ಸಹಸ್ರಾಣಿ ಅತೀತಾನಿ ನ ಸಂಶಯಃ ।**

**ಭೂಯಶ್ಚೈವ ಭವಿಷ್ಯಂತೀತ್ಯೇವ ಮಾಹ ಪ್ರಜಾಪತಿಃ ॥**

(ಹರಿವಂಶ ೧ : ೪೧ : ೧೧ ಮತ್ತು ಬ್ರಹ್ಮಪುರಾಣ ೨೧೩ : ೧೭)

(ವಿಷ್ಣುವಿನ ಅನಂತ ಅವತಾರಗಳು ಪೂರ್ವಕಾಲದಲ್ಲಿ ಆಗಿವೆ ; ಇನ್ನು ಅಷ್ಟೇ ಅವತಾರಗಳು ಭವಿಷ್ಯಕಾಲದಲ್ಲೂ ಆಗಲಿವೆ)

*ವೈಷ್ಣವ ಸಾಹಿತ್ಯದ ಪಂಚರತ್ನಗಳೆಂದು ಪ್ರಸಿದ್ಧವಾಗಿರುವುವು ೧. ಭಗವದ್ಗೀತೆ, ೨. ವಿಷ್ಣುಸಹಸ್ರನಾಮ, ೩. ಅನುಗೀತ, ೪. ಭೀಷ್ಮಸ್ತವರಾಜ, ೫. ಗಜೇಂದ್ರ ಮೋಕ್ಷ.* ಇವೆಲ್ಲವೂ ಮಹಾಭಾರತ ಮತ್ತು ಭಾಗವತಗಳಲ್ಲಿ ಸೇರಿದ್ದು ಪ್ರಖ್ಯಾತವಾಗಿವೆ.

ವಿಷ್ಣುವನ್ನು ಆರಾಧಿಸುವ ಪ್ರಮುಖವಾದ ವೈಷ್ಣವ ಸಂಪ್ರದಾಯಗಳು ಇವು

೧. ವೈಖಾನಸ ಸಂಪ್ರದಾಯ

೨. ರಾಮಾನುಜ ಸಂಪ್ರದಾಯ (೧೧ನೇ ಶತಮಾನ). ಇದನ್ನು ಪಾಂಚರಾತ್ರ ಎನ್ನುತ್ತಾರೆ.

೩. ಮಾಧ್ವ ಅಥವ ಆನಂದತೀರ್ಥ ಸಂಪ್ರದಾಯ (೧೧ನೇ ಶತಮಾನ)

೪. ನಿಂಬಾರ್ಕ ಸಪ್ರದಾಯ (೧೨ನೇ ಶತಮಾನ)

೫. ನಾಮದೇವ ಅಥವ ತುಕಾರಾಮ ಸಂಪ್ರದಾಯ (೧೩ನೇ ಶತಮಾನ)

೬. ಕಬೀರ್ ಸಂಪ್ರದಾಯ (೧೫ನೇ ಶತಮಾನ)

೭. ವಲ್ಲಭ ಸಂಪ್ರದಾಯ (೧೫ನೇ ಶತಮಾನ)

೮. ಚೈತನ್ಯ ಸಂಪ್ರದಾಯ (೧೫ನೇ ಶತಮಾನ)

೯. ತುಲಸೀ ಸಂಪ್ರದಾಯ (೧೬ನೇ ಶತಮಾನ)

ದಕ್ಷಿಣ ಭಾರತದಲ್ಲಿ ಮೊದಲ ಮೂರು ಸಂಪ್ರದಾಯಗಳೇ ಮುಖ್ಯವಾದುವು. ಈ ಮೂರು ಸಾಂಪ್ರದಾಯಗಳಲ್ಲಿ ಮತನಿರ್ಮಾಣಕ್ಕೆ ಅವಶ್ಯಕವಾದ ಆಚಾರ ಸಂಹಿತೆ, ತಾತ್ತ್ವಿಕ ಸೂತ್ರಗಳನ್ನು ವಿವರವಾಗಿ ರೂಪಿಸಿ ಆಯಾ ಮತಸ್ಥರು ಇವನ್ನು ರೂಢಿಸಿಕೊಳ್ಳಲು ಅನುಸರಿಸಬೇಕಾದ ಮಾರ್ಗವನ್ನು ವಿವರಿಸಲು ಆಚಾರ್ಯ ಪೀಠಗಳು ಪ್ರಾರಂಭದಿಂದಲೂ ಸಾಗಿಬರುತ್ತಿವೆ. ಉಳಿದ ಸಂಪ್ರದಾಯಗಳಲ್ಲಿ ಇಷ್ಟೊಂದು ಬಿಕ್ಕಟ್ಟು, ಮಾರ್ಗದ ವ್ಯಾಖ್ಯೆ, ಗುರುಪೀಠಗಳು ಇರುವಂತೆ ತೋರಿಬರುವುದಿಲ್ಲ. ಆದರೂ ಈ ಎಲ್ಲಾ ಸಂಪ್ರದಾಯಗಳನ್ನು ಅನುಸರಿಸುವವರು ಭಾರತದಲ್ಲೆಲ್ಲಾ ವ್ಯಾಪಕವಾಗಿ ಇದ್ದಾರೆ.

ವೈದಿಕ ನೆಲೆಯ ವಿಷ್ಣುವನ್ನು ಅನಂತರದ ನಾರಾಯಣ ಋಷಿಯ ನೆಲೆಯಲ್ಲಿ ನಿಲ್ಲಿಸಿ, ನಾರಾಯಣನನ್ನು ವಾಸುದೇವ ಕೃಷ್ಣನೊಂದಿಗೆ ಹೊಂದಿಸಿ ರೂಪಿಸಿರುವ ನಾರಾಯಣ ಗಾಯತ್ರಿಯು ಮಹಾನಾರಾಯಣೋಪನಿಷತ್ತಿನಲ್ಲಿ ಕಂಡು ಬರುತ್ತದೆ :

**ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ**

**ತನ್ನೋ ವಿಷ್ಣು ಪ್ರಚೋದಯಾತ್ ||**

ಇದೇ ಭಾಗವತ ಧರ್ಮದ ಪ್ರಸಾರಕ್ಕೆ ನೆರವಾಯಿತು. ಈ ಉಪನಿಷತ್ತು ಗೃಹಸ್ಥರ ವಿಧಿ - ಸಂಕಲ್ಪಗಳನ್ನೂ, ಸನ್ಯಾಸಿಗಳ ವಿರಕ್ತಿಯನ್ನೂ ಹೊಂದಾಣಿಕೆ ಮಾಡಿತು. ಭಾಗವತ ಪಂಥಕ್ಕೆ ವ್ಯೂಹ ಮುಖ್ಯವಾದುದು. ಪಾಂಚರಾತ್ರಾಗಮವು ಇದನ್ನು ರೂಢಿಸಿಕೊಟ್ಟಿತು. ಭಾಗವತ ಪಂಥದವರನ್ನು ಸಾತ್ವತರೆಂದು ಹೇಳುತ್ತಿದ್ದರು. ಇದಕ್ಕೆ ಕಾರಣ ವಾಸುದೇವ ಕೃಷ್ಣನು ಸಾತ್ತ್ವತ ವಂಶದವನೆಂದು ಮಹಾಭಾರತವು ಹೇಳುವುದೇ. ಸಾತ್ತ್ವತ, ಅಂಧಕ, ವೃಷ್ಣಿ ಇವು ಯಾದವ ಕುಲದ ಪಂಗಡಗಳು. ವಾಸುದೇವಾದಿ ವ್ಯೂಹ ಮೂರ್ತಿಗಳೆಲ್ಲಾ ಸಾತ್ತ್ವತ ವಂಶದವರೇ.

ಸಾತ್ತ್ವತರೆಂಬ ಜನ ಭಾಗವತ ಪಂಥವನ್ನು ರೂಢಿಗೆ ತಂದು, ವಿಷ್ಣು ಪೂಜೆಗೆ ವಿಶೇಷ ಪ್ರೋತ್ಸಾಹವನ್ನು ಒದಗಿಸಿದರು. ಸಾತ್ತ್ವತ ಕುಲದ ಹಿರಿಯನಾಗಿದ್ದ ವಾಸುದೇವನೇ ಈ ಪಂಥದ ಪ್ರವರ್ತಕ. ಆದ್ಯ ಪುರುಷನನ್ನು ದೇವತಾ ಸ್ಥಾನಕ್ಕೆ ಏರಿಸಿ ಪೂಜೆಮಾಡುವುದು ರೂಢಿಗೆ ಬಂತು.

ಭಾಗವತ ಪಂಥದಲ್ಲಿ ಪಾಂಚರಾತ್ರ ಸಂಪ್ರದಾಯವು ಏಕೇಶ್ವರ ವಾದವನ್ನು ಬಲಪಡಿಸಿತು. ಮೊದಲಿಗೆ ಸಾತ್ತ್ವತ ಪಂಚವೀರನನ್ನು ಸಮಾನವಾಗಿ ಗೌರವಿಸುತ್ತಿದ್ದರು. ಐದು ವಿಶೇಷವಾದ ಸಂಖ್ಯೆ. ಪಂಚಭೂತಗಳು, ಪಂಚದಿಶೆಗಳು, ಪಂಚೇಂದ್ರಿಯಗಳು ಇತ್ಯಾದಿಗಳಿಂದ ಸೃಷ್ಟಿಕರ್ಮವೇ ಐದರಿಂದ ಪ್ರಾರಂಭವಾಯಿತು ಎಂಬುದು ವೇದ ಹೇಳಿಕೆ. ಈ ಸಂಖ್ಯೆಗೆ

ತಾತ್ತ್ವಿಕವಾಗಿ ಹೆಚ್ಚಿನ ಮೌಲ್ಯವಿದೆ. ಏಕೇಶ್ವರವಾದವು ಐವರನ್ನೂ ಒಂದೇ ಎಂದು ಹೇಳಿತು. ಒಂದೇ ತತ್ತ್ವದಿಂದ ಐದು ಹೊಮ್ಮುವುದೇ ವ್ಯೂಹ. ವಿಶ್ವಕರ್ಮಾತ್ಮಕನಾದ ಶಿವನು ಪಂಚಬ್ರಹ್ಮಾತ್ಮಕನಲ್ಲವೇ? ಹಾಗೆಯೇ ಪಾಂಚರಾತ್ರ ಸತ್ರದ ಫಲವಾಗಿ ವಿಶ್ವಕರ್ಮ ಪ್ರಜಾಪತಿಯ ವ್ಯಕ್ತರೂಪವಾದ ಆದಿಮೂರ್ತಿಯು ಷಾಡ್ಗುಣ್ಯಯುಕ್ತನಾದ ಪರಾವಾಸುದೇವನಾಗಿ, ಅಲ್ಲಿಂದ ಪಂಚವೀರರು ಪಂಚವ್ಯೂಹವಾಗಿ ಪರಿವರ್ತಿತಗೊಂಡರು. ಮೊದಲಿಗೆ ಐವರು ಪ್ರತ್ಯೇಕವಾಗಿ ಪೂಜಿತವಾಗುತ್ತಿದ್ದರು. ನಂತರ ಇವರೆಲ್ಲಾ ಒಂದೇ ಕುಟುಂಬ ಎಂದರು. ತರುವಾಯ ಇದು ವಾಸುದೇವನ ಕುಟುಂಬ ಎಂದರು. ಆದ್ದರಿಂದ ವಾಸುದೇವನ ವ್ಯೂಹಗಳೇ ಇತರರು ಎಂಬ ನಂಬಿಕೆ ಬಲವಾಯಿತು.

ಮನುಷ್ಯ ದೇವತೆಗಳಾದ ಪಂಚವೀರರ ಹೆಸರುಗಳು ಇಂತಿವೆ :

**ಮನುಷ್ಯಾಕೃತೀನ್ ದೇವಾನ್ ಕೀರ್ತ್ಯಮಾನಾನ್ನಿಬೋಧತ**
**ಸಂಕರ್ಷಣೋ ವಾಸುದೇವಃ ಪ್ರದ್ಯುಮ್ನಃ ಸಾಂಬ ಏವ ಚ**
**ಅನಿರುದ್ಧಶ್ಚ ಪಂಚೈತೇ ವಂಶವೀರಾಃ ಪ್ರಕೀರ್ತಿತಾಃ**

ಸಂಕರ್ಷಣ, ವಾಸುದೇವ, ಪ್ರದ್ಯುಮ್ನ, ಅನಿರುದ್ಧ, ಸಾಂಬ ಇವರೇ ಆ ಐವರು. ಸಂಕರ್ಷಣ ಎಂದರೆ ಬಲರಾಮ. ಕೃಷ್ಣನ ಅಣ್ಣ. ವಾಸುದೇವ ಎಂದರೆ ಕೃಷ್ಣನೇ. ಪ್ರದ್ಯುಮ್ನನು ಕೃಷ್ಣನ ಮಗ. ಅನಿರುದ್ಧ ಮೊಮ್ಮಗ. ಸಾಂಬ ಕೃಷ್ಣನ ಇನ್ನೊಬ್ಬ ಮಗ. ಕಾಲಕ್ರಮದಲ್ಲಿ ಸಾಂಬನ ದೇವತಾ ಘನತೆ ಕರಗಿ ಉಳಿದ ನಾಲ್ವರೇ ಚತುರ್ವ್ಯೂಹವೆನಿಸಿಕೊಂಡರು. ಈ ವ್ಯೂಹದ ಅಧಿಷ್ಠಾನವಾದವನು ಪರಾವಾಸುದೇವ. ಈತನಿಂದಲೇ ವ್ಯೂಹವು ಹೊಮ್ಮಿತು ಎಂದು ಹೇಳುತ್ತಾರೆ. ಇವರಲ್ಲಿ ವಾಸುದೇವನು ವ್ಯೂಹಕ್ಕೆ ಅಧಿಷ್ಠಾನವಾದ್ದರಿಂದ ಆತನೇ ವ್ಯೂಹವಾಗುವುದಿಲ್ಲವೆಂದು ಕೇವಲ ಈ ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧರು ಮೂರು ಮಂದಿಯೇ ವ್ಯೂಹಮೂರ್ತಿಗಳೆಂಬುದು ಕೆಲವರ ಮಾತು. ಆದರೆ ಪಾಂಚರಾತ್ರದಲ್ಲಿ ಮಾತ್ರ ಪರಾವಾಸುದೇವ ಮತ್ತು ಚತುರ್ವ್ಯೂಹ ಮೂರ್ತಿಗಳೇ ಉಳಿದುಕೊಂಡರು.

ವಾಸುದೇವನಲ್ಲಿದ್ದ ಷಡ್ಗುಣಗಳನ್ನು ಮುವ್ವರು ವ್ಯೂಹಮೂರ್ತಿಗಳಿಗೆ ಹಂಚಲಾಯಿತು. ಜ್ಞಾನ - ಬಲ (ಸಂಕರ್ಷಣ), ಐಶ್ವರ್ಯ - ವೀರ್ಯ (ಪ್ರದ್ಯುಮ್ನ), ಶಕ್ತಿ - ತೇಜಸ್ಸು (ಅನಿರುದ್ಧ). ಇವೇ ವ್ಯೂಹದ ನೆಲೆಗಳಾದುವು.

ವೈಖಾನಸ ಆಗಮದಲ್ಲಿ ಆದಿಮೂರ್ತಿಯ ವಿವರಣೆ ಇಂತಿದೆ :

**ಅಥಾದಿಮೂರ್ತಿವಿಧಿಂ ವಕ್ಷ್ಯೇ । ಅನಂತೋತ್ಸಂಗೇ ಸಮಾಸೀನಂ ದಕ್ಷಿಣಂ ಪ್ರಸಾರ್ಯ ವಾಮಮಾಕುಂಚ್ಯ [ದಕ್ಷಿಣ ಪಾದಮಾಕುಂಚ್ಯ ವಾಮಂ ಪ್ರಸಾರ್ಯ] ದಕ್ಷಿಣ ಹಸ್ತಮನಂತೋತ್ಸಂಗೇಸ್ಯರ್ಕ್ಯ ವಾಮಂ ವಾಮಜಾನೂರ್ಧ್ವೇ ಪ್ರಸಾರ್ಯ ಚತುರ್ಬಾಹುಂ ಶಂಖಚಕ್ರಧರಂ ಫಣಾಭಿಃ ಪಂಚಭಿರ್ವಾ [ಫಣಾನ್ ಪಂಚ ಸಪ್ತ ವಾ] ಧನ್ಯಮೌಲಿಂ ಪ್ರವಾಲಾಭಂ ಸರ್ವಾಭರಣ ಭೂಷಿತಂ ಕೃತ್ವಾ, ತದ್ದಕ್ಷಿಣೇ ಭೃಗುಂ ವಾಮೇ ಮಾರ್ಕಂಡೇಯಮೇಕಜಾನು ಕ್ರಮೇಣಾಸಯಿತ್ವಾ, ದಕ್ಷಿಣೇ ಬ್ರಹ್ಮಾಣಂ ವಾಮೇ ಶಂಕರಂ ಚ ಕೃತ್ವಾ ತದ್ರೂಪಂ ಕೌತುಕಂ ಚ ಕೃತ್ವಾ, ಪ್ರತಿಷ್ಠೋಕ್ತ ಕ್ರಮೇಣ ಪ್ರತಿಷ್ಠಾಂ ಕಾರಯೇತ್।**

ಆದಿಶೇಷನ ಮೇಲೆ ಕುಳಿತಿರುವ ಆದಿಮೂರ್ತಿಯು ಬಲಗಾಲನ್ನು ಕೆಳಕ್ಕೆ ತೂಗಿಬಿಟ್ಟಿರುತ್ತಾನೆ. ಎಡಗಾಲನ್ನು ಮಡಚಿಕೊಂಡು ಪೀಠದ ಮೇಲೆ ಪಾದವನ್ನು ಇರಿಸಿ



ಚಿತ್ರ ೬೦ : ಆದಿಮೂರ್ತಿ - ೨



ಚಿತ್ರ ೬೧ : ಆದಿಮೂರ್ತಿ - ೩

ಕೊಂಡಿದ್ದು ಮೇಲಕ್ಕೆ ಏರಿರುವ ಮೊಣಕಾಲಿನ ಮೇಲೆ ಎಡತೋಳು ಉದ್ದಕ್ಕೆ ಚಾಚಿಕೊಂಡಿರುತ್ತಾನೆ. ಬಲ ಅಂಗೈಯನ್ನು ಪೀಠದ ಮೇಲೆ ಊರಿ ಕೊಂಡಿರುತ್ತಾನೆ. ಮೇಲಿನ ಬಲ ಹಸ್ತದಲ್ಲಿ ಚಕ್ರವನ್ನು ಎಡಹಸ್ತದಲ್ಲಿ ಶಂಖವನ್ನು ಹಿಡಿದಿರುತ್ತಾನೆ. ಸ್ವಾಮಿಯು ನಾಲ್ಕು ಹಸ್ತಗಳನ್ನು ಹೊಂದಿರುತ್ತಾನೆ. ಹವಳದಂತಹ ಕೆಂಪು ಮೈಬಣ್ಣದ ಕಾಂತಿಯಲ್ಲಿರುವ ಸ್ವಾಮಿಯು ಸಕಲಾಭರಣಗಳಿಂದಲೂ ಭೂಷಿತನಾಗಿರುತ್ತಾನೆ. ಛನ್ನವೀರದಿಂದಲೂ ಅಲಂಕೃತನಾಗಿರಬೇಕು. ಆದಿಶೇಷನು ಐದು ಅಥವ ಏಳು ಹೆಡೆಗಳನ್ನು ಪಡೆದಿರಬೇಕು. ಹೆಡೆಗಳು ಕಿರೀಟವನ್ನು ಸ್ವಲ್ಪ ಮರೆಮಾಡುವಷ್ಟು ಬಗ್ಗಿರಬೇಕು. ಎಡಪಾರ್ಶ್ವದಲ್ಲಿ ಭೃಗು ಋಷಿಯು ಬಲಪಾರ್ಶ್ವದಲ್ಲಿ ಮಾರ್ಕಂಡೇಯನು ಒಂದು ಮೊಣಕಾಲನ್ನು ಊರಿಕುಳಿತಿರುವಂತೆ ಇರುತ್ತಾರೆ. ಶಿವ ಮತ್ತು ಬ್ರಹ್ಮ ಇಬ್ಬರೂ ನಮಸ್ಕಾರ ಮುದ್ರೆಯಲ್ಲಿ ಪ್ರಾರ್ಥಿಸುತ್ತಿರುವವರಂತೆ ಎಡ ಮತ್ತು ಬಲ ಪಾರ್ಶ್ವಗಳಲ್ಲಿರುತ್ತಾರೆ.

ಸಿದ್ಧಾರ್ಥ ಸಂಹಿತೆಯಲ್ಲಿ ಆದಿಮೂರ್ತಿಯ ಧ್ಯಾನವು ಇಂತಿದೆ :

**ಪದ್ಮಾಸನಸಮಾಸೀನಃ ಕಿಂಚಿನ್ಮೀಲಿತ ಲೋಚನಃ**
**ಘೋಣಾಗ್ರೇ ದತ್ತದೃಷ್ಟಿಶ್ಚ ಶ್ವೇತಪದ್ಮೋಪರಿ ಸ್ಥಿತಃ ॥**
**ವಾಮ ದಕ್ಷಿಣೌ ಹಸ್ತಾವುತ್ತಾನಾವೇಕ ಭಾಗಗೌ**
**ತತ್ಕರದ್ವಯ ಪಾರ್ಶ್ವಸ್ಥೇ ಪಂಕೇರುಹಮಹಾಗದೇ ॥**
**ಊರ್ಧ್ವೇ ಕರದ್ವಯೇ ತಸ್ಯ ಪಾಂಚಜನ್ಯಸ್ಸುದರ್ಶನಃ**
**ಯೋಗಸ್ವಾಮೀ ಸ ವಿಜ್ಞೇಯಃ ಪೂಜ್ಯೋ ಮೋಕ್ಷಾರ್ಥಿಯೋಗಿಭಿಃ ॥**

ಸ್ವಲ್ಪ ನಿಮೀಲಿತ ಲೋಚನಗಳೊಂದಿಗೆ ಬಿಳಿಯ ಪದ್ಮದ ಮೇಲೆ ಕುಳಿತಿರುವ ಸ್ವಾಮಿಯು ತನ್ನ ನೋಟವನ್ನು ಮೂಗಿನ ತುದಿಯ ಮೇಲೆ ಕೇಂದ್ರೀಕರಿಸಿರುತ್ತಾನೆ. ಸ್ವಲ್ಪ ಮೇಲಕ್ಕೆ ಎತ್ತಿರುವ ಮುಂದಿನ ಎಡ ಮತ್ತು ಬಲಹಸ್ತಗಳಲ್ಲಿ ಪದ್ಮ ಮತ್ತು ಗದೆಗಳನ್ನು ಹಿಡಿದಿರುತ್ತಾನೆ. ಈ ತೋಳುಗಳ ಮೇಲೆ ಇರುವ ಎರಡು ತೋಳುಗಳಲ್ಲಿ ಎಡಹಸ್ತದಲ್ಲಿ ಪಾಂಚಜನ್ಯ ಶಂಖ ಮತ್ತು ಬಲಹಸ್ತದಲ್ಲಿ ಸುದರ್ಶನ ಚಕ್ರ ಧರಿಸಿರುತ್ತಾನೆ. ಈ ಮೂರ್ತಿಯನ್ನು ಯೋಗಸ್ವಾಮಿ (ಯೋಗೇಶ್ವರ) ಎನ್ನುತ್ತಾರೆ. ಜ್ಞಾನಿಗಳು, ಪೂಜ್ಯರು ಮತ್ತು ಮೋಕ್ಷಾರ್ಥಿಗಳು ಈತನನ್ನು ಪೂಜಿಸಿ ತಮ್ಮ ಇಷ್ಟಾರ್ಥಗಳನ್ನು ಪಡೆದುಕೊಳ್ಳುತ್ತಾರೆ.

ವೈಷ್ಣವ ಧರ್ಮದಲ್ಲಿ ಆದಿಮೂರ್ತಿಯನ್ನು ಆದಿವಿಷ್ಣು ಎನ್ನುತ್ತಾರೆ. ಈ ಮೂರ್ತಿಯೇ ಸೃಷ್ಟಿಗೆ ಕಾರಣನು. ವೈದಿಕ ನೆಲೆಯವನು. ಈತನಿಂದ ಉದ್ಭವವಾದವನೇ ಪರಾವಾಸುದೇವ. ಈಗಾಗಲೇ ಆದಿಮೂರ್ತಿಯ ಪ್ರತಿಮಾ ಕಲ್ಪವನ್ನು ತಿಳಿದಿದ್ದೇವೆ. ಇನ್ನು ಪರಾವಾಸುದೇವನ ಬಗ್ಗೆ ಕೆಲವು ವಿವರಗಳನ್ನು ತಿಳಿಯೋಣ.

## ಅ. ಪರಾವಾಸುದೇವ

**ಏವಂ ಸ್ನಾತ್ವಾ ತತೋ ಧ್ಯಾಯೇನ್ಮಂತ್ರವ್ಯೂಹಂ ಯಥಾಸ್ಥಿತಮ್**
**ಅಭ್ಯಂತರೇ ವಿಮಾನಸ್ಯ ಗರ್ಭಭೂಮೌ ತು ಮಧ್ಯತಃ ॥**
**ಸರಸೀರುಹಮಾಸ್ಥಾಯ ಸಂಸ್ಥಿತಂ ಪುರುಷೋತ್ತಮಮ್**
**ಪ್ರಾವೃಟ್ಜಲದಸಂದೋಹ ವಿಲಸದ್ದಿವ್ಯ ವಿಗ್ರಹಮ್ ॥**

ಸರ್ವದೇವಮಯಂ ದೇವಂ ಸರ್ವೇಷಾಂ ತೇಜಸಾಂ ನಿಧಿಮ್
ಸರ್ವಲಕ್ಷಣ ಸಂಪೂರ್ಣಂ ಸರ್ವಜ್ಞಾದಿಗುಣೈರ್ಯುತಮ್ ॥
ವಪುಷಾ ಸುಂದರೇಣೈವ ದಿವ್ಯೇನಾ ವಿಸ್ಮಿತೇನ ಚ
ಮುಂಚಂತಮನಿಶಂ ದೇಹಾದಾಲೋಕಂ ಧ್ಯಾನಲಕ್ಷಣಮ್ ॥
ಪ್ರಯತ್ನೇನ ವಿನಾಶಿಕ್ಷಾನನಾಶಕ್ಯದ್ಧ್ಯಾಯಿನಾಂ ಮಹತ್
ಘನಕುಂಚಿತ ನೀಲಾಲಿದಲಿತಾಂಜನ ಸನ್ನಿಭೈಃ ॥
ಕರ್ಪೂರಧೂಪಸ್ಯೈರ್ದಿವ್ಯೈಃ ಪುಷ್ಪ ಸಂವಲಿತಾಂತರೈಃ
ಕಿರೀಟ ಮಕುಟಾಕ್ರಾಂತೈಃ ಶೋಭಿತಂ ಸ್ವಶಿರೋರುಹೈಃ ॥
ಬಾಲಚಂದ್ರಪ್ರತೀಕಾಶ ಫಾಲೋದ್ಯತ್ತಿಲಕೋಜ್ವಲಮ್
ಸುಭ್ರುವಂ ಸುನಸಂ ಶಾಂತಂ ಸವಿಲಾಸಸ್ಮಿತಾಧರಮ್ ॥
ಕಿಂಚಿದಾರಕ್ತಗೋ ಕ್ಷೀರ ಶುದ್ಧ ನೀಲಾಬ್ಜ ಲೋಚನಮ್
ಶೀತಲೈರ್ದೃಕ್ಪ್ರಪಾತೈಸ್ತು ಜಗದಾಪ್ಯಾಯಕಾರಿಣಮ್ ॥
ವಿಲಸದ್ಗಂಡ ಫಲಕಂ ಶ್ರವಣೋಜ್ವಲ ಕುಂಡಲಮ್
ಮುಖ ಸೌಂದರ್ಯನಿಷ್ಯಂದ ಚುಬುಕಸ್ಥಲ ಶೋಭಿತಮ್ ॥
ವಿಕಲಂಕಶರಶ್ಚಂದ್ರ ವಿಲಸನ್ಮುಖ ಮಂಡಲಮ್
ಕಂಬುಗ್ರೀವಂ ಪೀವರಾಂಸಂ ದೀರ್ಘಬಾಹುಂ ಮಹೋರಸಮ್ ॥
ಚತುರ್ಭುಜಮುದಾರಾಂಗ ವಿಲಸತ್ಪಾಣಿ ಪಂಕಜಮ್
ಪೀತಕೌಶೇಯವಸನಂ ನಿಮ್ನನಾಭಿಂ ತನೂದರಮ್ ॥
ಚಾರೂರುಯುಗಲಂ ಚಾರು ಜಂಘಾದ್ವಿತಯಮುಜ್ವಲೈಃ
ಮಣಿನೂಪುರ ಭೂಷಾದ್ಯೈಃ ವಿಲಸತ್ಪಾದ ಪಂಕಜಮ್ ॥
ದಿವ್ಯಗಂಧಾನು ಲಿಪ್ತಾಂಗಂ ದಿವ್ಯಾಂಬರಧರಂ ತಥಾ
ದಿವ್ಯ ಸ್ರಗ್ವೇಷ್ಟನೋಪೇತಂ ದಿವ್ಯಾಲಂಕಾರ ಮಂಡಿತಮ್ ॥
ಅನೇಕ ರತ್ನಾಖಚಿತ ಕಿರೀಟ ಮಕುಟೋಜಲಮ್
ಕೌಸ್ತುಭೇನೋರಸಿಸ್ಥೇನ ಶ್ರೀವತ್ಸೇನ ಪ್ಯಾಲಂಕೃತಮ್ ॥
ರತ್ನ ಕಾಂಚನ ಸನ್ಮುಕ್ತಾಯುಕ್ತಯಾ ವನಮಾಲಯಾ
ಸಬ್ರಹ್ಮಸೂತ್ರಯಾ ಚೈವ ಶೋಭಿತಂ ಪರಮೇಶ್ವರಮ್ ॥
ಮುಖ್ಯದಕ್ಷಿಣ ಹಸ್ತೇನ ಭೀತಾನಾಮಭಯ ಪ್ರದಮ್
ಶ್ರೋಣೀತಟನಿವಿಷ್ಟೇನ ವಾಮಹಸ್ತೇನ ಲೀಲಯಾ ॥
ಧ್ರಿಯಮಾಣಾಂ ಗದಾಂ ಗುರ್ವೀಂ ನಿಷಣ್ಣಾಂ ಧರಣೀತಲೇ
ಪಶ್ಚಾದ್ದಕ್ಷಿಣಹಸ್ತೇನ ಚಕ್ರಂ ಕಾಲಾನಲದ್ಯುತಿ ॥
ಪ್ರಣವಧ್ವನಿಗರ್ಭಂ ತು ಹಿಮಾದ್ರಿಶತಶೋಭನಮ್
ಶಂಖಂ ವಾಮಕರೇಣಾಪಿ ದಧಾನಮತುಲ ಪ್ರಭಮ್ ॥
ಸ್ವದೇಹ ತೇಜಸ್ಸಂಭೂತ ಜ್ವಾಲಾ ಮಂಡಲ ಮಧ್ಯಗಮ್

**ಕರುಣಾಪೂರ್ಣ ಹೃದಯಂ ಜಾಗದುದ್ಧರಣೋದ್ಯತಮ್ ||**
**ಅಭಿನ್ನಪೂರ್ಣಷಾಡ್ಗುಣ್ಯ ವಿಭವೇನೋಪಬೃಂಹಿತಮ್**
**ಯೋಗಿಧ್ಯೇಯಮಜಂ ನಿತ್ಯಂ ಜಗಜ್ಜನ್ಮಾದಿಕಾರಣಮ್ ||**
**ಸಾಕ್ಷಾಲ್ಲಕ್ಷ್ಮೀಪತಿಂ ದೇವಂ ಧ್ಯಾಯೇನ್ನಾರಾಯಣಂ ಪ್ರಭುಮ್**
**ಏವಂ ಶಾಯನಮಾಸೀನ ಯಾನಾರೂಢಮಥಾಪಿ ವಾ ||**
**ಪರಂ ವ್ಯೂಹಂ ವೈಭವಂ ವಾ ದ್ವಿಭುಜಂ ವಾ ಚತುರ್ಭುಜಮ್**
**ಅಷ್ಟಬಾಹ್ವಾದಿಕಂ ವಾಪಿ ನಾನಾಭೂಷಣ ಸಂಯುತಮ್ ||**
**ನಾನಾ ಸ್ತ್ರಗಣಸಂಯುಕ್ತಂ ರೂಪಂ ಭಗವತಸ್ತಥಾ**
**ಲಕ್ಷ್ಮ್ಯಾದಿಶಕ್ತಿಜಾಲಂ ಚ ಧ್ಯಾಯೇದ್ಭಕ್ತಿ ಸಮನ್ವಿತಃ ||**

(ಈಶ್ವರ ಸಂಹಿತೆ, ೪ : ೮೦ - ೧೦೨)

ವ್ಯೂಹ ಮೂರ್ತಿಗಳನ್ನು ವಿಮಾನಗಳಲ್ಲಿ ಆಯಾಮೂರ್ತಿಗಳಿಗೆ ನಿರ್ದಿಷ್ಟವಾಗಿರುವ ದಿಕ್ಕಿನ ಅನುಸಾರವಾಗಿ ರೂಪಿಸಬೇಕು. ಅಥವ ಗರ್ಭಗುಡಿಗಳಲ್ಲಿ ಮಧ್ಯಪ್ರದೇಶದಲ್ಲಿ ಪುರುಷೋತ್ತಮನೆಂದು ಹೆಸರಾಗಿರುವ ಈ ಸ್ವಾಮಿಯನ್ನು ಇರಿಸಬೇಕು. ಸಕಲ ದೇವರುಗಳನ್ನು ತನ್ನಲ್ಲಿಯೇ ಸಿಕ್ಷಿಪ್ತಗೊಳಿಸಿಕೊಂಡಿರುವ, ಸಕಲ ದೇವತೆಗಳ ತೇಜೋನಿಧಿಯಾಗಿ ಕಾಂತಿಪೂರ್ಣನಾಗಿ ಕಂಗೊಳಿಸುತ್ತಿರುವ, ಸಕಲ ಜ್ಞಾನ ಪೂರ್ಣನೂ, ಸರ್ವಲಕ್ಷಣ ಸಂಪನ್ನನೂ, ಸರ್ವಜ್ಞನೂ ಆದ ಸ್ವಾಮಿಯು ಬಹು ಆಕರ್ಷಕವಾದ ದೇಹದೊಂದಿಗೆ ಕ್ಷೀರಸಾಗರದ ಅಲೆಗಳ ಮಧ್ಯೆ ದಿವ್ಯಮಂಗಳ ಸ್ವರೂಪನಾಗಿ ಕಾಣಿಸುತ್ತಾನೆ. ಶ್ಯಾಮಲ ವರ್ಣಕಾಂತಿಯಿಂದ ಕಂಗೊಳಿಸುತ್ತಾ, ಎಲ್ಲರಲ್ಲಿಯ ಅಜ್ಞಾನವನ್ನು ನಾಶಮಾಡುವ ಪ್ರಯತ್ನವನ್ನು ತಾನೇ ಮಾಡುತ್ತಾ, ಬಗೆಬಗೆಯ ಮಾಲೆಗಳು, ಹಾರಗಳು, ಪುಷ್ಪಗಳು ಧರಿಸಿ ಅಲಂಕೃತನಾಗಿದ್ದು ಕಿರೀಟಮಕುಟದಿಂದ ಶೋಭಿತನಾಗಿರುತ್ತಾನೆ. ಆಕಾಶದಲ್ಲಿ ಬಾಲಚಂದ್ರನಿರುವಂತೆ ಆತನ ಫಾಲದಲ್ಲಿ ತಿಲಕವು ಬೆಳಗುತ್ತಿರುತ್ತದೆ. ತೀಡಿತಿದ್ದಿದ ಬಿಲ್ಲಿನಾಕಾರದ ಹುಬ್ಬುಗಳು. ನೀಳವಾದ ನಾಸಿಕ. ವಿಲಾಸವಾದ ಕೆಂಪನೆಯ ತುಟಿಗಳು. ಆ ತುಟಿಗಳ ಮೇಲೆ ಹಾಲಿನಂತೆ ಶುಭ್ರವಾದ ಕಿರುನಗೆ. ಕಣ್ಣುಗಳ ಕೊನೆಯಲ್ಲಿ ಕೆಂಪು. ನೀಲಿ ಕಪ್ಪು ಕಣ್ಣು ಸಾಗರದ ಮಧ್ಯೆ ಇರುವ ನೀಲಿ ತಾವರೆಯಂತೆ ಕಾಣುತ್ತದೆ. ಜಗತ್ತುಗಳಿಗೆಲ್ಲಾ ಆಪ್ಯಾಯಮಾನವಾಗುವಂತಹ ಶೀತಲ ದೃಷ್ಟಿಯನ್ನು ಪ್ರಸರಿಸುವ ಸ್ವಾಮಿಯು ಉಜ್ವಲವಾದ ಕರ್ಣಕುಂಡಲಗಳನ್ನು ಧರಿಸಿರುತ್ತಾನೆ. ಸುಂದರ ಮುಖ. ಅದಕ್ಕೆ ಒಪ್ಪುವ ಚುಬುಕ. ಕಳಂಕರಹಿತ ಶರತ್‌ಕಾಲದ ಚಂದ್ರನಂತೆ ತೇಜೋವಂತವಾಗಿರುವ ಮುಖಮಂಡಲ. ಶಂಖದಂತಹ ಕಂಠ. ವಿಶಾಲವಾದ ನಾಲ್ಕು ಬಾಹುಗಳು. ತಾವರೆಯ ಎಸಳಿನಂತಹ ಹಸ್ತಗಳು. ನಾಭಿಯಿಂದ ಕೆಳಭಾಗದಲ್ಲಿ ಹಳದಿಯ ವಸ್ತ್ರಗಳನ್ನು ಧರಿಸಿರುತ್ತಾನೆ. ಅವು ಮುಂಗಾಲಿನ ಕೊನೆಯ ತನಕ ಇರುತ್ತವೆ. ಸುಂದರವಾದ ಕಾಲುಗಳಲ್ಲಿ ಮಣಿಗಳು, ನೂಪುರ ಮುಂತಾದ ಪಾದಭೂಷಣಗಳು ತಾವರೆಯ ದಳಗಳಂತಹ ಪಾದಗಳನ್ನು ಅಲಂಕರಿಸಿರುತ್ತವೆ. ನಾನಾ ಬಗೆಯ ಗಂಧಗಳನ್ನು, ದಿವ್ಯಾಂಬರಗಳನ್ನು, ಅಲಂಕಾರಗಳನ್ನು ರತ್ನಖಚಿತ ಆಭರಣ, ಕಿರೀಟ ಮಕುಟಗಳನ್ನು, ಜೀವಾತ್ಮರ ಅಭಿಮಾನಿ ದೇವತೆಯಾದ ಕೌಸ್ತುಭ ಮತ್ತು ಪ್ರಕೃತಿಯನ್ನು ಸಂಕೇತಿಸುವ ಶ್ರೀವತ್ಸಗಳನ್ನು ಧರಿಸಿ, ವನಮಾಲೆ ಮತ್ತು ಬ್ರಹ್ಮಸೂತ್ರಗಳಿಂದ

ಪರಮಪರಮೇಶ್ವರನು ಶೋಭಾಯಮಾನಾಗಿರುತ್ತಾನೆ. ಸ್ವಾಮಿಯು ತನ್ನ ಬಲಹಸ್ತದಲ್ಲಿ ಅಭಯಮುದ್ರೆಯನ್ನು ಧರಿಸಿ ತನ್ನನ್ನು ಆಶ್ರಯಿಸುವ ಆರ್ತರನ್ನು, ಭೀತ ವ್ಯಕ್ತಿಗಳನ್ನು ಸಂತೈಸುತ್ತಿರುತ್ತಾನೆ. ಎಡಹಸ್ತವು ತನ್ನನ್ನು ಸೇರಿಕೊಂಡಿರುವ ಶ್ರೀದೇವಿಯ ಪಾರ್ಶ್ವವನ್ನು ಸ್ಪರ್ಶಿಸುತ್ತಾ ಅದೇ ಹಸ್ತದಲ್ಲಿ ಕೌಮೋದಕಿ ಗದೆಯನ್ನು ದುಷ್ಟ ಸಂಹಾರಕ್ಕಾಗಿ ಧರಿಸಿರುತ್ತಾನೆ. ಮೇಲಿನ ಬಲಹಸ್ತದಲ್ಲಿ ಕಾಲಾನಲ ಪ್ರಕಾಶದಿಂದ ಕಂಗೊಳಿಸುತ್ತಾ ಪ್ರಣವನಾದದಿಂದ ಝೇಂಕರಿಸುತ್ತಿರುವ ಸುದರ್ಶನ ಚಕ್ರವು ಸ್ಥಿತಿಕರ್ಮಕ್ಕಾಗಿ ಸಾವಿರ ಹಿಮಾಲಯಗಳಷ್ಟು ಗಂಭೀರವಾಗಿ ಕಾಣುತ್ತಿದೆ. ಎಡ ಹಸ್ತದಲ್ಲಿ ಮುಕ್ತಿಕಾರಕವಾದ ಅತುಲ ಪ್ರಕಾಶದಿಂದ ಪಾಂಚಜನ್ಯ ಶಂಖವು ಕಾಂತಿಯುತವಾಗಿರುತ್ತದೆ. ಸ್ವಾಮಿಯು ತನ್ನ ದೇಹದಿಂದ ಹೊಮ್ಮುತ್ತಿರುವ ಪ್ರಭೆಯ ಮಧ್ಯೆ ಜಗತ್ತುಗಳ ಉದ್ಧಾರಕ್ಕಾಗಿ ಕರುಣಾ ರಸಪೂರ್ಣಹೃದಯನಾಗಿ ಶೋಭಾಯಮಾನನಾಗಿ ವೈಕುಂಠದಲ್ಲಿರುತ್ತಾನೆ. ಈತನಿಂದ ಜ್ಞಾನ - ಬಲ, ಐಶ್ವರ್ಯ - ವೀರ್ಯ, ಶಕ್ತಿ - ತೇಜಸ್ಸು ಎನ್ನುವ ಷಡ್ಗುಣಗಳು ಯಾವಾಗಲೂ ಹೊಮ್ಮುತ್ತಿರುತ್ತವೆ. ಷಡ್ಗುಣಗಳು ಮಂತ್ರಗಳಲ್ಲೂ, ಪ್ರತಿಮೆಗಳಲ್ಲೂ ಇರುತ್ತವೆ. ಷಡ್ಗುಣ್ಯಯಂತ್ರದ ಪೂಜೆ ಮತ್ತು ಸ್ಥಾಪನೆಯೂ ರೂಢಿಯಲ್ಲಿದೆ.

ಪರಾವಾಸುದೇವನ ಸುತ್ತಲೂ ಎಂಟು ದಿಕ್ಕುಗಳಲ್ಲಿಯೂ ಎಂಟು ಮಂದಿ ಶಕ್ತಿಯರಿರುತ್ತಾರೆ - ಕಾಂತಿ, ತೃಪ್ತಿ, ಶ್ರದ್ಧೆ, ವಿದ್ಯೆ, ಜಯ, ಕ್ಷಮೆ, ಶಾಂತಿ ಮತ್ತು ಶಕ್ತಿ. ಇವರನ್ನು ಅಷ್ಟಶಕ್ತಿಗಳು ಎನ್ನುತ್ತಾರೆ. ಇವರಲ್ಲದೆ ಗರುಡ, ವಿಷ್ವಕ್ಸೇನ, ನಿತ್ಯರು, ಮುಕ್ತರು, ಪಾರ್ಷದರು ಪರಿವಾರದಲ್ಲಿರುತ್ತಾರೆ. ಈ ಸ್ವಾಮಿಯೇ ಜಗತ್ತಿಗೆ ಆದಿ ಜನ್ಮಕಾರಣನು; ಲಕ್ಷ್ಮೀಪತಿಯಾಗಿರುವ ನಾರಾಯಣನು. ಶಯನ, ಆಸನ, ಯಾನ, ಸ್ಥಾನಕ ಭಂಗಿಗಳಲ್ಲಿ ಈ ಸ್ವಾಮಿಯು ಇರಬಹುದು. ಪರಾವಾಸುದೇವ ಎಂದು ಕರೆಯಲ್ಪಡುವ ಈ ಸ್ವಾಮಿಯು ಎರಡು, ನಾಲ್ಕು ಅಥವ ಎಂಟು ಭುಜಗಳನ್ನು ಹೊಂದಿರಬಹುದು. ಈತನ ಕಾಂತಿಯಿಂದಲೇ ವ್ಯೂಹಮೂರ್ತಿಗಳೆಂದು ಪ್ರಖ್ಯಾತರಾಗಿರುವ ವ್ಯೂಹ ವಾಸುದೇವ, (ವ್ಯೂಹ) ಸಂಕರ್ಷಣ, (ವ್ಯೂಹ) ಪ್ರದ್ಯುಮ್ನ, (ವ್ಯೂಹ) ಅನಿರುದ್ಧ ಇವರು ಹೊಮ್ಮಿದ್ದಾರೆ. ಅವರಲ್ಲಿ ವ್ಯೂಹ ವಾಸುದೇವಮೂರ್ತಿಯು ಪರಾವಾಸುದೇವನ ಪ್ರತಿನಿಧಿಯಾಗಿ ವ್ಯೂಹದ ಅಧ್ಯಕ್ಷನೆಂದು ಖ್ಯಾತನಾಗಿದ್ದಾನೆ. ಸಂಕರ್ಷಣನು ಜ್ಞಾನ ಬಲಗಳನ್ನು, ಪ್ರದ್ಯುಮ್ನನು ಐಶ್ವರ್ಯ ವೀರ್ಯಗಳನ್ನು, ಅನಿರುದ್ಧನು ಶಕ್ತಿ ತೇಜಸ್ಸುಗಳನ್ನು ಹೊಂದಿರುತ್ತಾರೆ. ಪರಾವಾಸುದೇವಮೂರ್ತಿಯು ಎರಡು, ನಾಲ್ಕು ಅಥವ ಎಂಟು ಭುಜಗಳನ್ನು ಪಡೆದಿದ್ದು ಬಗೆಬಗೆಯ ಅಸ್ತ್ರಗಳಿಂದ ಅಲಂಕೃತನಾಗಿರುತ್ತಾನೆ; ಲಕ್ಷ್ಮೀ ಮುಂತಾದ ಶಕ್ತಿಗಳನ್ನು ಒಳಗೊಂಡಿರುತ್ತಾನೆ. ಇಂತಹ ಮೂರ್ತಿಯನ್ನು ಭಕ್ತಿಯಿಂದ ಧ್ಯಾನಿಸೋಣ.

ಈ ಸ್ವಾಮಿಯು ವನಮಾಲೆಯನ್ನು ಧರಿಸಿರುತ್ತಾನೆ. ಶ್ರೀ ವತ್ಸದಿಂದ ಈತನ ವಕ್ಷವು ಅಲಂಕೃತವಾಗಿರುತ್ತದೆ. ರತ್ನರಾಜವೆನಿಸಿದ ಕೌಸ್ತುಭದಿಂದ ಶೋಭಿತನಾಗಿರುತ್ತಾನೆ. ವ್ಯೂಹಮೂರ್ತಿಗಳೆನಿಸಿದ ಚತುರಾಮ್ನಾಯ ಮೂರ್ತಿಗಳಲ್ಲಿ ಬಹು ಶ್ರೇಷ್ಠನಾದ ಈ ಸ್ವಾಮಿಯು ಸೃಷ್ಟಿ, ಸ್ಥಿತಿ, ಪ್ರಳಯ, ತಿರೋಧಾನ ಮತ್ತು ಅನುಗ್ರಹಗಳೆಂಬ ಪಂಚಕ್ರಿಯೆಗಳ ಮೂಲಕಾರಣನಾಗಿರುತ್ತಾನೆ. ಈತನೇ ಸಕಲ ಜಗತ್ತುಗಳನ್ನು ಪಾಲಿಸುತ್ತಿರುವ ಮಹಾ ಶಕ್ತಿ. ಸೃಜನೆ, ಪಾಲನೆ ಮತ್ತು ಮುಕ್ತಿಮಾರ್ಗದರ್ಶನವು ಭಗವಂತನ ಎರಡು ಕ್ರಿಯೆಗಳು.



ಚಿತ್ರ ೬೨ : ಪರಾವಾಸುದೇವ

ಈ ದಿವ್ಯಮೂರ್ತಿಯು ವೈಷ್ಣವೀ ಶಕ್ತಿಯನ್ನು ತುಂಬಿಕೊಂಡಿದ್ದು ಸಕಲಕ್ಕೂ ಮೂಲನಾಗಿರುತ್ತಾನೆ. ಈತನೇ ವ್ಯೂಹಮೂರ್ತಿಗಳಿಗೆ ಆಕರವಾಗಿದ್ದು ಅವರ ಶಕ್ತಿಗೆ ಕಾರಣ ಬೀಜನಾಗಿರುತ್ತಾನೆ. ಆದಿ ಮೂರ್ತಿಯಿಂದ ಸೃಜನೆ-ಪಾಲನೆ ಮತ್ತು ಮುಕ್ತಿ ಮಾರ್ಗದರ್ಶನದ ಉದ್ದೇಶಕ್ಕೆಂದೇ ರೂಪಿತನಾಗಿರುವ ಪರಾವಾಸುದೇವನು ಈತನೇ.

ಇಂತಹ ಪರಾವಾಸುದೇವ ಮೂರ್ತಿಯ ಧ್ಯಾನವು ಪರಮ ಸಂಹಿತೆ (೩ : ೧೬ - ೧೭) ಯಲ್ಲಿ ಇಂತಿದೆ

**ಶಂಖಂ ಚಕ್ರಂ ಗದಾಂ ಪದ್ಮಂ ಚತುರ್ಭಿರ್ಧಾರಯೇತ್ ಭುಜೈ:**
**ಅರ್ಚನೀಯಃ ಪರೋ ದೇವಃ ಶುದ್ಧಸ್ಫಾಟಿಕ ಸನ್ನಿಭಃ ||**
**ಸೃಷ್ಟಿ ಬೀಜಂ ತಥಾ ಪದ್ಮಂ ಚಕ್ರಂ ಸ್ಥಿತಿನಿಬಂಧನಮ್**
**ಗದಾಂ ಸಂಹಾರ ಬೀಜಂ ತು ಶಂಖಂ ಮುಕ್ತಿನಿಬಂಧನಮ್ ||**

ಶುದ್ಧಸ್ಫಟಿಕದ ಮೈ ಬಣ್ಣವಿರುವ ಪರಾವಾಸುದೇವಮೂರ್ತಿಯು ನಾಲ್ಕು ತೋಳುಗಳನ್ನು ಹೊಂದಿದ್ದು ಬಲಪಾರ್ಶ್ವದ ಮುಂದಿನ ಹಸ್ತದಲ್ಲಿ ಸೃಷ್ಟಿಬೀಜಾತ್ಮಕವಾದ ಪದ್ಮವನ್ನು, ಮೇಲಿನ ಹಸ್ತದಲ್ಲಿ ಸ್ಥಿತಿಗೆ ಕಾರಣವಾದ ಶಕ್ತಿಯನ್ನು ಸಮಾಹಿತ ಗೊಳಿಸಿಕೊಂಡಿರುವ ಚಕ್ರವನ್ನು ಧರಿಸಿರುತ್ತಾನೆ. ಎಡಪಾರ್ಶ್ವದ ಮುಂದಿನ ಹಸ್ತದಲ್ಲಿ ಮುಕ್ತಿ ಮಾರ್ಗವನ್ನು ತೋರಬಲ್ಲ ಶಂಖವನ್ನು ಧರಿಸಿರುತ್ತಾನೆ. ಇಂತಹ ಪರಾವಾಸುದೇವನ ಮೂರ್ತಿಯನ್ನು ಅರ್ಚಿಸಿ ಕೃತಾರ್ಥರಾಗೋಣ.

**ಆದಿಮೂರ್ತಿಃ ಪರೋ ದೇವೋ ವಾಸುದೇವಃ ಸನಾತನಃ**
**ದ್ವಿತೀಯಾ ತು ಪರಾ ಮೂರ್ತಿಸ್ಸಂಕರ್ಷಣ ಇತಿ ಸ್ಮೃತಃ ||**
**ಪ್ರದ್ಯುಮ್ನಾಖ್ಯಾ ತೃತೀಯಾ ತು ಮೂರ್ತಿರೇಷಾ ಸನಾತನೀ**
**ಚತುರ್ಥೀ ತು ಭವೇನ್ಮೂರ್ತಿರನಿರುದ್ಧೇತಿ ಸಂಜ್ಞಿತಾ ||**

(ವಿಷ್ವಕ್ಸೇನ ಸಂಹಿತೆ ೧೧ : ೧೪೩ - ೧೪೪)

ಆದಿಮೂರ್ತಿಯಿಂದ ರೂಪುಗೊಂಡವನು ಪರಾವಾಸುದೇವನು. ಆತನ ಪ್ರಭೆಯಿಂದಲೇ ರೂಪುಗೊಂಡವರು ನಾಲ್ಕು ವ್ಯೂಹಮೂರ್ತಿಗಳು. ಇವರನ್ನು ಚತುರಾಮ್ನಾಯ ಮೂರ್ತಿಗಳು ಎಂದೂ ಕರೆಯುತ್ತಾರೆ. ಮೊದಲಿಗೆ ರೂಪುಗೊಂಡವನು ವ್ಯೂಹ ವಾಸುದೇವಮೂರ್ತಿ. ಎರಡನೆಯವನು ಸಂಕರ್ಷಣ ಮೂರ್ತಿ. ಮೂರನೆಯವನು ಪ್ರದ್ಯುಮ್ನ ಮೂರ್ತಿ. ನಾಲ್ಕನೆಯವನು ಅನಿರುದ್ಧನು.

ಇವರು ಮೂಡಿಬಂದ ದಿಕ್ಕುಗಳ ಬಗ್ಗೆ ಸಾತ್ವತ ಸಂಹಿತೆಯಲ್ಲಿ (೪ : ೮ - ೧೧) ಈ ರೀತಿ ವಿವರಣೆ ದೊರೆಯುತ್ತದೆ :

**ಪ್ರಾಚ್ಯಾಂ ಸಿತೇನ ವಪುಷಾ ಸೂರ್ಯಕಾಂತ್ಯಧಿಕೇನ ತು**
**ವ್ಯಕ್ತಿಮಭ್ಯೇತಿ ಭಗವಾನ್ ವಾಸುದೇವಾತ್ಮನಾ ಸ್ವಯಮ್ ||**
**ಪದ್ಮರಾಗ ಸಮಾನೇನ ತೇಜಸಾ ಸಮನಂತರಮ್**
**ಉದಿತೇ ದಕ್ಷಿಣಾಸ್ಯಾಂ ವೈ ಪ್ರಭು ಸ್ಸಂಕರ್ಷಣಾತ್ಮನಾ ||**
**ಧರ್ಮಾಂಶುರಶ್ಮಿ ಸಂತಪ್ತ ಶತಧಾಮಾಧಿಕೇನ ತು**

**ರೂಪೇಣ ಪಶ್ಚಿಮಾಸ್ಯಾಂ ಚ ವ್ಯಕ್ತಂ ಪ್ರದ್ಯುಮ್ನ ಸಂಜ್ಞಯಾ ॥**
**ಶರದ್ ಗಗನ ಸಂಕಾಶವರ್ಣೇನ ಪರಮೇಶ್ವರಃ**
**ಸಮಸ್ತ ಉತ್ತರಸ್ಯಾಂ ಚಾಪ್ಯನಿರುದ್ಧಾತ್ಮನಾ ತತಃ ॥**

ಪರಾವಾಸುದೇವನ ತೇಜಸ್ಸಿನಿಂದ ಪೂರ್ವದಿಕ್ಕಿನಲ್ಲಿ ಬಿಳಿಯವರ್ಣದಲ್ಲಿ ಸೂರ್ಯಕಾಂತಿಗಿಂತಲೂ ಅಧಿಕ ತೇಜಸ್ಸಿನ ಭಗವಾನ್ ವಾಸುದೇವನೇ ವ್ಯೂಹ ವಾಸುದೇವನಾಗಿ ರೂಪುಗೊಂಡು ಬಂದ. ಆದ್ದರಿಂದ ಈತನು ಇತರ ವ್ಯೂಹ ಮೂರ್ತಿಗಳ ಅಧ್ಯಕ್ಷ. ಪರಾವಾಸುದೇವನಲ್ಲಿರುವ ಷಡ್ಗುಣಗಳು ಈತನಲ್ಲೂ ಇರುತ್ತವೆ. ನಂತರ ದಕ್ಷಿಣ ದಿಕ್ಕಿನಿಂದ ಪದ್ಮರಾಗದ ಕಾಂತಿಯಂತೆ ತೇಜೋವಂತನಾದ ಸಂಕರ್ಷಣಮೂರ್ತಿಯು ರೂಪುಗೊಂಡ. ಈತನಿಗೆ ಮಹಾಭೂತಗಳ ಸೃಷ್ಟಿ ಮೊದಲ ಕ್ರಿಯೆ. ಏಕಾಂತಿಕ ಧರ್ಮದ ಪ್ರತಿಪಾದನೆ ಎರಡನೆಯದು. ಹೋಮಾಗ್ನಿ ತೇಜಸ್ಸಿನಿಂದ ಸಂತಪ್ತನಾಗಿದ್ದು ಬಹು ಸುಂದರಾಕಾರನಾಗಿ ಪಶ್ಚಿಮದಿಕ್ಕಿನಿಂದ ಮೂಡಿಬಂದ ಪ್ರದ್ಯುಮ್ನ ಮೂರ್ತಿಯು ಪ್ರಕೃತಿ ಪುರುಷ ಭೇದಸ್ಥಾಪನೆಯನ್ನು ಮೊದಲ ಕ್ರಿಯೆಯಾಗಿ ಕೈಗೊಂಡ. ಧರ್ಮವನ್ನು ಆಚಾರವನ್ನಾಗಿ ಪರಿವರ್ತಿಸುವ ಸೂತ್ರಗಳನ್ನು ರೂಪಿಸಿದ. ಉತ್ತರದಿಕ್ಕಿನಲ್ಲಿ ಬೆಳದಿಂಗಳು ತುಂಬಿದ ಆಕಾಶವರ್ಣದಲ್ಲಿ ಪರಮೇಶ್ವರನಾದ ಅನಿರುದ್ಧನು ರೂಪುಗೊಂಡನು.

ಈ ನಾಲ್ಕು ಮೂರ್ತಿಗಳನ್ನು ಆಸನ, ಶಯನ, ಯಾನ, ಸ್ಥಾನಕ ಭಂಗಿಗಳಲ್ಲಿ ರೂಪಿಸಬಹುದಾದರೂ ಎಲ್ಲರನ್ನೂ ಬೇರೆ ಬೇರೆಯಾಗಿಯೇ ಪ್ರತಿಷ್ಠಿಸಬೇಕು (**ಚತಸ್ರೋ ಮೂರ್ತಯಸ್ತ್ವೇತಾಃ ಪ್ರತಿಷ್ಠಾಪ್ಯ ಪೃಥಕ್ ಪೃಥಕ್ । ಆಸನೇ ಶಯನೇ ಯಾನೇ ಪ್ರತಿಷ್ಠಾಪ್ಯಾಃ ಪೃಥಕ್ ಪೃಥಕ್ ॥** ವಿಷ್ವಕ್‌ಸೇನ ಸಂಹಿತೆ, ೧೧ : ೧೪೫ )

## ಆ. ವ್ಯೂಹ ಮೂರ್ತಿಗಳು

ಪರಾವಾಸುದೇವ ಮೂರ್ತಿಯಿಂದ ಉದ್ಭವವಾದ ವ್ಯೂಹಮೂರ್ತಿಗಳು ನಾಲ್ವರು (ವ್ಯೂಹ) ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧ. ಇವರ ಕ್ರಮ ಇದೇ ಆದರೂ ಎಲ್ಲರೂ ಒಂದೇ ಸಮಯಕ್ಕೆ ರೂಪುಗೊಂಡರು. ಪೂರ್ವ ದಿಕ್ಕಿನಿಂದ ಗಣನೆ ಪ್ರಾರಂಭಿಸುವುದರಿಂದ ಇದೇ ಕ್ರಮವನ್ನು ಅನುಸರಿಸಲಾಗುತ್ತದೆ.

ವೈಷ್ಣವ ಆಗಮಗಳಲ್ಲಿ ವೈಖಾನಸ, ಪಾಂಚರಾತ್ರ ಎಂಬ ಭೇದವಿದೆ. ಪಾಂಚರಾತ್ರವನ್ನು ರಾಮಾನುಜಾಚಾರ್ಯರು ಪುರಸ್ಕರಿಸಿದರು. ಇವೇ ಅಲ್ಲದೆ ಮಾಧ್ವ ಸಂಪ್ರದಾಯಸ್ತರು ತಂತ್ರಸಾರೋಕ್ತವಾದ ಪೂಜಾವಿಧಿಯನ್ನು ಅನುಸರಿಸುತ್ತಾರೆ. ಉಳಿದ ವೈಷ್ಣವ ಆಲಯಗಳಲ್ಲಿ ವೈಖಾನಸ ಅಥವ ಪಾಂಚರಾತ್ರ ಆಗಮವನ್ನೇ ರೂಢಿಯಲ್ಲಿರಿಸಿ ಕೊಂಡಿದ್ದಾರೆ. ವ್ಯೂಹ ಕಲ್ಪನೆ ಈ ಮೂರೂ ಗುಂಪುಗಳಿಗೆ ಸಾಧಾರಣವಾದುದು. ವ್ಯೂಹ ಮೂರ್ತಿಗಳು ಬಹುಮಟ್ಟಿಗೆ ಪಾಂಚರಾತ್ರಾಗಮಗಳಿಂದಲೇ ಸ್ಪಷ್ಟವಾಗಿರುವಂತಹವು. ವ್ಯೂಹ ಮತ್ತು ವ್ಯೂಹ ಮೂರ್ತಿಗಳು ವೈಷ್ಣವ ದೇವತಾಕಲ್ಪದಲ್ಲಿ ಬಹು ಪ್ರಧಾನವಾಗಿರುವ ಅಂಶ. ವೈಷ್ಣವ ದರ್ಶನದಲ್ಲೂ ಇದೇ ಅಡಿಗಲ್ಲಾಗಿದೆ. ಪ್ರತಿಮಾ ರೂಪದಲ್ಲಿ ಇವರನ್ನು ಈಗ ವಿಮಾನದಲ್ಲಿ ದಿಕ್ಕುಗಳ ಅಧಿಪತಿಗಳಂತೆ ರೂಪಿಸುತ್ತಾರೆ. ವಾಸುದೇವ ಪೂರ್ವಾಭಿಮುಖವಾಗಿರುತ್ತಾನೆ. ಸಂಕರ್ಷಣನು

ದಕ್ಷಿಣಾಭಿಮುಖವಾಗಿರುತ್ತಾನೆ. ಪ್ರದ್ಯುಮ್ನನು ಪಶ್ಚಿಮಾಭಿಮುಖವಾಗಿರುತ್ತಾನೆ. ಅನಿರುದ್ಧನು ಉತ್ತರಾಭಿಮುಖವಾಗಿರುತ್ತಾನೆ.

## ೧. (ವ್ಯೂಹ) ವಾಸುದೇವ ಮೂರ್ತಿ

ಮೊದಲಿಗೆ ವ್ಯೂಹ ವಾಸುದೇವಮೂರ್ತಿಯ ಬಗ್ಗೆ ತಿಳಿಯೋಣ :

**ವಾಸುದೇವಸ್ಯ ವಕ್ಷ್ಯಾಮಿ ರೂಪಂ ವೈ ವಾಯುಧಾನಿ ತೇ**
**ಗೋಕ್ಷೀರ ಸ್ಫಾಟಿಕಾಕಾರಂ ಶ್ಯಾಮಕೃತಿಮಥೋಽಪಿ ವಾ ॥**
**ಪೀತವಸ್ತ್ರಧರಂ ವಾಪಿ ರಕ್ತಾಂಬರ ಮಥಾಪಿ ವಾ**
**ಶಂಖಚಕ್ರಗದಾಹಸ್ತಂ ಸರ್ವಾಭರಣಭೂಷಿತಮ್ ॥**
**ಸರ್ವಾವಯವ ಸಂಪೂರ್ಣಂ ಚತುರ್ಬಾಹು ವಿರಾಜಿತಮ್**
**ಸರ್ವಾಲಂಕಾರ ಸಂಯುಕ್ತಂ ವಾಸುದೇವಂ ವಿಚಿಂತಯೇತ್ ॥**
**ವಕ್ಷ್ಯಾಮ್ಯಸ್ತ್ರಂ ತು ಹೇತೀನಾಂ ವಿನ್ಯಾಸಂ ತೇ ಮಹಾಮುನೇ**
**ಅಸ್ಯ ದಕ್ಷಿಣಹಸ್ತಾಗ್ರೇ ಚಕ್ರಂಚಾವಸ್ಥಿತೋಽಂಬುಜಮ್ ॥**
**ವಾಮೋರ್ಧ್ವ ಶಂಖ ಮನ್ಯಸ್ಮಿನ್ ಗದಾಸ್ಯ ಚಾಪ್ಯ ಧೋಮುಖಮ್**
**ಶ್ರೀಯಂ ತು ದಕ್ಷಿಣೇ ಪಾರ್ಶ್ವೇ ವಾಮೇ ಪುಷ್ಟಿಂ ತು ವಿನ್ಯಸೇತ್ ॥**
**ತುಷ್ಟಿಂ ವಾ ವಾಮಪಾರ್ಶ್ವೇ ತು ಕಾರಯೇನ್ಮುನಿಸತ್ತಮಾ**

(ವಿಷ್ವಕ್ಸೇನ ಸಂಹಿತೆ ೧೧ : ೯ - ೧೪)

ವಾಸುದೇವನ ರೂಪವನ್ನು ಆಯುಧಗಳನ್ನು ವಿವರಿಸುತ್ತೇನೆ. ಗೋಕ್ಷೀರದಂತೆ ಶುದ್ಧಬಿಳಿಯ ವರ್ಣದಲ್ಲಿ, ಸ್ಫಟಿಕದ ಮಣಿಯಂತೆ ಅಥವ ಶ್ಯಾಮಲ ವರ್ಣದ ಕಾಂತಿಯೊಂದಿಗೆ ಸ್ವಾಮಿಯನ್ನು ನಾಲ್ಕು ತೋಳಿರುವಂತೆ ರೂಪಿಸಬಹುದು. ಹಳದಿಯ ವಸ್ತ್ರಗಳನ್ನೂ, ರಕ್ತವರ್ಣದ ವಸ್ತ್ರಗಳನ್ನೂ ಈತನು ಧರಿಸುತ್ತಾನೆ. ಈತನಿಗೆ ಶಂಖ, ಚಕ್ರ, ಗದೆ ಮತ್ತು ಅಭಯ ಹಸ್ತವನ್ನು ರೂಪಿಸಬೇಕು. ಸರ್ವಾಭರಣಭೂಷಿತನಾಗಿರುವ ಈ ಸ್ವಾಮಿಯು ಸರ್ವಾಂಗ ಸುಂದರನು. ಈತನಿಗೆ ನಾಲ್ಕು ಹಸ್ತಗಳು. ಬಲಪಾರ್ಶ್ವದ ಮೇಲಿನ ಹಸ್ತದಲ್ಲಿ ಚಕ್ರವು, ಮುಂದಿನ ಹಸ್ತದಲ್ಲಿ ತಾವರೆಯು, ಎಡಪಾರ್ಶ್ವದ ಮೇಲಿನ ಹಸ್ತದಲ್ಲಿ ಶಂಖ ಮಂದಿನ ಹಸ್ತದಲ್ಲಿ ಕೆಳಮುಖವಾಗಿರುವ ಗದೆ ಇರುತ್ತವೆ. ಸ್ವಾಮಿಯ ಬಲ ಪಾರ್ಶ್ವದಲ್ಲಿ ಪುಷ್ಟೀದೇವಿ, ಎಡ ಪಾರ್ಶ್ವದಲ್ಲಿ ತುಷ್ಟಿದೇವಿ ಇರುತ್ತಾರೆ.

ಇನ್ನೊಂದು ರೂಪವು (ಈಶ್ವರಸಂಹಿತೆ ೨೪ : ೧೧೭ - ೧೧೯, ವಿಷ್ಣುಸಂಹಿತೆ ೬ : ೬೪ - ೬೫ ಮತ್ತು ವಿಷ್ವಕ್ಸೇನ ಸಂಹಿತೆ, ೨೦ : ೧೪೧) ಹೀಗೆ ವರ್ಣಿತವಾಗಿದೆ :

**ತತ್ರಾದ್ಯಂ ಭಗವದ್ರೂಪಂ ಹಿಮಕುಂದೇಂದು ಕಾಂತಿಮತ್**
**ಚತುರ್ಭುಜಂ ಸೌಮ್ಯವಕ್ತ್ರಂ ಪುಂಡರೀಕನಿಭೇಕ್ಷಣಮ್ ॥**
**ಪೀತಕೌಶೇಯ ವಸನಂ ಸುವರ್ಣಧ್ವಜ ಶೋಭಿತಮ್**
**ಮುಖ್ಯದಕ್ಷಿಣ ಹಸ್ತೇನ ಭೀತಾನಾಮಭಯ ಪ್ರದಮ್ ॥**
**ವಿದ್ಯಾಕೋಶಸ್ತು ವಾಮೇನ ಸಂಗೃಹೀತಾಶ್ಚಶಂಖರಾಟ್**
**ಪೃಷ್ಠಗೇ ಹ್ಯಪರಸ್ಮಿಂಸ್ತು ಪ್ರೋದ್ಯತಂ ದಕ್ಷಿಣೇ ತ್ವರಿ ॥**



ಚಿತ್ರ ೬೩ : ವ್ಯೂಹ ವಾಸುದೇವ - ೧

ವ್ಯೂಹಮೂರ್ತಿಗಳಲ್ಲಿ ಆದ್ಯನಾಗಿರುವ ವಾಸುದೇವನು ಹಿಮದಂತೆ ಅಥವ ಮಲ್ಲಿಗೆಯಂತೆ ಬಿಳುಪಾಗಿ ಶೋಭಾಯಮಾನನಾಗಿರುತ್ತಾನೆ. ಸೌಮ್ಯವಾದ ಒಂದೇ ಮುಖ. ನಾಲ್ಕು ಬಾಹುಗಳು. ಹಳದಿಯ ವಸ್ತ್ರಗಳನ್ನು ಧರಿಸಿದ್ದು ಸುವರ್ಣ ಧ್ವಜವನ್ನು ಹೊಂದಿರುತ್ತಾನೆ. ಬಲಹಸ್ತದಲ್ಲಿ ಆರ್ತರಿಗೆ, ಭೀತರಿಗೆ ಅಭಯವನ್ನು ನೀಡುತ್ತಿರುವ ಅಭಯ ಮುದ್ರೆ. ಮೇಲಿನ ಬಲಹಸ್ತದಲ್ಲಿ ಚಕ್ರವನ್ನು ಧರಿಸಿರುತ್ತಾನೆ. ಮುಂದಿನ ಎಡಹಸ್ತದಲ್ಲಿ ತಾಳೆಎಲೆಯ ಗ್ರಂಥ. ಸಮಾಜದ ಹಿತರಕ್ಷಣೆ ಮಾಡಲು ಎಡಪಾರ್ಶ್ವದ ಮೇಲಿನ ಹಸ್ತದಲ್ಲಿ ಶಂಖ.

ಈ ರೂಪದಲ್ಲೂ ಸ್ವಾಮಿಯನ್ನು ರೂಪಿಸಬಹುದು. ಈತನನ್ನು ಸೃಷ್ಟಿಸ್ಥಿತ್ಯಂತ ಮುಕ್ತಿದನೆಂದು ಹೇಳುತ್ತಾರೆ. ಹಯಶೀರ್ಷ ಸಂಹಿತೆಯು ಈ ಸ್ವಾಮಿಯನ್ನು ಶ್ರೀ ಭೂನೀಲಾಧಿಪನೆಂದು ಹೇಳುತ್ತದೆ. ಭಟ್ಟ ಭಾಸ್ಕರೀಯದಲ್ಲಿ ಈ ಸ್ವಾಮಿಯ ವರ್ಣನೆಯು ಇಂತಿದೆ :

**ವಾಸುದೇವಃ ಸಿತಃ ಶಾಂತಃ ಸಿತಾಬ್ಜಸ್ಥಶ್ಚತುರ್ಭುಜಃ**

**ಯೋಗಮೂರ್ಧೋರ್ಧ್ವ ಶಂಖಶ್ಚ ದಕ್ಷೇ ಶಾರ್ಙ್ಗಧರಃ ಸ್ಮೃತಃ**

**ಧಾರಯೇದುತ್ತರೇ ಚಕ್ರಂ ದಕ್ಷಿಣೇ ಚ ಗದಾ ಮಿತಿ ॥**

ವಾಸುದೇವ ವ್ಯೂಹಮೂರ್ತಿಯು ಬಿಳುಪಾದ ಕಾಂತಿಯಿಂದ ಶಾಂತಮುಖ ಮಂಡಲದಿಂದ, ನಾಲ್ಕು ತೋಳುಗಳೊಂದಿಗೆ ಬಿಳಿಯ ತಾವರೆಯ ಹೂವಿನಲ್ಲಿ ಕುಳಿತಿರುತ್ತಾನೆ. ಬಲಪಾರ್ಶ್ವದಲ್ಲಿ ಮಂದಿನ ಹಸ್ತದಲ್ಲಿ ಗದೆ, ಮೇಲಿನ ಹಸ್ತದಲ್ಲಿ ಶಾರ್ಙ್ಗಎನ್ನುವ ಬಿಲ್ಲು ಧರಿಸಿರುತ್ತಾನೆ. ಅದೇ ತೆರನಾಗಿ ಎಡಪಾರ್ಶ್ವದಲ್ಲಿ ಮುಂದಿನ ಹಸ್ತದಲ್ಲಿ ಶಂಖವನ್ನು, ಮೇಲಿನ ಹಸ್ತದಲ್ಲಿ ಚಕ್ರವನ್ನು ಧರಿಸಿರುತ್ತಾನೆ.

ರೂಪಮಂಡನದಲ್ಲಿ (೩ : ೧ - ೨) ವ್ಯೂಹ ಮೂರ್ತಿಗಳ ಬಣ್ಣಗಳ ಬಗ್ಗೆ ಈ ವಿವರಣೆ ದೊರೆಯುತ್ತದೆ

**ವಾಸುದೇವಃ ಸಂಕರ್ಷಣಃ ಪ್ರದ್ಯುಮ್ನಶ್ಚಾ ನಿರುದ್ಧಕಃ**

**ಶ್ವೇತರಕ್ತ ಪೀತ ಕೃಷ್ಣಾ: ಕ್ರಮಾತ್ ಕಲಿಯುಗಾದಿಷು ॥**

**ಪೂಜ್ಯಾ ದ್ವಿಜಾದಿಭೋಶ್ಚೈಷಾಂ ಛತ್ರಾಭಂ ಕುಕ್ಕುಟಾಂಡವತ್**

**ತ್ರಪುಷಾಭಶ್ಚ ಬಾಲೇಂದು ರೂಪಂ ಕುರ್ಯಾಚ್ಛಿರಃ ಕ್ರಮಾತ್ ॥**

ವಾಸುದೇವ ಸಂಕರ್ಷಣ ಪ್ರದ್ಯುಮ್ನ ಮತ್ತು ಅನಿರುದ್ಧ ಮೂರ್ತಿಗಳನ್ನು ಬಿಳಿಪು, ಕೆಂಪು, ಹಳದಿ ಮತ್ತು ಕಪ್ಪು ವರ್ಣಗಳ ಮೈಕಾಂತಿಯುಳ್ಳವರಂತೆ ಕಲಿಯುಗದಲ್ಲಿ ರೂಪಿಸಬೇಕು. ಇವರ ದೇಹ ವರ್ಣವು ಯುಗದೊಂದಿಗೆ ಬದಲಾಗುತ್ತದೆ. ಈ ಮೂರ್ತಿಗಳು ದ್ವಿಜ ವರ್ಣದವರಿಗೆ ಬಹು ಪೂಜ್ಯರಾದವರು.

ಈ ಮೂರ್ತಿಗಳ ಶಿರಗಳು ಕ್ರಮವಾಗಿ ಛತ್ರ, (ಛತ್ರಿ), ಕುಕ್ಕುಟಾಂಡ (ಕೋಳಿಮೊಟ್ಟೆ), ತ್ರಪುಷ (ಸೌತೇಕಾಯಿ) ಮತ್ತು ಬಾಲಚಂದ್ರನ ಆಕಾರದಲ್ಲಿರಬೇಕು

ಈ ವಿವರಣೆಯು ಶಿವಲಿಂಗಗಳ ಶಿರೋವರ್ತನದೊಂದಿಗೆ ಹೋಲುತ್ತದೆ. ಮೂರ್ತಿಶಿಲ್ಪದಲ್ಲಿ ಈ ರೀತಿಯ ಶಿರೋವರ್ತನ ನಡೆಸಿದರು ಅದರ ಮೇಲೆ ಕಿರೀಟ ಮುಕುಟ



ಚಿತ್ರ ೬೪ : ವ್ಯೂಹ ವಾಸುದೇವ - ೨

ಬರುವುದರಿಂದ ಅದನ್ನು ಮುಚ್ಚಬೇಕಾಗುತ್ತದೆ. ಮೌಳಿಗಳ ನಿರ್ಮಾಣದಲ್ಲಿ ಈ ಆಕಾರಗಳನ್ನು ರೂಪಿಸಬೇಕು. ವಿವರಣೆಯಲ್ಲಿ ಈ ರೀತಿಯ ರೂಪಗಳನ್ನು ಹೇಳಲಾಗಿದೆ. ಆದರೆ ಈಗ ದೊರೆಯುವ ಮೂರ್ತಿಗಳಲ್ಲಿ ಈ ಆಕಾರದ ಕಿರೀಟಗಳು ಕಂಡುಬಂದಿಲ್ಲ. ಬ್ರಹ್ಮನ ಲಿಂಗರೂಪಗಳು ವ್ಯಾಪಕವಾಗಿ ಕಾಣಸಿಗುತ್ತದೆ. ಹಾಗೆಯೇ ವಿಷ್ಣುವಿನ ಲಿಂಗ ರೂಪವೂ ಇದ್ದಿರಬಹುದು ಎಂಬ ಅನುಮಾನಕ್ಕೆ ಇದು ಅವಕಾಶಮಾಡುತ್ತದೆ. ಸಾಲಿಗ್ರಾಮವು ವಿಷ್ಣುವಿನ ಲಿಂಗರೂಪವೇ ಆಗಿದ್ದರೂ ಅದೂ ಅನೇಕ ಅವತಾರಗಳ ಸಂಕೇತವಾದುದರಿಂದ ಲಿಂಗರೂಪದ ನಿರ್ಮಾಣದ ಪ್ರಯತ್ನ ನಡೆದಿರಬಹುದು. ಆದರೆ ಈ ಹೇಳಿಕೆಗೆ ಇನ್ನೂ ಪುಷ್ಟಿ ದೊರೆಯಬೇಕಾಗಿದೆ.

ಪಾದ್ಮಸಂಹಿತೆಯಲ್ಲಿ (ಕ್ರಿ ೧೪ : ೮೮ - ೫೦) ಈ ಮೂರ್ತಿಗಳಿಗೆ ವರ್ಣಗಳನ್ನು ಹೀಗೆ ನಿಗದಿ ಪಡಿಸಲಾಗಿದೆ

**ಮೂರ್ತೀನಾಂ ಯುಗಭೇದೇನ ವರ್ಣಭೇದೋ ವಿಧೀಯತೇ**

**ಕೃತೇ ವಲಕ್ಷಸ್ತ್ರೇತಾಯಾಂ ಆರುಣೋ ದ್ವಾಪರೇ ಪುನಃ ||**

**ಪೀತಃ ಕಲೌ ಘನಶ್ಯಾಮಃ ವಾಸುದೇವ ಪರಃ ಪುಮಾನ್**

**ರಕ್ತಃ ಸಂಕರ್ಷಣೋ ದೇವಃ ಪ್ರದ್ಯುಮ್ನಃ ಕನಕ ಪ್ರಭಃ ||**

**ಶ್ಯಾಮೋನಿರುದ್ಧಃ ಕಥಿತಃ ಕೃತಾದಿಷು ಚತುರ್ಷ್ವಪಿ**

ಮೂರ್ತಿಗಳಿಗೆ ಯುಗ ಭೇದಗಳೊಂದಿಗೆ ಉಂಟಾಗುವ ವರ್ಣಗಳ ವ್ಯತ್ಯಾಸವನ್ನು ಹೀಗೆ ವಿವರಿಸಲಾಗಿದೆ

ಕೃತಯುಗದಲ್ಲಿ ಬಿಳುಪು, ತ್ರೇತಾಯುಗದಲ್ಲಿ ಕೆಂಪು, ದ್ವಾಪರದಲ್ಲಿ ಹಳದಿ, ಕಲಿಯುಗದಲ್ಲಿ ಘನಶ್ಯಾಮಲ ವರ್ಣ. ಇವು ವಾಸುದೇವನ ವರ್ಣಗಳು. ಸಂಕರ್ಷಣನು ಕೃತಯುಗದಲ್ಲಿ ಕೆಂಪಾಗಿರುತ್ತಾನೆ. ನಂತರ ವರ್ಣಗಳು ಯುಗದೊಂದಿಗೆ ಕ್ರಮವಾಗಿ ಬದಲಾಗುತ್ತವೆ. ಪ್ರದ್ಯುಮ್ನನು ಹಳದಿಬಣ್ಣದಲ್ಲಿರುತ್ತಾನೆ. ಅನಿರುದ್ಧನು ಶಾಮಲ ವರ್ಣ ದಲ್ಲಿರುತ್ತಾನೆ. ಇವರಿಬ್ಬರ ಬಣ್ಣಗಳೂ ಕ್ರಮವಾಗಿ ಯುಗಗಳೊಂದಿಗೆ ಬದಲಾಗುತ್ತವೆ.

ಈ ವರ್ಣಗಳು ಯುಗಗಳೊಂದಿಗೆ ಬದಲಾಗುವುದನ್ನು ಇಲ್ಲಿ ಕೊಟ್ಟಿರುವ ಪಟ್ಟಿಕೆಯಿಂದ ಸ್ಪಷ್ಟವಾಗುತ್ತದೆ.

| | ಯುಗ | ಬಿಳುಪು | ಕೆಂಪು | ಹಳದಿ | ಘನ ಶ್ಯಾಮಲ |
|---|---|---|---|---|---|
| ೧. | ಕೃತಯುಗ | ವಾಸುದೇವ | ಸಂಕರ್ಷಣ | ಪ್ರದ್ಯುಮ್ನ | ಅನಿರುದ್ಧ |
| ೨. | ತ್ರೇತಾಯುಗ | ಅನಿರುದ್ಧ | ವಾಸುದೇವ | ಸಂಕರ್ಷಣ | ಪ್ರದ್ಯುಮ್ನ |
| ೩. | ದ್ವಾಪರಯುಗ | ಪ್ರದ್ಯುಮ್ನ | ಅನಿರುದ್ಧ | ವಾಸುದೇವ | ಸಂಕರ್ಷಣ |
| ೪. | ಕಲಿಯುಗ | ಸಂಕರ್ಷಣ | ಪ್ರದ್ಯುಮ್ನ | ಅನಿರುದ್ಧ | ವಾಸುದೇವ |

ಇದು ಸಾಧಾರಣ ನಿಯಮ.

ವೈಖಾನಸ ಆಗಮದಲ್ಲಿ ವಾಸುದೇವ ಮೂರ್ತಿಯನ್ನು ಮಾನುಷಾ ವಾಸುದೇವ ಮತ್ತು ದೈವೀಕ ವಾಸುದೇವ ಎಂದು ಎರಡು ಬಗೆಯಾಗಿ ವಿವರಿಸಲಾಗಿದೆ. ಅದರಲ್ಲಿ ಮಾನುಷಾ ವಾಸುದೇವನ ಬಗ್ಗೆ ಈ ವಿವರಣೆ ದೊರೆಯುತ್ತದೆ :

**ಅಥ ಮಾನುಷಂ ವಾಸುದೇವಮಾಯತಾಶ್ರೇ ವಿಮಾನೇ ಮಧ್ಯಮಂ ದಶತಾಲಮಿತಂ ಸವಿಂಶತಿ ಶತಾಂಗುಲಂ ದ್ವಿಭುಜಂ ಚಕ್ರ ಶಂಖಧರಂ ದಕ್ಷಿಣೇ ರುಕ್ಮಿಣೀಂ ದೇವೀಂ ತದ್ದಕ್ಷಿಣೇ ಹಲಮುಸಲಧರಂ ಬಲಭದ್ರಂ ತದ್ದಕ್ಷಿಣೇ ಪ್ರದ್ಯುಮ್ನಂ ದ್ವಿಭುಜಂ ಕ್ಷುರಿಕಾಧರ ದಕ್ಷಿಣಹಸ್ತಂ ಕಟ್ಯಾವಲಂಬಿತ ವಾಮ ಹಸ್ತಂ ತದ್ದಕ್ಷಿಣೇ ವಿರಿಂಚಿ ಚತುರಾನನಂ ಚತುರ್ಭುಜಂ ದೇವಸ್ಯ ವಾಮಪಾರ್ಶ್ವೇಽನಿರುದ್ಧಂ ದ್ವಿಭುಜಂ ಖಡ್ಗ ಖೇಟಕಧರಂ ತದ್ವಾಮೇ ಸಾಂಬಂ ದ್ವಿಭುಜಂ ದಾನ ದಕ್ಷಿಣಕರ ಮನ್ಯದ್ದಂಡಧರಂ ತಸ್ಯವಾಮೇ ಗರುಡಂ ಚ ಕಾರಯೇತ್। ತೇಷಾಂ ವರ್ಣಾಂಬರಾಭರಣಾನಿ ಭೃಗೂಕ್ತವಿಧಿನಾ ಕಾರಯೇತ್। ದೇವಾನೇತಾಂಸ್ಥಿತಾನೇವ ಸಂಸ್ಥಾಪ್ಯ ತದ್ರೂಪಂ ತ ದೂರ್ಧ್ವಂ ಕೌತುಕಂ ಕಾರಯೇತ್। ಅಥವ ತೇಷಾಂ ಮಧ್ಯೇ ವಿಷ್ಣುಂ ಚತುರ್ಭುಜಮೇವ ಸ್ಥಾಪಯೇತ್**

ವಿಮಾನದಲ್ಲಿ ಮಧ್ಯಮದಶತಾಲದಲ್ಲಿ ಎಂದರೆ ೧೨೦ ಅಂಗುಳಗಳ ಎತ್ತರದಲ್ಲಿ ದ್ವಿಭುಜಗಳನ್ನು ಹೊಂದಿರುವಂತೆ ಮಾನುಷ ವಾಸುದೇವನನ್ನು ರೂಪಿಸಬೇಕು. ಬಲ ಹಸ್ತದಲ್ಲಿ ಚಕ್ರ, ಎಡ ಹಸ್ತದಲ್ಲಿ ಶಂಖವನ್ನು ಧರಿಸಿರುವ ಈ ಸ್ವಾಮಿಯ ಬಲ ಪಾರ್ಶ್ವದಲ್ಲಿ ರುಕ್ಮಿಣೀದೇವಿಯು ಇರಬೇಕು. ದೇವಿಯ ಬಲ ಪಾರ್ಶ್ವದಲ್ಲಿ ಹಲ ಮುಸಲಗಳನ್ನು ಧರಿಸಿರುವ ಬಲಭದ್ರದೇವನು, ಆತನ ಬಲಪಾರ್ಶ್ವದಲ್ಲಿ ಎರಡು ಭುಜಗಳಿದ್ದು ಬಲಹಸ್ತದಲ್ಲಿ ಕತ್ತಿಯನ್ನು ಧರಿಸಿದ್ದು ಎಡಹಸ್ತವನ್ನು ಕಟ್ಯಾವಲಂಬಿತ ಹಸ್ತವನ್ನಾಗಿ ಸೊಂಟದ ಎಡ ಭಾಗದ ಅಂಚಿನ ಮೇಲೆ ಕೈ ಇರಿಸಿಕೊಂಡಿರುವ ಪ್ರದ್ಯುಮ್ನನು ಇರುತ್ತಾನೆ. ಈತನ ಬಲ ಪಾರ್ಶ್ವಕ್ಕೆ ಚತುರ್ಮುಖನಾದ ಬ್ರಹ್ಮದೇವನು, ನಾಲ್ಕು ಭುಜಗಳನ್ನು ಪಡೆದಿರುತ್ತಾನೆ. ವಾಸುದೇವನ ಎಡ ಪಾರ್ಶ್ವದಲ್ಲಿ ಎರಡು ತೋಳುಗಳುಳ್ಳ ಅನಿರುದ್ಧನು ಖಡ್ಗ ಖೇಟಗಳನ್ನು ಧರಿಸಿರುತ್ತಾನೆ. ಆತನ ಎಡಭಾಗದಲ್ಲಿ ಸಾಂಬನು ಎರಡು ಭುಜಗಳೊಂದಿಗೆ ಇರುತ್ತಾನೆ. ಬಲಹಸ್ತದಲ್ಲಿ ವರದ ಮುದ್ರೆಯನ್ನು, ಎಡಹಸ್ತದಲ್ಲಿ ದಂಡವನ್ನು ಹಿಡಿದಿರುತ್ತಾನೆ. ಈತನ ಎಡಪಾರ್ಶ್ವದಲ್ಲಿ ಗರುಡನು ಇರಬೇಕು. ಈ ಸ್ವಾಮಿಗಳೆಲ್ಲರೂ ಬಣ್ಣ ಬಣ್ಣದ ವಸ್ತ್ರಗಳನ್ನು, ನಾನಾ ಬಗೆಯ ಆಭರಣಗಳನ್ನು ಧರಿಸಿರುತ್ತಾರೆ. ಈ ಎಲ್ಲಾ ದೇವತೆಗಳ ಮಧ್ಯಭಾಗದಲ್ಲಿ ಅಥವ ಮೇಲೆ ಚತುರ್ಭುಜ ವಿಷ್ಣುಮೂರ್ತಿಯನ್ನು ರೂಪಿಸಿ ಸ್ಥಾಪಿಸಬೇಕು.

ದೈವಿಕ ವಾಸುದೇವಮೂರ್ತಿಯ ಬಗ್ಗೆ ಈ ರೀತಿಯ ವಿವರಣೆ ಇದೆ :

**ದೈವಿಕ ವಾಸುದೇವಂ ಸಿಂಹಾಸನೇ ಸಮಾಸೀನಂ ಚತುರ್ಭುಜಂ ಶಂಖಚಕ್ರಧರಂ ಶ್ರೀಭೂಮ್ಯಾ ಸಹಿತಂ ತಥಾ ದೇವಸ್ಯ ದಕ್ಷಿಣವಾಮಯೋಃ ಪೂರ್ವೋಕ್ತಾಂದೇವಾನ್ಬಲಭದ್ರಸ್ಯ ದಕ್ಷಿಣೇ ದೇವೀಂ ರೇವತೀಂ ಪ್ರದ್ಯುಮ್ನಸ್ಯ ದಕ್ಷಿಣೇ ರೋಹಿಣೀಮನಿರುದ್ಧಸ್ಯೇಷಾಂ ಸಾಂಬ ಸ್ಯೇಂದು ಕರೀಂ ಚ ಸಹೈವ ಸ್ಥಾಪಯೇತ್ । ವಿತೇಷಾಂ ಕೌತುಕಬಿಂಬಂ ಪೂರ್ವವತ್ ।**

ದೈವಿಕ ವಾಸುದೇವನು ಸಿಂಹಾಸನದಲ್ಲಿ ಮಂಡಿಸಿರುತ್ತಾನೆ. ಈತನ ಎಡ ಬಲಗಳಲ್ಲಿ ಶ್ರೀದೇವಿ ಭೂದೇವಿಗಳಿರುತ್ತಾರೆ. ನಾಲ್ಕು ತೋಳುಗಳಿರುವ ಈತನು ಶಂಖ ಚಕ್ರಗಳನ್ನು ಧರಿಸಿರುತ್ತಾನೆ. ಈ ಮೊದಲೇ ಹೇಳಿರುವಂತೆ ದೇವನ ಬಲ ಪಾರ್ಶ್ವದಲ್ಲಿ ಬಲಭದ್ರನು ರೇವತಿ ದೇವಿಯೊಂದಿಗೆ ಸಿಂಹಾಸನದಲ್ಲಿ ಮಂಡಿಸಿರುತ್ತಾನೆ. ಇವರ ಬಲ ಭಾಗದಲ್ಲಿ ಸಾಂಬ ಮತ್ತು ಆತನ ದೇವಿಯೊಂದಿಗೆ ಸ್ಥಾಪಿಸಬೇಕು. ಇವರ ಕೌತುಕ ಬೇರವನ್ನು ಈ ಮೊದಲೇ ಹೇಳಿರುವಂತೆ ಮಾಡಬೇಕು.

## ೨. (ವ್ಯೂಹ) ಸಂಕರ್ಷಣ ಮೂರ್ತಿ

ಸಂಕರ್ಷಣ ಎಂದರೆ ಬಲರಾಮ. ಈ ಬಗ್ಗೆ ಅವತಾರ ಮೂರ್ತಿಗಳಲ್ಲಿ ಪ್ರತ್ಯೇಕವಾಗಿ ಈಗಲೇ ಹೇಳಿದೆ. ಆದರೂ ವ್ಯೂಹಮೂರ್ತಿಗಳಲ್ಲಿ ಸಂಕರ್ಷಣ ಮೂರ್ತಿಯ ವೈಶಿಷ್ಟ್ಯವೇ ಪ್ರತ್ಯೇಕ. ಆದ್ದರಿಂದ ವ್ಯೂಹ ಮೂರ್ತಿಗಳಲ್ಲಿರುವ ಸಂಕರ್ಷಣ ಎಂಬ ಹೆಸರಿನ ಬಲರಾಮನೇ ಪ್ರತ್ಯೇಕ ಎಂದು ಭಾವಿಸ ಬೇಕು. ವ್ಯೂಹ ವಾಸುದೇವನು ಪರಾವಾಸುದೇವನಲ್ಲಿ ಇಬ್ಭಾಗವಾಗಿರುವ ಷಡ್ಗುಣಗಳಲ್ಲಿ ಬಲ - ವೀರ್ಯ - ತೇಜಸ್ಸುಗಳ ಗುಂಪಿನಿಂದ ಸಂಕರ್ಷಣ ಮೂಡಿದ. ಈತನನ್ನು ವಾಸುದೇವನೇ ಹೊರಕ್ಕೆ ಎಳೆದು ಹಾಕಿದ. ಜ್ಞಾನ - *ಬಲಗಳ ಸಮಾಯುಕ್ತನಾದ ಈತನು ಪ್ರಕೃತಿ ರೂಪನು* ಎಂದು ಭಾವಿಸುತ್ತಾರೆ. ಈತನು ಜ್ಞಾನ - ಬಲಗಳು ಉಳ್ಳವನೆಂದು ಹೇಳಿದರೂ, ಷಡ್ಗುಣಗಳೆಲ್ಲಾ ಈತನಲ್ಲಿ ಉಂಟೆಂದು ಭಾವಿಸುತ್ತಾರೆ. ಈತನ ಮೂರ್ತಿಕಲ್ಪವು ಪ್ರತ್ಯೇಕವಾಗಿ ಹೇಳಲಾಗುತ್ತದೆ.

**ಕಿಂ ತು ದ್ವಿತೀಯ ಮೂರ್ತೇರ್ವೈ ಶುಭೇ ಪಾಣಿತಲದ್ವಯೇ ||**
**ಸ್ಫುಟೋ ರೇಖಾಮಯಃ ಶಂಖಃ ಸುವ್ಯಕ್ತಂ ಲಾಂಗಲಂ ಮಹತ್**
**ರಮ್ಯೇಷುಣಾ ತೃತೀಯಸ್ಯ ದಕ್ಷಿಣಶ್ಚಿ ಹ್ನಿತಃ ಕರಃ ||**
**ತುರ್ಯ ಸ್ಯಾಪಿವರೇಣೈವ ಶಂಖ ಆಭ್ಯಾಂ ಕರದ್ವಯೇ**
**ಅವರಙ್ಮುಖಃ ಕರವಶಾದೂರ್ಧ್ವವಕ್ತ್ರಃ ಸ್ವಭಾವತಃ ||**
**ಏತಾವತಾ ಲಕ್ಷಣೇನ ವ್ಯಕ್ತಿಭಾವಂ ಗತೇನ ಚ**
**ಭಾವಸ್ಥಿತಿಂ ನಿಬಧ್ನಾತಿ ವ್ಯೂಹೇSಸ್ಮಿನ್ ಸಾಧಕಸ್ಯ ತು ||**

(ಈಶ್ವರ ಸಂಹಿತೆ ೨೪ - ೮೪ - ೮೭)

ವ್ಯೂಹಮೂರ್ತಿಗಳಲ್ಲಿ ಎರಡನೆಯವನಾದ ಸಂಕರ್ಷಣನು ಎರಡು ಭುಜಗಳನ್ನು ಹೊಂದಿದ್ದವನಾಗಿ ಶಂಖ ಮತ್ತು ಲಾಂಗಲ (ನೇಗಿಲು) ಹಿಡಿದಿರುವಂತೆ ರೂಪಿಸಬೇಕು.

**ಬಾಲಸೂರ್ಯ ಪ್ರತೀಕಾಶಸ್ಸಂಕರ್ಷಣ ಇತಿ ಸ್ಮೃತಃ ||**
**ಪೀತವಸ್ತ್ರಧರ ಸ್ಸಾಕ್ಷಾಚ್ಚತುರ್ಬಾಹು ವಿರಾಜಿತಃ**
**ಸರ್ವಾವಯವ ಸಂಯುಕ್ತ ಸ್ಸರ್ವಾಭರಣ ಭೂಷಿತಃ ||**
**ಸರ್ವಾಲಂಕಾರ ಸಂಯುಕ್ತಶ್ಶಂಖ ಚಕ್ರಧರ ಸ್ಸದಾ**
**ಇತಿ ಸಂಕರ್ಷಣಂ ರೂಪಮಸ್ಯ ವೈ ದಕ್ಷಿಣೇ ಕರೇ ||**
**ಊರ್ಧ್ವಂ ಚಕ್ರಂ ತ್ವಧೋ ಹಸ್ತೇ ಮುಸಲಂ ವಿನ್ಯಸೇತ್ಸುಧೀಃ**
**ವಾಮೋರ್ಧ್ವ ಶಂಖ ಮಿತ್ಯುಕ್ತಂ ಪುಂಡರೀಕಂ ತ್ವಧಃಕರೇ ||**
**ದಕ್ಷಿಣೇ ತು ಶ್ರಿಯಂ ವಾಮೇ ಪುಷ್ಟಿಂ ಸಂಸ್ಥಾಪಯೇದ್ಬುಧಃ**

(ವಿಷ್ವಕ್ಸೇನ ಸಂಹಿತೆ, ೯ : ೧೫ - ೧೯)

ವ್ಯೂಹಮೂರ್ತಿಗಳಲ್ಲಿ ಎರಡನೆಯವನಾದ ಸಂಕರ್ಷನ ಬಗ್ಗೆ ವಿವರಣೆ ಇಂತಿದೆ: ಬಾಲಸೂರ್ಯನಂತೆ ಕೆಂಪಾಗಿರುವ ಈ ಸ್ವಾಮಿಯು ಹಳದಿವಸ್ತ್ರಗಳನ್ನು ಧರಿಸಿದ್ದು ನಾಲ್ಕು ತೋಳನ್ನು ಹೊಂದಿದ್ದಾನೆ. ಸರ್ವ ಅವಯವಗಳನ್ನು ಹೊಂದಿದ್ದು ಸಕಲ ಆಭರಣಗಳನ್ನು ಧರಿಸಿರುತ್ತಾನೆ. ಎಲ್ಲಾ ಅಲಂಕಾರಗಳನ್ನು ಪಡೆದುಕೊಂಡು ಬಲಪಾರ್ಶ್ವದ ಮೇಲಿನ ಹಸ್ತದಲ್ಲಿ

ಚಕ್ರವನ್ನು, ಕೆಳಗಿನ ಹಸ್ತದಲ್ಲಿ ಮುಸಲ (ಒನಕೆ)ವನ್ನು ಹಿಡಿದಿರುತ್ತಾನೆ. ಎಡಪಾರ್ಶ್ವದ ಮೇಲಿನ ಹಸ್ತದಲ್ಲಿ ಶಂಖವನ್ನು, ಕೆಳಗಿನ ಹಸ್ತದಲ್ಲಿ ಬಿಳಿಯ ತಾವರೆಯನ್ನು ಹಿಡಿದಿರುತ್ತಾನೆ. ಈ ಸ್ವಾಮಿಯ ಬಲಭಾಗದಲ್ಲಿ ಶ್ರಿದೇವಿ, ಎಡಭಾಗದಲ್ಲಿ ಪುಷ್ಟಿದೇವಿ ಇರುತ್ತಾರೆ.

ಲಕ್ಷ್ಮೀ ತಂತ್ರ (೧೦ : ೩೧ - ೩೩) ಮತ್ತು ಈಶ್ವರ ಸಂಹಿತೆಯಲ್ಲಿ (೨೪ : ೧೨೦-೧೨೨) ಸಂಕರ್ಷನ ಇನ್ನೊಂದು ಸ್ವರೂಪದ ವಿವರಣೆ ದೊರೆಯುತ್ತದೆ:

**ತಥಾವಿಧೇ ಗದಾ ವಾಮೇ ನಿಷಣ್ಣ ವಸುಧಾತಲೇ**
**ಸಿಂದೂರ ಶಿಖರಾಕಾರಮೇಕವಕ್ತ್ರಂ ಚತುರ್ಭುಜಮ್ ||**
**ಅತಸೀ ಪುಷ್ಪಸಂಕಾಶವಾಸೋ ಭೃತ್ತಾಲ ಲಾಂಛಿತಮ್**
**ಮುಖ್ಯೇನ ಪಾಣಿಯುಗ್ಮೇನ ತುಲ್ಯ ಮಾದ್ಯಸ್ಯ ವೈ ವಿಭೋಃ ||**
**ಸೀರಂ ತಚ್ಚಕ್ರ ಹಸ್ತೇSಸ್ಯ ಮುಸಲಂ ತು ಗದಾಕರೇ**
**ಪ್ರಾವೃಣ್ಣ ಶಾಸಮುದಿತ ಖದ್ಯೋತ ಚಯದೀಧಿತಿ ||**

ಒಂದೇ ಮುಖ, ನಾಲ್ಕು ಭುಜಗಳನ್ನು ಪಡೆದಿದ್ದು ಕೆಂಪು ವರ್ಣದ ಮೈಕಾಂತಿಯಿಂದ ಶೋಭಾಯಮಾನವಾಗಿರುತ್ತಾನೆ. ವಾಸುದೇವನಂತೆಯೇ ಶಂಖ, ಚಕ್ರ, ಗದೆ ಪದ್ಮ ಧರಿಸಿರಬಹುದು. ಅಗಸೆ ಹೂವಿನಂತೆ ಕಣ್ಣಿನ ಬಣ್ಣವನ್ನು ಉಳ್ಳವನಾಗಿ ಚಕ್ರವನ್ನು ಹಿಡಿಯುವ ಹಸ್ತದಲ್ಲಿ ನೇಗಿಲನ್ನು, ಗದೆಯನ್ನು ಹಿಡಿಯುವ ಹಸ್ತದಲ್ಲಿ ಮುಸಲವನ್ನು ಹಿಡಿದಿರುತ್ತಾನೆ. ಈತನು ಸೂರ್ಯನಂತೆ ತೇಜಶ್ಶಾಲಿ.

ಪರಾಶರ ಸಂಹಿತೆಯಲ್ಲಿ (೧೩ : ೯೩) ಬಹು ಆಕರ್ಷಕ ರೂಪಿನ ಈ ಸ್ವಾಮಿ ಚಕ್ರ ಶಂಖ, ಗದಾ, ಶೂಲ ಧಾರಿ (**ಚಕ್ರಶಂಖಗದಾಶೂಲ ಧರಂ ಕಾಮಾದಿ ರೂಪಿಣಮ್**) ಎಂದು, ವಿಷ್ವಕ್ಸೇನ ಸಂಹಿತೆಯು (೨೦ : ೧೪೨) **ಶಂಖ ಚಕ್ರ ಗದಾಪಾಣಿಂ** ಎಂದು ಇನ್ನೊಂದು ಹಸ್ತ ಅಭಯ ಮುದ್ರೆಯಲ್ಲಿದೆ ಎಂಬ ಸೂಚನೆಯನ್ನು ಕೊಡುತ್ತದೆ. ಹಯಶೀರ್ಷ ಸಂಹಿತೆ (ಆದಿ ೨೧ : ೫)ಯು -

**ಲಾಂಗಲೀ ಮುಸಲೀ ದೇವೋ ಗದಾಪದ್ಮಧರೋ ವಿಭುಃ**
**ಶಂಖ ಚಕ್ರ ಗದಾಪಾಣಿಃ ಕರ್ತವ್ಯೋ ವರದೋSಥವಾ ||**

ಎಂದರೆ ನೇಗಿಲು - ಒನಕೆ (ಮುಸಲ) - ಗದೆ - ಪದ್ಮಗಳನ್ನಾಗಲಿ, ಶಂಖ - ಚಕ್ರ - ಗದೆ ಮಾತ್ರಧರಿಸಿ ಇನ್ನೊಂದನ್ನು ವರದ ಹಸ್ತವಾಗಿರೂಪಿಸಬಹುದು ಎಂದು ಹೇಳುತ್ತದೆ.

ಮಾರ್ಕಂಡೇಯ ಸಂಹಿತೆ (೮ : ೧೦) **ಸಂಕರ್ಷಣಂ ಗದಾಶಂಖವಾರಿಜಂ ಚಕ್ರಪಾಣಯಃ** ಎಂದು ವರ್ಣಿಸಿದರೆ, ಪಾದ್ಮ ಸಂಹಿತೆಯಲ್ಲಿ (ಕ್ರಿ ೧೬ : ೩೭) **ಗದಾ ಶಂಖಾಬ್ಜ ಚಕ್ರಾಣಿ ಧಾರಯಂತಂ ಚತುರ್ಭುಜಮ್** ಎಂದು ಹೇಳುತ್ತದೆ. ಗರುಡ ಸಂಹಿತೆಯು **ಸಂಕರ್ಷಣಃ ಶಂಖ ಕಂಜ ಚಕ್ರ ಕೌಮೋದಕಿಧರಃ** (ಶಂಖ - ಪದ್ಮ - ಚಕ್ರ - ಗದೆ) ಧರಿಸಿರುತ್ತಾನೆಂದು ವರ್ಣಿಸುತ್ತದೆ.

ಭಟ್ಟ ಭಾಸ್ಕರೀಯದಲ್ಲಿ ಈ ವರ್ಣನೆ ದೊರೆಯುತ್ತದೆ:

**ವಾಸುದೇವ ಸ್ವರೂಪೇಣ ಕಾರ್ಯಃ ಸಂಕರ್ಷಣಃ ಪ್ರಭುಃ**
**ಸ ತು ಶುಕ್ಲವಪುಃ ಕಾರ್ಯೋ ನೀಲವಾಸಾ ಯದೂತ್ತಮಃ ||**
**ಗದಾಸ್ಥಾನೇ ಚ ಮುಸಲಂ ಚಕ್ರಸ್ಥಾನೇ ಚ ಲಾಂಗಲಮ್**
**ಕರ್ತವ್ಯೌ ತನುಮಧ್ಯೌ ತು ಸ್ವರೂಪೌ ರೂಪಸಂಯುತೌ ||**



ಚಿತ್ರ ೬೫ : ವ್ಯೂಹ ಸಂಕರ್ಷಣ ಮೂರ್ತಿ

ಸಂಕರ್ಷಣಮೂರ್ತಿಯು ಬಲರಾಮನೇ (ಯದುಕುಲೋತ್ತಮ). ಈತನು ವಾಸುದೇವನ ಸ್ವರೂಪದಲ್ಲಿಯೇ ಇರುತ್ತಾನೆ. ಆದರೂ ಕೆಲವು ಅಂತರಗಳನ್ನು ತೋರಿಸಬಹುದು. ಮೈಕಾಂತಿ ಬಿಳುಪು. ವಸ್ತ್ರಗಳು ಕಪ್ಪು. ನಾಲ್ಕು ತೋಳುಗಳಿದ್ದು ವಾಸುದೇವನು ಗದೆ ಧರಿಸಿರುವ ಮುಂದಿನ ಬಲ ಹಸ್ತದಲ್ಲಿ ಮುಸಲ (ಒನಕೆ)ವನ್ನೂ, ಚಕ್ರವನ್ನು ಧರಿಸಿರುವ ಹಸ್ತದಲ್ಲಿ ನೇಗಿಲನ್ನು ಧರಿಸಿರುತ್ತಾನೆ. ಬಲಪಾರ್ಶ್ವದಲ್ಲಿ ಮುಂದಿನ ಹಸ್ತದಲ್ಲಿ ಮುಸಲವನ್ನು, ಮೇಲಿನ ಹಸ್ತದಲ್ಲಿ ಶಾರ್ಙ್ಗವೆಂಬ ಬಿಲ್ಲನ್ನು, ಹಾಗೆಯೇ ಎಡ ಪಾರ್ಶ್ವದಲ್ಲಿ ಮುಂದಿನಹಸ್ತದಲ್ಲಿ ಲಾಂಗಲವನ್ನು (ನೇಗಿಲನ್ನು), ಮೇಲಿನ ಹಸ್ತದಲ್ಲಿ ಶಂಖವನ್ನು ಧರಿಸಿರುತ್ತಾನೆ.

ಇದೇ ವರ್ಣನೆಯು ವಿಷ್ಣುಧರ್ಮೋತ್ತರ ಪುರಾಣದಲ್ಲಿ ದೊರೆಯುತ್ತದೆ.

## ೩. ( ವ್ಯೂಹ ) ಪ್ರದ್ಯುಮ್ನ ಮೂರ್ತಿ

ವ್ಯೂಹಮೂರ್ತಿಗಳಲ್ಲಿ ಮೂರನೆಯವನು. ಷಡ್ಗುಣಗಳಲ್ಲಿ ಐಶ್ವರ್ಯ ವೀರ್ಯಗಳನ್ನು ಉಳ್ಳವನು. ಈತನ ಮೈಬಣ್ಣವು ಗರಿಕೆಯ ಬಣ್ಣ ಅಥವ ಮರಕತದ ಬಣ್ಣ ಎಂದು ವಿಷ್ಣುಸಂಹಿತೆ ಹೇಳುತ್ತದೆ (**ದೂರ್ವಾಮರಕತ ಪ್ರಖ್ಯಂ ಪ್ರದ್ಯುಮ್ನಂ**). ವರದಾಭಯ ಹಸ್ತಗಳೊಂದಿಗೆ ರಕ್ತ ವಸ್ತ್ರಧರಿಸಿರುತ್ತಾನೆ ಎಂದು ಲಕ್ಷ್ಮೀ ತಂತ್ರ (೩೮ : ೫೬)ವು **[ವರದಾಭಯ ಹಸ್ತಂ ಚ ನಿಮಗ್ನೋದ್ಧರಣಕ್ಷಮಮ್]** ಹೇಳುತ್ತದೆ. ಮಾರ್ಕಂಡೇಯ (೮ : ೧೧) ಮತ್ತು ಪಾದ್ಮಸಂಹಿತೆ (೧೬ : ೩೮) **ಪ್ರದ್ಯುಮ್ನ ಶ್ಯಂಖ ಚಕ್ರಾಭ್ಯಾಂ ಸಹ ದಂಡಧರೋಽಬ್ಜವಾನ್** ಎಂದು ಶಂಖ ಚಕ್ರ ದಂಡ ಕಮಲಧಾರಿ ಎಂದು ವರ್ಣಿಸಿದೆ. ವಿಷ್ವಕ್ಸೇನ ಸಂಹಿತೆ (೧೧ : ೨೦ - ೨೨) ಹೀಗೆ ಹೇಳುತ್ತದೆ :

**ಪೀತಾಂಬರಂ ಚತುರ್ಬಾಹುಂ ಸರ್ವಾವಯವ ಸಂಯುತಮ್**
**ಶಂಖ ಚಕ್ರ ಗದಾಪಾಣಿಂ ಸರ್ವಾಭರಣಭೂಷಿತಮ್ ||**
**ಸರ್ವಾಲಂಕಾರ ಸಂಯುಕ್ತಮಿತ್ಥಂ ಪ್ರದ್ಯುಮ್ನರೂಪಕಮ್**
**ದಕ್ಷಿಣೋರ್ಧ್ವಕರೇ ಪದ್ಮಮಧಃ ಕೌಮೋದಕೀಂ ನ್ಯಸೇತ್ ||**
**ವಾಮೋರ್ಧ್ವಾಧಃ ಸ್ಥಿತೇ ಹಸ್ತೇ ಶಂಖಚಕ್ರಂತು ವಿನ್ಯಸೇತ್**
**ಇತ್ಥಂ ಪ್ರದ್ಯುಮ್ನ ಮೂರ್ತೇಂತೇ ದೇವರ್ಷೇ ವರ್ಣಿತೋಽಧುನಾ ||**

ಪೀತಾಂಬರವನ್ನು ಧರಿಸಿದ್ದು ನಾಲ್ಕು ಬಾಹುಗಳನ್ನು ಸರ್ವಾವಯಗಳನ್ನು ಹೊಂದಿರುವ ಸ್ವಾಮಿಯು ಸಕಲಾಭರಣಗಳನ್ನು, ಶಂಖ ಚಕ್ರ ಗದೆಗಳನ್ನು ಧರಿಸಿರುತ್ತಾನೆ. ಸರ್ವಾಲಂಕಾರಗಳಿಂದ ಶೋಭಿತನಾಗಿರುವ ಪ್ರದ್ಯುಮ್ನ ರೂಪದ ಸ್ವಾಮಿಯು ಬಲಪಾರ್ಶ್ವದ ಮುಂದಿನ ಹಸ್ತದಲ್ಲಿ ಪದ್ಮವನ್ನು ಮೇಲಿನ ಹಸ್ತದಲ್ಲಿ ಕೌಮೋದಕಿ ಗದೆಯನ್ನು ಧರಿಸಿರುತ್ತಾನೆ. ಎಡಪಾರ್ಶ್ವದ ಮುಂದಿನ ಹಸ್ತದಲ್ಲಿ ಚಕ್ರವನ್ನು ಮೇಲಿನ ಹಸ್ತದಲ್ಲಿ ಶಂಖವನ್ನು ಧರಿಸಿರುತ್ತಾನೆ. ಈ ಸ್ವರೂಪದಲ್ಲಿ ಪ್ರದ್ಯುಮ್ನ ಮೂರ್ತಿಯನ್ನು ದೇವರ್ಷಿ ನಾರದರು ವರ್ಣಿಸಿದ್ದಾರೆ.

ಪರಾಶರ ಸಂಹಿತೆಯು (೧೩ : ೧೦೫) ವಿದ್ಯಾದಾಯಕನಾದ ಪ್ರದ್ಯುಮ್ನನು ಚಕ್ರ- ಶಂಖ - ಶೂಲಧಾರಿ (**ಚಕ್ರಶಂಖಾಸಿಶೂಲಾದಿ ಧರಂ**) ಎಂದು ಹೇಳಿ ಇನ್ನೊಂದು ಹಸ್ತದಲ್ಲಿ ತಾಳೇಗರಿ

ಗ್ರಂಥವನ್ನು ಇರಿಸಬಹುದೆಂಬ ಸೂಚನೆಯನ್ನು ಕೊಡುತ್ತದೆ. ಲಕ್ಷ್ಮೀ ತಂತ್ರದಲ್ಲಿ (೧೦ : ೩೪ - ೩೬) ಈ ರೀತಿಯ ಧ್ಯಾನವಿದೆ :

**ಪ್ರಾವೃಣ್ಣಶಾಸಮುದಿತಖದ್ಯೋತ ನಿಚಯ ಪ್ರಭಮ್**
**ರಕ್ತ ಕೌಶೇಯವಸನಂ ಮಕರಧ್ವಜ ಶೋಭಿತಮ್ ||**
**ಸೌಮ್ಯವಕ್ತ್ರಂ ಚತುರ್ಬಾಹುಂ ತೃತೀಯಂ ಪರಮೇಶ್ವರಮ್**
**ಮುಖ್ಯಹಸ್ತದ್ವಯಂ ಚಾಸ್ಯ ಪ್ರಾಗ್ವತ್ತುಲ್ಯಂ ಮಹಾಮತೇ ||**
**ವಾಮೇಽಪರಸ್ಮಿನ್ ಶಾರ್ಙ್ಗ ಚ ದಕ್ಷಿಣೇ ಬಾಣ ಪಂಚಕಮ್**
**ಅಪರೇ ಚಿಂತಯೇದ್ಭಾಗೇ ಪ್ರದ್ಯುಮ್ನಮಿತಿ ಕೀರ್ತಿತಮ್ ||**

ಸೂರ್ಯನಂತೆ ತೇಜಶ್ಶಾಲಿಯಾದ ಮೂರನೆಯ ಪರಮೇಶ್ವರನು (ಮೂರನೆಯ ವ್ಯೂಹಮೂರ್ತಿ) ಕೆಂಪು ವಸ್ತ್ರಗಳನ್ನು, ಮಕರ ಧ್ವಜವನ್ನು ಧರಿಸಿರುತ್ತಾನೆ. ಸೌಮ್ಯ ಮುಖದ, ನಾಲ್ಕು ಬಾಹುಗಳನ್ನು ಹೊಂದಿರುವ ಮೇಲಿನ ಹಸ್ತಗಳಲ್ಲಿ ಮೊದಲೇ ಹೇಳಿರುವಂತೆ ಶಂಖ - ಚಕ್ರವನ್ನು ಧರಿಸಿದ್ದು ಮುಂದಿನ ಹಸ್ತಗಳಲ್ಲಿ ಎಡ ಹಸ್ತದಲ್ಲಿ ಶಾರ್ಙ್ಗ ಎಂಬ ಧನುಸ್ಸನ್ನು, ಬಲ ಹಸ್ತದಲ್ಲಿ ಐದು ಬಾಣಗಳನ್ನು ಧರಿಸಿರುತ್ತಾನೆ. ಈ ಸ್ವಾಮಿಯು ಪ್ರದ್ಯುಮ್ನನು.

ಹಯಶೀರ್ಷ ಸಂಹಿತೆ (ಆದಿ ೨೧ : ೬ - ೯) ಇನ್ನೂ ಹೆಚ್ಚು ವಿವರಗಳನ್ನು ವೈವಿಧ್ಯವನ್ನೂ ಹೇಳುತ್ತದೆ :

**ಪ್ರದ್ಯುಮ್ನಶ್ಚ ಚತುರ್ಬಾಹುಃ ಶಂಖಚಕ್ರಧರಃ ಪ್ರಭುಃ**
**ಚಕ್ರಂ ದಕ್ಷಿಣೇ ದದ್ಯಾತ್ ವಾಮಹಸ್ತೇ ಧನುಸ್ತಥಾ ||**
**ಶಂಖಂ ಚ ದಕ್ಷಿಣೇ ದದ್ಯಾತ್ ಗದಾಂ ವಾಮೇ ಚ ದಾಪಯೇತ್**
**ಪ್ರದ್ಯುಮ್ನಂ ಕಾರಯೇದ್ದೇವಂ ಸರ್ವಲಕ್ಷಣ ಲಕ್ಷಿತಮ್ ||**
**ಸ್ತ್ರಿಯೌ ಚೈವಾಸ್ಯ ಕರ್ತವ್ಯೇ ಖಡ್ಗ ಚರ್ಮಧರೇ ಶುಭೇ**
**ರತಿ ಪ್ರೀತ್ಯೋರ್ಮಧ್ಯಗತಂ ಕಂಬುಗ್ರೀವಂ ಸಕಾರ್ಮುಕಮ್ ||**
**ದ್ವಿಭುಜಂ ಶರಹಸ್ತಂ ವಾ ಪ್ರದ್ಯುಮ್ನಂ ಕಾರಯೇತ್ ಬುಧಃ**

ನಾಲ್ಕು ಬಾಹುಗಳಿರುವ ಪ್ರದ್ಯುಮ್ನ ಮೂರ್ತಿಯು ಮುಂದಿನ ಬಲ ಹಸ್ತದಲ್ಲಿ ಚಕ್ರವನ್ನು, ಎಡಹಸ್ತದಲ್ಲಿ ಧನುಸ್ಸನ್ನು, ಮೇಲಿನ ಬಲಹಸ್ತದಲ್ಲಿ ಶಂಖವನ್ನು, ಮೇಲಿನ ಎಡ ಹಸ್ತದಲ್ಲಿ ಗದೆಯನ್ನು ಧರಿಸಿರುತ್ತಾನೆ (ಧನುಸ್ಸು ಹಿಡಿದಿರುವ ಕೈಯಲ್ಲಿ ಪದ್ಮವಿದ್ದರೆ ಚತುರ್ವಿಂಶತಿ ಮೂರ್ತಿಗಳಲ್ಲಿರುವ ಪ್ರದ್ಯುಮ್ನಮೂರ್ತಿಯಾಗುತ್ತಾನೆ).

ಪ್ರದ್ಯುಮ್ನನನ್ನು ಎರಡೇ ತೋಳುಗಳಿರುವಂತೆಯೂ ರೂಪಿಸಬಹುದು. ಆಗ ಖಡ್ಗ ಮತ್ತು ಗುರಾಣಿ ಹಿಡಿದಿರುವಂತೆ ರೂಪಿಸಬೇಕು. ಪಕ್ಕದಲ್ಲಿ ರತೀದೇವಿ ಇರುವಂತೆ ಚಿತ್ರಿಸಬೇಕು.

ಕಾರ್ಮುಕವೆಂಬ ಧನುಸ್ಸನ್ನು ಹಿಡಿದು, ಬಾಣಗಳನ್ನು ಇನ್ನೊಂದು ಹಸ್ತದಲ್ಲಿ ಹಿಡಿದಿರುವಂತೆ ರೂಪಿಸಬೇಕು.

ಭಟ್ಟ ಭಾಸ್ಕರೀಯದಲ್ಲಿ ಈ ರೀತಿ ಧ್ಯಾನವು ದೊರೆಯುತ್ತದೆ :

**ದಕ್ಷಿಣೋರ್ಧ್ವಕರೇ ಪದ್ಮಂ ದಧ್ಯಾಚ್ಛಂಖ ಮಧಃ ಕರೇ**

**ಚಕ್ರಮೂರ್ಧ್ವೇ ತಥಾ ವಾಮೇ ಗದಾಂ ದಧ್ಯಾದಧಃ ಕರೇ ||**

ಹಳದಿವರ್ಣದ ಕಾಂತಿಯಿಂದ ನಾಲ್ಕು ತೋಳು ಪಡೆದುಕೊಂಡಿರುವ ಪ್ರದ್ಯುಮ್ನನು ಬಲಪಾರ್ಶ್ವದಲ್ಲಿ ಮುಂದಿನ ಹಸ್ತದಲ್ಲಿ ಶಂಖವನ್ನು, ಮೇಲಿನ ಹಸ್ತದಲ್ಲಿ ಪದ್ಮವನ್ನು, ಎಡಪಾರ್ಶ್ವದಲ್ಲಿ ಮುಂದಿನ ಹಸ್ತದಲ್ಲಿ ಗದೆಯನ್ನು, ಮೇಲಿನ ಹಸ್ತದಲ್ಲಿ ಚಕ್ರವನ್ನು ಹಿಡಿದಿರುತ್ತಾನೆ.

ಮೇಲ್ನೋಟಕ್ಕೆ ಇದು ಚತುರ್ವಿಂಶತಿ ಮೂರ್ತಿಗಳಲ್ಲಿಯ ಪ್ರದ್ಯುಮ್ನನೇ ಎಂದು ತೋರಿದರೂ ಆಯುಧಗಳ ಕ್ರಮದಲ್ಲಿ ಅಂತರವಿದೆ. ಚತುರ್ವಿಂಶತಿಮೂರ್ತಿಯ ಬಲಕೆಳ ಹಸ್ತದಲ್ಲಿ ಗದೆ ಮೇಲಿನ ಹಸ್ತದಲ್ಲಿ ಶಂಖ, ಎಡ ಕೆಳಹಸ್ತದಲ್ಲಿ ಪದ್ಮ ಮೇಲಿನ ಹಸ್ತದಲ್ಲಿ ಚಕ್ರವನ್ನು ಧರಿಸರುತ್ತಾನೆ ಎಂಬುದನ್ನು ಗಮನಿಸಬೇಕು.

**ವಾಸುದೇವ ಸ್ವರೂಪೇಣ ಪ್ರದ್ಯುಮ್ನ ಶ್ಚ ತಥಾ ಭವೇತ್**
**ಸ ತು ದೂರ್ವಾಂಕುರ ಶ್ಯಾಮಾ ಸ್ಸಿತವಾಸಾ ವಿಧೀಯತೇ ||**
**ಚಕ್ರಸ್ಥಾನೇ ಭವೇಚ್ಚಾಪೋ ಗದಾಸ್ಥಾನೇ ತಥಾ ಶರಃ**
**ತಥಾವಿಧೌ ತೌ ಕರ್ತವ್ಯೌ ಯಥಾ ಮುಸಲಲಾಂಗಲೌ ||**
**ಚಾಪ ಬಾಣಧರಃ ಕಾರ್ಯಃ ಪ್ರದ್ಯುಮ್ನ ಸುದರ್ಶನಃ**
**ರಾಜ ನ್ನಿಂದ್ರ ಮಣಿ ಶ್ಯಾಮಶ್ವೇತವಾಸಾ ಮದೋತ್ಕಟಃ ||**

(ವಿಷ್ಣುಧರ್ಮೋತ್ತರ ಪುರಾಣಂ)

ಪರಾ ವಾಸುದೇವನ ಸ್ವರೂಪನೇ ಆಗಿದ್ದು ಆತನಿಂದ ಆವಿರ್ಭವಿಸಿ ಬಂದ ಪ್ರದ್ಯುಮ್ನನು ಗರಿಕೆಯ ಹುಲ್ಲಿನ ಮೊಳಕೆಗಳ ಬಣ್ಣದಲ್ಲಿ ಅಥವ ಶ್ಯಾಮಲ ಬಣ್ಣದಲ್ಲಿರುತ್ತಾನೆ. ಈತನಿಗೆ ನಾಲ್ಕು ತೋಳುಗಳಿರುತ್ತವೆ. ವಾಸುದೇವನಿಂದ ಆವಿರ್ಭವಿಸಿರುವ ಈ ಸ್ವಾಮಿಯು ಬಲಪಾರ್ಶ್ವದ ಮೇಲಿನ ಹಸ್ತದಲ್ಲಿ ಬಿಲ್ಲನ್ನು ಮುಂದಿನ ಹಸ್ತದಲ್ಲಿ ಒನಕೆ (ಮುಸಲ) ಯನ್ನು ಧರಿಸಿರುತ್ತಾನೆ. ಎಡಪಾರ್ಶ್ವದ ಮೇಲಿನ ಹಸ್ತದಲ್ಲಿ ನೇಗಿಲ (ಲಾಂಗಲವ)ನ್ನು, ಮುಂದಿನ ಹಸ್ತದಲ್ಲಿ ಬಾಣವನ್ನು ಹಿಡಿದಿರುತ್ತಾನೆ. ಇಂದ್ರನೀಲಮಣಿಯ ಕಾಂತಿಯಿಂದ ಶೋಭಾಯಮಾನವಾಗಿರುವ ಈ ಸ್ವಾಮಿಯು ಮದೋನ್ಮತ್ತನಾಗಿರುವಂತೆ ತೋರಿಬರುತ್ತಾನೆ

[ಇಲ್ಲಿ ಪರಾವಾಸುದೇವನಿಂದ ಈತನು ಬಂದಿರುವುದರಿಂದ ವಾಸುದೇವನ ಆಯುಧಗಳಿಗೆ ಬದಲಾದ ಆಯುಧಗಳನ್ನು ಹೇಳಲಾಗಿದೆ. ವಾಸುದೇವನು ಬಲಪಾರ್ಶ್ವದ ಮುಂದಿನ ಹಸ್ತದಲ್ಲಿ ತಾವರೆಯನ್ನು ಮೇಲಿನ ಹಸ್ತದಲ್ಲಿ ಚಕ್ರವನ್ನು ಹಿಡಿದಿರುತ್ತಾನೆ. ಪ್ರದ್ಯುಮ್ನನು ತಾವರೆಗೆ ಬದಲಾಗಿ ಒನಕೆ (ಮುಸಲ)ಯನ್ನು ಚಕ್ರಕ್ಕೆ ಬದಲಾಗಿ ಬಿಲ್ಲನ್ನು ಹಿಡಿದಿರುತ್ತಾನೆ. ಪ್ರದ್ಯುಮ್ನನು ಶಂಖಕ್ಕೆ ಬದಲಾಗಿ ನೇಗಿಲನ್ನು (ಲಾಂಗಲವ)ನ್ನು ಗದೆಗೆ ಬದಲಾಗಿ ಬಿಲ್ಲನ್ನು ಧರಿಸಿರುತ್ತಾನೆ].

ಪ್ರದ್ಯುಮ್ನ ಮೂರ್ತಿಯು ಎರಡೇ ತೋಳಿರುವಂತೆ ರೂಪಿಸಿದಾಗ ಬಿಲ್ಲು ಬಾಣಗಳನ್ನು ಧರಿಸಿರುತ್ತಾನೆ. ಈತನು ಬಿಳಿಯವಸ್ತ್ರಗಳನ್ನು ಧರಿಸಿರುತ್ತಾನೆ.



ಚಿತ್ರ ೬೬ : ವ್ಯೂಹ ಪ್ರದ್ಯುಮ್ನ ಮೂರ್ತಿ

## ೪. (ವ್ಯೂಹ) ಅನಿರುದ್ಧ ಮೂರ್ತಿ

ವ್ಯೂಹಮೂರ್ತಿಗಳಲ್ಲಿ ನಾಲ್ಕನೆಯವನು. ಷಡ್ಗುಣಗಳಲ್ಲಿ ಶಕ್ತಿ - ತೇಜಸ್ಸುಗಳನ್ನು ಪ್ರಧಾನವಾಗಿ ಹೊಂದಿರುವನು. **ಚಕ್ರದಂಡಾಬ್ಜ ಶಂಖಾಶ್ಚ ಅನಿರುದ್ಧ ಇತಿಸ್ಮೃತಃ** ಎಂದು ಮಾರ್ಕಂಡೇಯ ಸಂಹಿತೆ (೮ : ೧೦) ಹೇಳುತ್ತದೆ. ವಿಷ್ವಕ್ಸೇನ ಸಂಹಿತೆಯು ಉತ್ತರಭಾಗದಲ್ಲಿ ನೀಲವರ್ಣದ ಅನಿರುದ್ಧನನ್ನು ಪೀತಾಂಬರ ಧರಿಸಿಕೊಂಡು ಸರ್ವಾಭರಣಾಲಂಕೃತನಾಗಿ ಶಂಖ - ಚಕ್ರ- ಗದೆಗಳನ್ನು ಹಿಡಿದಿರುವಂತೆರೂಪಿಸಬೇಕು **(ಶಂಖ ಚಕ್ರಗದಾಪಾಣಂ ಪೀತಾಂಬರ ವಿಭೂಷಿತಮ್। ಅನಿರುದ್ಧ ನ್ಯಸೇತ್ತ ಸ್ಮಿನ್ನುತ್ತರೇ ನೀಲರೂಪಿಣಮ್॥)** ಎಂದು ಹೇಳುತ್ತದೆ. ಪರಾಶರ ಸಂಹಿತೆಯಲ್ಲಿ ಶಂಖ - ಚಕ್ರ - ಧನುಸ್ಸು - ಖಡ್ಗ ಧರಿಸಿರುತ್ತಾನೆ **(ಶಂಖಚಕ್ರಧನುಃ ಖಡ್ಗಧರಂ ಸರ್ವಾರ್ಥದಾಯಕಂ)** ಎಂದು ಹೇಳಲಾಗಿದೆ.

ಲಕ್ಷ್ಮೀ ತಂತ್ರದಲ್ಲಿ (೩೮ : ೫೭) ಧನುಸ್ಸು - ಬಾಣ, ವರದ - ಅಭಯ ಇರುವಂತೆ ವರ್ಣಿಸಲಾಗಿದೆ **(ಶಾರ್ಙ್ಗಂ ಶರಾಂಶ್ಚ ಬಿಭ್ರಾಣಂ ವರದಂ ಚಾಭಯಪ್ರದಮ್। ಸಸ್ಮರೇದ ನಿರುದ್ಧಂ ಚ ಪೀತಂ ವಿಶದ ವಾಸಸಮ್॥)**

**ಅಂಜನಾದ್ರಿ ಪ್ರತೀಕಾಂಶಂ ಸುಪೀತಾಂಬರ ವೇಷ್ಟಿತಮ್**
**ಚತುರ್ಭುಜಂ ವಿಶಾಲಕ್ಷಂ ಮೃಗಲಾಂಛಿತ ಭೂಷಿತಮ್ ॥**
**ಆದಿವತ್ ಪಾಣಿ ಯುಗಲಮಾದ್ಯಮಸ್ಯ ವಿಚಿಂತಯೇತ್**
**ದಕ್ಷಿಣಾದಿಕ್ರಮೇಣ ದ್ವಾಭ್ಯಾಂ ವೈ ಖಡ್ಗ ಖೇಟಕೌ ॥**
**ದಧಾನಮನಿರುದ್ಧಂ ತು ಸೌಮ್ಯಭಾಗೇ ವಿಚಿಂತಯೇತ್**
**ವನಮಾಲಾಧರಾಃ ಸರ್ವೇ ಶ್ರೀವತ್ಸಕೃತಲಕ್ಷಣಾಃ ॥**

(ಲಕ್ಷ್ಮೀತಂತ್ರ, ೧೦ : ೩೭ - ೩೯)

ಅಂಜನಾದ್ರಿಯಂತೆ ಕಪ್ಪಾಗಿರುವ ಅನಿರುದ್ಧನು ಪೀತಾಂಬರವನ್ನು ಧರಿಸಿದ್ದು ನಾಲ್ಕು ತೋಳುಗಳನ್ನು ಪಡೆದಿರುತ್ತಾನೆ. ಮೇಲ್ಭಾಗದ ಬಲಹಸ್ತದಲ್ಲಿ ಶಂಖವನ್ನೂ ಎಡಹಸ್ತದಲ್ಲಿ ಚಕ್ರವನ್ನು ಧರಿಸಿರುತ್ತಾನೆ. ಮುಂದಿನ ಬಲಗೈಯ್ಯಲ್ಲಿ ಖಡ್ಗವನ್ನು, ಎಡಗೈಯ್ಯಲ್ಲಿ ಖೇಟಕ (ಗುರಾಣಿ) ವನ್ನು ಹಿಡಿದಿರುತ್ತಾನೆ. ವನಮಾಲೆಯನ್ನು, ಶ್ರೀವತ್ಸವನ್ನು ಧರಿಸಿರುವ ಈ ಮೂರ್ತಿಯು ಸೌಮ್ಯರೂಪಿಯಾಗಿದ್ದು ಶಾಂತಾಕಾರನಾಗಿರುತ್ತಾನೆ.

ದೇವಿಯರೊಂದಿಗೂ ಇರುವಂತೆ ಈ ಮೂರ್ತಿಯನ್ನು ರೂಪಿಸಬಹುದು ಎಂದು ಬೃಹದ್ಬ್ರಹ್ಮ ಸಂಹಿತೆ (೧ : ೧೩ : ೧೮೩ - ೧೮೭) ಹೇಳುತ್ತಾ ಈ ಸ್ವಾಮಿಯೊಂದಿಗೆ ಇರಬಹುದಾದ ಪರಿವಾರವನ್ನು ಹೀಗೆ ವಿವರಿಸುತ್ತದೆ :

**ಪೃಥಕ್ಕೃತ್ಯ ಸ್ವಮಾತ್ಮಾನಮಾಸ್ತೇಽ ನಂತಾಸನೋ ಹರಿಃ**
**ಅನಿರುದ್ಧಾತ್ಮಕೋ ದೇವಃ ಶ್ರೀಭೂಮಿಭ್ಯಾಂ ಸಹ ಪ್ರಭುಃ ॥**
**ಮಧ್ಯೇ ಕ್ಷೀರಾರ್ಣವಂ ಶ್ವೇತ ದ್ವೀಪಾಖ್ಯೇ ಹೇಮನಿರ್ಮಿತೇ**
**ಪ್ರಾಸಾದೇ ಸೇವ್ಯಮಾನಶ್ಚ ಯೋಗಿಭಿರ್ವಿವಿಧೈರಪಿ ॥**
**ಚಂಡಾದ್ಯೈರ್ದ್ವಾರಪಾಲೈಶ್ಚ ಕುಮುದಾದ್ಯನು ಜೀವಿಭಿಃ**
**ಪಕ್ಷೀಂದ್ರ ವಿಷ್ವಕ್ಸೇನಾಭ್ಯಾಂ ಸೇವ್ಯಮಾನೋ ಮುದಾನ್ವಿತಃ ॥**

ಶ್ರೀವತ್ಸ ವಕ್ಷಾ ನಿತ್ಯಶ್ರೀರಜೇಯಃ ಶಾಶ್ವತೋ ಧ್ರುವಃ

ಅನಿರುದ್ಧೋ ಜಗತ್ ಸ್ಯಾಂಶ್ಚೈರಿಂದ್ರಾದ್ಯೈಃ ಪರಿಪಾಲಯನ್ ॥

ಅನಂತನಾದ ಹರಿಯಿಂದ (ಪರಾವಾಸುದೇವ ಮೂರ್ತಿಯಿಂದ) ಪ್ರತ್ಯೇಕಗೊಂಡು ರೂಪಿತನಾದ ಅನಿರುದ್ಧನ ಇಕ್ಕೆಲಗಳಲ್ಲಿ ಶ್ರೀದೇವಿ ಭೂದೇವಿಗಳು ಇರುತ್ತಾರೆ. ಕ್ಷೀರಸಾಗರದ ಮಧ್ಯದಲ್ಲಿರುವ ಶ್ವೇತದ್ವೀಪದಲ್ಲಿ ಚಿನ್ನದಿಂದ ನಿರ್ಮಿತವಾಗಿರುವ ಪ್ರಾಸಾದದಲ್ಲಿ ಈ ಸ್ವಾಮಿ ಇರುತ್ತಾನೆ. ಆ ಪ್ರಾಸಾದದಲ್ಲಿ ಅನೇಕ ಮಂದಿ ಯೋಗಿಗಳು ಇರುತ್ತಾರೆ. ಚಂಡಾದಿಗಳು ದ್ವಾರಪಾಲಕರಾಗಿ ನಿಂತಿರುತ್ತಾರೆ. ಕುಮುದಾದಿ ಪಂಚಾಯುಧಗಳು ಇರುತ್ತವೆ. ಗರುಡ, ವಿಷ್ವಕ್ಸೇನರು ಸಂತೋಷದಿಂದ ಸ್ವಾಮಿಯನ್ನು ಸೇವಿಸುತ್ತಿರುತ್ತಾರೆ.

ಶ್ರೀವತ್ಸವು ಸ್ವಾಮಿಯ ವಕ್ಷವನ್ನು ಅಲಂಕರಿಸಿರಬೇಕು. ಅನಿರುದ್ಧನು ಇಂದ್ರಾದಿಲೋಕಗಳನ್ನು ಪಾಲಿಸುತ್ತಿರುತ್ತಾನೆ.

ಭಟ್ಟ ಭಾಸ್ಕರೀಯದಲ್ಲಿ ಈ ಧ್ಯಾನ ದೊರೆಯುತ್ತದೆ -

ಕೃಷ್ಣಂ ಚತುರ್ಭುಜಂ ದಕ್ಷೇ ಶರಂ ಖಡ್ಗ ತಥೋತ್ತರೇ

ಧನುಃ ಖೇಟಧರಂ ವೀರಮನಿರುದ್ಧಂ ಪ್ರಚಕ್ಷತೇ ॥

ಕಪ್ಪು ಮೈಬಣ್ಣದೊಂದಿಗೆ ನಾಲ್ಕು ಬಾಹುಗಳನ್ನು ಪಡೆದಿರುತ್ತಾನೆ. ಬಲಪಾರ್ಶ್ವದಲ್ಲಿ ಮುಂದಿನ ಹಸ್ತದಲ್ಲಿ ಬಾಣವನ್ನು, ಮೇಲಿನ ಹಸ್ತದಲ್ಲಿ ಖಡ್ಗವನ್ನು ಧರಿಸಿರುತ್ತಾನೆ. ಎಡಪಾರ್ಶ್ವದಲ್ಲಿ ಬಿಲ್ಲನ್ನು ಮೇಲಿನ ಹಸ್ತದಲ್ಲೂ, ಮುಂದಿನ ಹಸ್ತದಲ್ಲಿ ಖೇಟಕವನ್ನು (ಗುರಾಣಿಯನ್ನು) ಧರಿಸಿರಬೇಕು. ಈ ಮೂರ್ತಿಯನ್ನು ವೀರ ಅನಿರುದ್ಧ ಎನ್ನುತ್ತಾರೆ.

ವಿಷ್ವಕ್ಸೇನ ಸಂಹಿತೆಯಲ್ಲಿ (೧೧ : ೨೩ - ೩೦) ಈ ರೀತಿಯ ವಿವರಣೆ ದೊರೆಯುತ್ತದೆ

ಅನಿರುದ್ಧಂ ವದಾಮೋಕಿಥ ಶೃಣು ನಾರದ ತತ್ವತಃ

ನೀಲ ಜೀಮೂತ ಸಂಕಾಶಂ ಕಾಲಾಂಜನಚಯೋಪಮಮ್ ॥

ಶಂಖ ಚಕ್ರಧರಂ ದೇವಂ ಪೀತವಸ್ತ್ರಂ ಚತುರ್ಭುಜಮ್

ಸರ್ವಾಭರಣ ಸಂಯುಕ್ತಂ ಸರ್ವಾವಯವಶೋಭಿತಮ್ ॥

ಸರ್ವಾಲಂಕಾರ ಸಂಯುಕ್ತಂ ಅನಿರುದ್ಧ ಮತೀರಿತಮ್

ಅಸ್ಯ ವಾಮಕರೇ ಚೋರ್ಧ್ವೇ ಶಂಖಮನ್ಯಕರೇ ಗದಾಮ್ ॥

ದಕ್ಷಿಣೋರ್ಧ್ವೇ ನ್ಯಸೇಚ್ಚಕ್ರಮನ್ಯತ್ರಾಭಯಮಿಷ್ಯತೇ

ಅನಿರುದ್ಧಂ ಜಗನ್ನಾಥಂ ಅನಂತೋಪರಶಾಯಿನಮ್ ॥

ಶ್ರೀಯಂ ದಕ್ಷಿಣತಃ ಪಾರ್ಶ್ವೇ ಪುಷ್ಟಿಂ ವಾಮೋಸ್ಯವಿನ್ಯಸೇತ್

ಶಯನೇ ಸತಿ ಮೂಲಾರ್ಚಾ ದ್ವಿಭುಜಂ ವಾ ಚತುರ್ಭುಜಮ್ ॥

ಕಲ್ಪಯೇನ್ಮುನಿ ಶಾರ್ದೂಲ ಸರ್ವಸಂಪತ್ಸುಖಾವಹಮ್

ದೇವಸ್ಯ ವಾಮಪಾರ್ಶ್ವೇ ತು ಶ್ರೀಯಂ ಪುಷ್ಟಿಂ ತು ವಿನ್ಯಸೇತ್ ॥

ಅಥವಾ ಕಲ್ಪಯೇದೇವಂ ಮೌಲಿಪಾರ್ಶ್ವೇ ಶ್ರಿಯಂ ಮುನೇ

ಚಿತ್ರಂ ವಾಪ್ಯರ್ಧಚಿತ್ರಂ ವಾ ಚಿತ್ರಾಭಾಸಂತು ವಾ ಮುನೇ ॥

ಯಜಮಾನೇಚ್ಛಯಾ ಕುರ್ಯಾದ್ದೇವೀನಾಂ ಲಕ್ಷಣಂ ಕ್ರಮಾತ್



ಚಿತ್ರ ೬೭ : ವ್ಯೂಹ ಅನಿರುದ್ಧ ಮೂರ್ತಿ

ವ್ಯೂಹಮೂರ್ತಿಗಳಲ್ಲಿ ನಾಲ್ಕನೆಯವನಾದ ಅನಿರುದ್ಧಮುರ್ತಿಯ ಬಗ್ಗೆ ವಿವರಗಳನ್ನು ಹೇಳುತ್ತೇನೆ ಎಲ್ಮೆ ನಾರದನೇ ಕೇಳು. ನೀಲ ಅಥವ ಮೋಡದ ಬಣ್ಣದಲ್ಲಿ ಅಥವ ಕಾಟಿಕೆಯ ಬಣ್ಣದಲ್ಲಿ ತೇಜೋವಂತನಾಗಿರುವ ಅನಿರುದ್ಧನು ಹಳದಿಯ ವಸ್ತ್ರಗಳನ್ನು ಧರಿಸಿ ನಾಲ್ಕು ತೋಳು ಪಡೆದಿರುತ್ತಾನೆ. ಎಲ್ಲಾ ಆಭರಣ, ಅಲಂಕಾರಣಗಳಿಂದ, ಪುಷ್ಟವಾದ ಅವಯವ ಸೌಂದರ್ಯದಿಂದ ಸುಂದರಾಕಾರನಾಗಿರುವ ಅನಿರುದ್ಧನು ಶಂಖ - ಚಕ್ರಗಳನ್ನು ಧರಿಸಿರುತ್ತಾನೆ ಸ್ವಾಮಿಯು ಎಡಪಾರ್ಶ್ವದ ಮೇಲಿನ ಹಸ್ತದಲ್ಲಿ ಶಂಖವನ್ನು, ಮುಂದಿನ ಹಸ್ತದಲ್ಲಿ ಗದೆಯನ್ನು ಧರಿಸಿರುತ್ತಾನೆ. ಬಲಪಾರ್ಶ್ವದ ಮೇಲಿನ ಹಸ್ತದಲ್ಲಿ ಚಕ್ರವನ್ನು ಮುಂದಿನ ಹಸ್ತದಲ್ಲಿ ಅಭಯಮುದ್ರೆಯನ್ನು ಧರಿಸಿರುತ್ತಾನೆ.

ಜಗನ್ನಾಥನಾದ ಅನಿರುದ್ಧಮೂರ್ತಿಯು ಅನಂತನ (ಆದಿಶೇಷ) ಮೇಲೆ ಮಲಗಿರುವುದೂ ಉಂಟು ಲಕ್ಷ್ಮೀದೇವಿಯು ಬಲಪಾರ್ಶ್ವದಲ್ಲಿ ಇದ್ದರೆ ಪುಷ್ಟಿದೇವಿಯು ಎಡಭಾಗದಲ್ಲಿರುತ್ತಾಳೆ. ಶಯನ ಮೂರ್ತಿಗೆ ಎರಡು ಬಾಹುಗಳು ಅಥವ ನಾಲ್ಕು ಬಾಹುಗಳಿರಬಹುದು. ಸ್ವಾಮಿಯು ಮಲಗಿರುವಾಗ ಕಿರೀಟದ ಪಕ್ಕದಲ್ಲಿ ಲಕ್ಷ್ಮೀದೇವಿ ಇರಬೇಕು. ಪಾದಗಳ ಬಳಿ ಭೂದೇವಿ ಇರಬೇಕು. ಮುನಿಗಳು ಮುಂತಾದವರನ್ನು ಪೂರ್ಣ ಶಿಲ್ಪ, ಅರ್ಧ(ಉಬ್ಬು)ಚಿತ್ರ ಅಥವ ಚಿತ್ರಾಭಾಸ(ವರ್ಣ ಚಿತ್ರ)ವನ್ನು ಯಜಮಾನನ ಇಚ್ಛೆಯ ಮೇರೆಗೆ ಶಾಸ್ತ್ರಲಕ್ಷಣದ ಅನುಸಾರ ರೂಪಿಸಬೇಕು. ಮೂರ್ತಿಯನ್ನು ಶಾಸ್ತ್ರೋಕ್ತ ಕ್ರಮದಲ್ಲಿ ಉಕ್ತ ಲಕ್ಷಣಗಳೊಂದಿಗೇ ಶಿಲ್ಪಿಯು ರೂಪಿಸಬೇಕು.

**ಏತದೇವ ತಥಾ ರೂಪಮನಿರುದ್ಧಸ್ಯ ಕಾರಯೇತ್**
**ಪದ್ಮಪತ್ರಾ ಭವಪ್ರಖೋ ರಕ್ತಾಂಬರಧರಸ್ಯ ತು ||**
**ಚಕ್ರಸ್ಥಾನೇ ಭವೇಚ್ಚರ್ಮ ಗದಾಸ್ಥಾನೇಽಸಿರೇವ ಚ**
**ಚರ್ಮ ಸ್ಯಾಚ್ಚಕ್ರರೂಪೇಣ ಪ್ರಾಂಶುಃ ಖಡ್ಗೋ ವಿಧೀಯತೇ ||**
**ಚಕ್ರಾದೀನಾಂ ಸ್ವರೂಪಾಣಿ ಕಿಂಚಿತ್ಪೂರ್ವಂ ಸುದರ್ಶಯೇತ್**
**ರಮ್ಯಾಣ್ಯಾಯುಧರೂಪಾಣಿ ಚಕ್ರಾದೀನ್ಯೇವ ಯಾದವ ||**
**ವಾಮ ಪಾರ್ಶ್ವಗತಾಃ ಕಾರ್ಯಾ ದೇವಾನಾಂ ಪ್ರವರಾ ಧ್ವಜಾಃ**
**ಋಷಿತಾಕಾಯುತಾ ರಾಜನ್ ಯಚ್ಛಿಸ್ಥಾಸ್ತ್ರೇ ಯಥೇರಿತಮ್ ||**

ಅನಿರುದ್ಧನು ತಾವರೆಯ ದಳದ ಬಣ್ಣದ ಮೈಕಾಂತಿಯನ್ನು ಪಡೆದಿದ್ದು ಕೆಂಪುವಸ್ತ್ರಗಳನ್ನು ಧರಿಸಿರುತ್ತಾನೆ. ವಾಸುದೇವನಿಂದಲೇ ಪ್ರಾದುರ್ಭಾವಗೊಂಡಿರುವ ಈ ಅನಿರುದ್ಧನು ಪರಾವಾಸುದೇವ ಚಕ್ರವನ್ನು ಹಿಡಿದಿರುವ ಕೈಯಲ್ಲಿ (ಎಂದರೆ ಎಡಗಡೆಯ ಮುಂದಿನ ಹಸ್ತದಲ್ಲಿ) ಗುರಾಣಿಯನ್ನು ಹಿಡಿದಿರುತ್ತಾನೆ. ಗದೆ ಹಿಡದಿರುವ ಮುಂದಿನ ಬಲ ಕೈಯಲ್ಲಿ ಕತ್ತಿಯನ್ನು ಹಿಡಿದಿರುತ್ತಾನೆ. ಉಳಿದಂತೆ ಬಲಪಾರ್ಶ್ವದ ಮೇಲಿನ ಹಸ್ತದಲ್ಲಿ ಚಕ್ರ ಮತ್ತು ಎಡ ಪಾರ್ಶ್ವದ ಮೇಲಿನ ಹಸ್ತದಲ್ಲಿ ಶಂಖವಿರುತ್ತದೆ. ಈತನಿಗೆ ಧ್ವಜವೂ ಇರುತ್ತದೆ. ಇದು ಅನಿರುದ್ಧನ ಸ್ವರೂಪ.

ಸಾಂಬನನ್ನು ವ್ಯೂಹಮೂರ್ತಿಗಾಗಿ ಪರಿಗಣಿಸುವುದಿಲ್ಲ. ಆದ್ದರಿಂದ ಈತನ ಪ್ರತಿಮಾ ಕಲ್ಪನೆ ಇಲ್ಲ. ಆದರೂ ವಿಷ್ಣುಧರ್ಮೋತ್ತರದಲ್ಲಿ ಪದ್ಮವರ್ಣದ ಕಾಂತಿಯಲ್ಲಿ ಕೆಂಪು

ವಸ್ತ್ರಧರಿಸಿರುವ ಸಾಂಬನು ಸುಂದರಾಂಗನಾಗಿದ್ದು ಗದಾಧಾರಿಯಾಗಿರುತ್ತಾನೆ ಎಂಬ ವರ್ಣನೆ ದೊರೆಯುತ್ತದೆ ( **ಸಾಂಬಃ ಕಾರ್ಯೋ ಗದಾಹಸ್ತ ಸ್ಸರೂಪಶ್ಚ ವಿಶೇಷತಃ ॥ ಸಾಂಬಾನಿರುದ್ಧೌ ಕರ್ತವ್ಯೌ ಪದ್ಮಾಭೌ ರಕ್ತವಾಸಸೌ । -** ವಿಷ್ಣುಧರ್ಮೋತ್ತರ ಪುರಾಣಂ )

## ೩. ಚತುರ್ವಿಂಶತಿ ಮೂರ್ತಿಗಳು

ಪಾಂಚರಾತ್ರಾಗಮದಲ್ಲಿ ಕೇಶವಾದಿ ಚತುರ್ವಿಂಶತಿ ಮೂರ್ತಿಗಳ ಉಲ್ಲೇಖವು ಬಹುವಾಗಿದೆ. ಮಹಾಭಾರತದ ಅನುಶಾಸನ ಪರ್ವದಲ್ಲಿ ಬರುವ ವಿಷ್ಣುಸಹಸ್ರನಾಮದಲ್ಲಿರುವ ಇಪ್ಪತ್ನಾಲ್ಕು ಹೆಸರುಗಳನ್ನು ಆಯ್ದುಕೊಂಡು ಅವಕ್ಕೆ ಮೂರ್ತಿ ಲಕ್ಷಣವನ್ನು ಪದ್ಮಪುರಾಣದ ಪಾತಲ ಖಂಡವೂ, ರೂಪಮಂಡನ ಎಂಬ ಶಿಲ್ಪಶಾಸ್ತ್ರವು ನಿರ್ದೇಶಿಸಿವೆ. ಅಹಿರ್ಬುಧನ್ಯ ಸಂಹಿತೆ ಮತ್ತು ಬೃಹದ್ಬ್ರಹ್ಮ ಸಂಹಿತೆಯಲ್ಲಿ ವ್ಯೂಹಮೂರ್ತಿಗಳಿಂದ ಹನ್ನೆರಡು ಇತರ ಮೂರ್ತಿಗಳು ಬಂದಿರುವುದನ್ನು ಹೇಳಿದೆ. ಒಂದೊಂದು ವ್ಯೂಹದಿಂದಲೂ ಮೂರು ಮೂರ್ತಿಗಳು ರೂಪುಗೊಂಡರು. ವಾಸುದೇವನಲ್ಲಿ ಆರುಗುಣಗಳಿರುವುದರಿಂದ ಆರುಮೂರ್ತಿಗಳು. ಸಂಕರ್ಷಣ ಜ್ಞಾನ ಪ್ರಧಾನ. ಪ್ರದ್ಯುಮ್ನ ಶಕ್ತಿ ಪ್ರಧಾನ, ಅನಿರುದ್ಧದಲ್ಲಿ ಐಶ್ವರ್ಯ ಪ್ರಧಾನ. ಹೀಗೆ ಉಂಟಾದ ೨೪ ಮೂರ್ತಿಗಳನ್ನು ಪೂಜಿಸುವ ಪದ್ಧತಿ ಇದೆ. ಈ ಮೂರ್ತಿಗಳ ಪ್ರಸಾರ ಎರಡು ಹಂತಗಳಲ್ಲಿ ನಡೆಯಿತು. ಮೊದಲು ೧೨ ಮೂರ್ತಿಗಳು. ನಂತರ ಎರಡನೆಯ ಪ್ರಸಾರದಲ್ಲಿ ೪ + ೮ = ೧೨ ಮೂರ್ತಿಗಳು. ಬೃಹದ್ಬ್ರಹ್ಮ ಸಂಹಿತೆಯಲ್ಲಿರುವ ಪ್ರಕಾರ ಆದಿಮೂರ್ತಿಯಿಂದ, ಪರಾವಾಸುದೇವ, ವ್ಯೂಹಮೂರ್ತಿಗಳು, ಅವತಾರ ಮೂರ್ತಿಗಳು, ವ್ಯೂಹಾಂತರ ಮೂರ್ತಿಗಳು ರೂಪುಗೊಂಡ ಕ್ರಮದ ವಿವರಗಳನ್ನು ಪ್ರತ್ಯೇಕವಾಗಿ ಪಟ್ಟಿಮಾಡಿಕೊಡಲಾಗಿದೆ.

ಅಗ್ನಿಪುರಾಣ ಮತ್ತು ಪದ್ಮಪುರಾಣಗಳಲ್ಲಿ ಕೆಲವು ಮೂರ್ತಿಗಳ ಆಯುಧಕ್ರಮಗಳಲ್ಲಿ ಸ್ವಲ್ಪ ಬದಲಾವಣೆ ಕಂಡುಬಂದರೂ, ರೂಪಮಂಡನದ ಕ್ರಮವೇ ಸ್ಪಷ್ಟವಾಗಿ ಸರಿಯಾಗಿರುವುದಾಗಿ ಕಂಡು ಬರುತ್ತದೆ. ಈ ಮೊದಲು ವ್ಯೂಹಮೂರ್ತಿಗಳಾಗಿ ನಾವು ಪರಿಚಯಿಸಿಕೊಂಡ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಇವರು ಶಕ್ತಿಮಯ ವ್ಯೂಹವನ್ನು ರಚಿಸುತ್ತಾರೆ ಎಂಬ ಕಾರಣಕ್ಕಾಗಿ ಇಲ್ಲೂ ಪ್ರಮುಖರಾಗಿಯೇ ಇರುತ್ತಾರೆ.

ನಾಲ್ಕು ವ್ಯೂಹಗಳಲ್ಲದೆ ಇಪ್ಪತ್ನಾಲ್ಕು ವ್ಯೂಹಾಂತರಗಳನ್ನು (ಕಪಿಲ, ಯಜ್ಞ, ನಾರಾಯಣ, ಪುಣ್ಯ ಇತ್ಯಾದಿ), ಹತ್ತು ವಿಭವಾವತಾರಗಳನ್ನು (ನರಸಿಂಹ, ವಾಮನ, ತ್ರಿವಿಕ್ರಮ ಇತ್ಯಾದಿ) , ವಿಭವಾಂತರಗಳನ್ನು (ಸುಭದ್ರ, ಈಶಾತ್ಮ, ಸರ್ವೋದ್ವಹ, ಸರ್ವವಿದ್ಯೇಶ ಇತ್ಯಾದಿ) ಹೇಳುತ್ತಾರೆ. ವಿಷ್ಣು ದೇವಾಲಯಗಳಲ್ಲಿ ಆದಿಮೂರ್ತಿಯನ್ನು ಗರ್ಭಗುಡಿಯಲ್ಲಿಟ್ಟು, ಪ್ರಥಮಾವರಣದಲ್ಲಿ ವ್ಯೂಹ - ವ್ಯೂಹಾಂತರಗಳನ್ನು, ದ್ವಿತೀಯ ಆವರಣದಲ್ಲಿ ವಿಭವ - ವಿಭವಾಂತರಗಳನ್ನು, ತೃತೀಯಾವರಣದಲ್ಲಿ ದಿಕ್ಪಾಲಕರನ್ನು ಇರಿಸಬೇಕೆಂಬ ವಿಧಿ ಇದೆ.

ವ್ಯೂಹವು ಪ್ರಮುಖವಾದ ಪ್ರಸಾರ ವ್ಯವಸ್ಥೆ. ವ್ಯೂಹಾಂತರವು ಗೌಣವಾದ ಪ್ರಸಾರವ್ಯವಸ್ಥೆ. ವಿಭವ ಎಂದರೆ ತನ್ನನ್ನು ತಾನು ತೋರಿಸಿಕೊಳ್ಳುವಿಕೆ - ಆವಿರ್ಭಾವ. ಯಾವುದಾದರೂ ಒಂದು ನಿರ್ದಿಷ್ಟ ಉದ್ದೇಶದಿಂದ ಭಗವಂತನು ತನ್ನ ಸ್ಥಾನದಿಂದ ಕೆಳಗಿನ ಬ್ರಹ್ಮಾಂಡ ಸೃಷ್ಟಿಗೆ ಇಳಿದು

ಬರುವುದು ವಿಭವಾವತಾರ ಎನಿಸಿಕೊಳ್ಳುತ್ತದೆ. ಪರಮಾತ್ಮನು ತನ್ನ ಸಂಕಲ್ಪದಿಂದ ಅಸಂಖ್ಯಾತ ನೆಲೆಗಳುಳ್ಳ ಹಿರಣ್ಯಾಂಡವನ್ನು ಸೃಷ್ಟಿಮಾಡಿ, ಅದರ ಮೇಲಿನ ಸ್ತರದಲ್ಲಿ ವೈಷ್ಣವಾಂಡವನ್ನು ವ್ಯವಸ್ಥೆಮಾಡುತ್ತಾನೆ. ಇವಕ್ಕೆ ವ್ಯೂಹ ಲೋಕಗಳೆಂದು ಹೆಸರು. ಆಮೋದ, ಪ್ರಮೋದ, ಸಮ್ಮೋದ, ವೈಕುಂಠಗಳು ಇಲ್ಲಿಯ ಅನುಕ್ರಮ ವ್ಯವಸ್ಥೆ. ಆಮೋದ ತೀರ ಕೆಳಗಿನ ನೆಲೆ, ವೈಕುಂಠ ಎಲ್ಲಕ್ಕಿಂತಲೂ ಮೇಲಿನ ನೆಲೆ. ಮುಕ್ತರಾದ ಜೀವರು ಆಮೋದದಿಂದ ವೈಕುಂಠದ ತನಕ ಕ್ರಮವಾಗಿ ಏರುತ್ತಾರೆ. ವೈಕುಂಠದಲ್ಲಿ ಯಾವ ಅಡ್ಡಿ ಅಡಚಣೆಗಳೂ ಇಲ್ಲ. ಇಲ್ಲಿರುವ ವಿಷ್ಣು ಸರ್ವವ್ಯಾಪಿ ನಾರಾಯಣ. ಸೃಷ್ಟಿಯಂತೆ ಪಾಲನೆಯೂ ಅವನ ಹೊಣೆಯೇ. ಭಕ್ತರಿಗೆ ಮುಕ್ತಿದೊರಕಿಸಿ ಕೊಡುವುದೂ ಅವನ ಕೆಲಸವೇ. ಹೀಗಾಗಿ ಲೋಕ ಕಂಟಕರಾದವರನ್ನು ನಿಗ್ರಹಿಸಲು, ಧರ್ಮವನ್ನು ರಕ್ಷಿಸಲು, ಭಕ್ತರಿಗೆ ಮುಕ್ತಿಮಾರ್ಗವನ್ನು ಒದಗಿಸಲು ವಿಷ್ಣು ವೈಕುಂಠದಿಂದ ಬ್ರಹ್ಮಾಂಡ ಸೃಷ್ಟಿಗೆ ಇಳಿದು ಬರಬೇಕಾಗುತ್ತದೆ. ಇದೇ ಅವತಾರ (ಕೆಳಕ್ಕೆ ಇಳಿಯುವುದು).

ಅವತಾರಗಳೆಲ್ಲಾ ಭೂಮಿಯ ಮೇಲಣ ಪ್ರಾಣಿಗಳ ರೂಪದಲ್ಲಿ ಭಗವಂತನ ಹುಟ್ಟಿನ ವಿವರವಾದರೆ, ವ್ಯೂಹಾಂತರ ಮೂರ್ತಿ ರೂಪಗಳು ಭಗವಂತನು ತನ್ನ ಭಕ್ತರನ್ನು ರಕ್ಷಿಸಲು ಪ್ರಸರಿಸುವ ಕೆಲವು ಅದೃಶ್ಯ ಶಕ್ತಿಗಳು. ಈ ಮೂರ್ತಿಗಳೆಲ್ಲಾ ಪುರಾಣಗಳಲ್ಲಿ ಯಾರಾದರೂ ಅಸುರನನ್ನು ಅಥವ ಆಸುರೀಶಕ್ತಿಯನ್ನು ಜಯಿಸಿದಂತೆ ಕತೆಗಳಿವೆ. ಆಚಾರದಲ್ಲಿ ಕೇಶವಾದಿ ಮೂರ್ತಿಗಳ ನಾಮಗಳನ್ನು ಪಠಿಸುತ್ತಾ ಭಕ್ತನಾದವನು ತನ್ನ ದೇಹದ ವಿವಿಧ ಭಾಗಗಳನ್ನು ಸ್ಪರ್ಶಿಸಿ ಭಗವತ್ ಕವಚವನ್ನು ಗಳಿಸಿಕೊಳ್ಳುವ ರೂಢಿಯು ಕಂಡುಬರುತ್ತದೆ. ಆಗಮಗಳಲ್ಲಿ ಈ ಇಪ್ಪತ್ನಾಲ್ಕು ಮೂರ್ತಿಗಳನ್ನು ಸ್ವತಂತ್ರ ಮೂರ್ತಿಗಳಾಗಿ ಪ್ರತ್ಯೇಕ ಆಲಯಗಳನ್ನು ನಿರ್ಮಿಸಿ ಪೂಜಿಸಬಹುದೆಂಬ ಹೇಳಿಕೆಯೂ ಇದೆ. ಯಾವುದೇ ವೈಷ್ಣವಾಲಯದಲ್ಲಿ ಈ ಎಲ್ಲಾ ಮೂರ್ತಿಗಳನ್ನು ದೇವಾಲಯದ ಗೋಡೆಗಳ ಮೇಲೆ, ಪ್ರಾಕಾರಗಳಲ್ಲಿ ಗೋಡೆಗಳ ಮೇಲಿನ ಚಿತ್ರಗಳಾಗಿ ಅಥವ ಮೂರ್ತಿಗಳಾಗಿ ರೂಪಿಸಬಹುದು. ಶಂಖ - ಚಕ್ರ - ಗದೆ - ಪದ್ಮಗಳ ಕ್ರಮ ಬದಲಾಗುವುದರಿಂದ ಮಾತ್ರವೇ ಮೂರ್ತಿಯ ಹೆಸರು ಬದಲಾಗುತ್ತದೆ. ಆದರೆ ಆಗಮ ಮತ್ತು ಪುರಾಣಗಳು ಆಯುಧ ಕ್ರಮದ ಬದಲಾವಣೆ ಮಾತ್ರವೇ ಅಲ್ಲದೆ ಇನ್ನೂ ಕೆಲವು ಭಿನ್ನತೆಗಳನ್ನೂ ಹೇಳುತ್ತವೆ. ಅವಕಾಶವಾದೆಡೆಗಳಲ್ಲಿ ಈ ಅಂತರವನ್ನು ತಿಳಿಸುತ್ತಾ ಎಲ್ಲಾ ವ್ಯೂಹಾಂತರ ಮೂರ್ತಿಗಳಾಗಿದ್ದು ಚತುರ್ವಿಂಶತಿ ಮೂರ್ತಿಗಳೆಂದು ಪ್ರಖ್ಯಾತವಾಗಿರುವ ಕೇಶವಾದಿ ಮೂರ್ತಿಗಳ ಬಗ್ಗೆ ಕ್ರಮವಾಗಿ ವಿವರಗಳನ್ನು ತಿಳಿಯೋಣ.

ತಂತ್ರಸಾರದಲ್ಲಿ ಇಪ್ಪತ್ನಾಲ್ಕುಮೂರ್ತಿಗಳ ವರ್ಗೀಕರಣವು ಬೇರೆಯ ರೀತಿಯಾಗಿದೆ ಇಲ್ಲಿ ವರ್ಗೀಕರಣಕ್ಕೆ ಆಯುಧವನ್ನು ಪ್ರಧಾನವಾಗಿ ಪರಿಗಣಿಸುತ್ತಾರೆ. ಶಂಖ ಚಕ್ರ ಗದಾ ಪದ್ಮಗಳಲ್ಲಿ ಮೊದಲಿನದಾದ ಶಂಖವು ಪೂಜೆಯ ಮುಖ್ಯಗುರಿಯಾದ ಮುಕ್ತಿಯನ್ನು ದಯಪಾಲಿಸುವುದರಿಂದ ಅದನ್ನು ಪ್ರಧಾನವಾಗಿ ಪರಿಗಣಿಸಿ ನಾಲ್ಕು ಗುಂಪುಗಳನ್ನು ಮಾಡಲಾಗುತ್ತದೆ. ಶಂಖ ಮೇಲಿನ ಬಲಹಸ್ತದಲ್ಲಿ, ಶಂಖ ಮೇಲಿನ ಎಡಹಸ್ತದಲ್ಲಿ, ಶಂಖ ಕೆಳಗಿನ ಎಡಹಸ್ತದಲ್ಲಿ ಮತ್ತು ಶಂಖ ಕೆಳಗಿನ ಬಲಹಸ್ತದಲ್ಲಿ ಇರುವಂತೆ ವರ್ಗೀಕರಿಸಿ ಪ್ರತಿವರ್ಗದಲ್ಲೂ ಆರುಮೂರ್ತಿಗಳನ್ನು ಲೆಕ್ಕಿಸಲಾಗುತ್ತದೆ. ಈ ಆರು ಮೂರ್ತಿಗಳಲ್ಲಿ ಉಳಿದ ಮೂರು ಆಯುಧಗಳು ಬದಲಾಗುವ

ಕ್ರಮದ ಅನ್ವಯ ಲೆಕ್ಕಿಸಲಾಗುತ್ತದೆ ಆ ಆರು ಕ್ರಮಗಳು ಇವು ( i ) *ಕ್ರಮ* : ಶಂಖವನ್ನು ಬಿಟ್ಟು ಚಕ್ರ ಗದಾ ಪದ್ಮದ ಕ್ರಮ ( ii) *ವ್ಯುತ್ಕ್ರಮ* : ತಿರುವುಮರುವಾಗಿರುವುದು ಎಂದರೆ ಪದ್ಮ ಗದಾ ಚಕ್ರ ( iii ) *ಪದ್ಮಾದಿಕ್ರಮ*: ಪದ್ಮದಿಂದ ಪ್ರಾರಂಭವಾಗುವುದು ಪದ್ಮ ಚಕ್ರ ಗದೆ ಈ ಕ್ರಮದಲ್ಲಿರುವುದು ( iv ) *ಗದಾದಿ ವ್ಯುತ್ಕ್ರಮ* : ಗದೆಯಿಂದ ಪ್ರಾರಂಭವಾಗಿ ತಿರುವುಮರುವಾಗಿರುವುದು ಎಂದರೆ ಗದಾ ಚಕ್ರ ಪದ್ಮ ( v ) *ಅರ್ಧಕ್ರಮ* : ಮೊದಲಿನ ಶಂಖ ಚಕ್ರಗಳು ಕ್ರಮವಾಗಿದ್ದು ಉಳಿದ ಎರಡು ತಿರುವು ಮರುವಾಗಿರುವುದು ಎಂದರೆ ಗದಾ ಪದ್ಮ ಹೀಗೆ ಶಂಖವು ಬಿಟ್ಟಿರುತ್ತದೆ ಆಗ ಕ್ರಮವು ಚಕ್ರ ಗದಾ ಪದ್ಮ ( vi ) *ಸಾಂತರ* : ಮಧ್ಯದಿಂದ ಕ್ರಮವಾಗಿರುವುದು ಗದಾ ಪದ್ಮ ಚಕ್ರ ಹೀಗೆ ಪ್ರತಿಯೊಂದು ಗುಂಪಿನಲ್ಲಿ ನಾಲ್ಕು ಮೂರ್ತಿಗಳಿದ್ದು ಒಟ್ಟು ಇಪ್ಪತ್ನಾಲ್ಕು ಮೂರ್ತಿಗಳಿರುತ್ತಾರೆ. ಆದರೆ ಸಾಧಾರಣವಾಗಿ ಬಳಕೆಯಲ್ಲಿರುವ ಕ್ರಮದ ಪ್ರಕಾರವೇ ಚತುರ್ವಿಂಶತಿ ಮೂರ್ತಿಗಳ ವಿವರಣೆಯನ್ನು ಕೊಡಲಾಗಿದೆ.

## ೧. ಕೇಶವ

ಸಂಧ್ಯಾಕರ್ಮದಲ್ಲಿ ಈ ಸ್ವಾಮಿಯನ್ನು ಭಕ್ತನಾದವನು ತನ್ನ ಬಲ ದವಡೆಯಲ್ಲಿ ಆವಾಹನೆ ಮಾಡುತ್ತಾನೆ. **ಶಂಖ ಚಕ್ರಗದಾ ಪದ್ಮಧರಃ ಕೇಶವ ಉಚ್ಯತೇ** (ಗರುಡ ಸಂಹಿತೆ) ಎಂಬುದನ್ನೇ ರೂಪಮಂಡನವೂ (೩ : ೯) ಹೇಳುತ್ತದೆ - **ಕೇಶವಃ ಕಮಲಂ ಕಂಬು ಧತ್ತೇ ಚಕ್ರಂ ಗದಾಮಪಿ.**

**ಕೇಶವಸ್ತು ಸುವರ್ಣಾಭಃ ಶಂಖ ಚಕ್ರ ಗದಾಬ್ಜ ಧೃತ್**

**ಶುಕ್ಲಾಂಬರಧರಃ ಸೌಮ್ಯೋ ಮುಕ್ತಾಭರಣ ಭೂಷಿತಃ ||**

ಬಂಗಾರದಂತಹ ಹಳದಿ ಬಣ್ಣದ ಮೈಕಾಂತಿಯಲ್ಲಿ ಬಿಳಿಯ ವಸ್ತ್ರಗಳನ್ನು, ಮುತ್ತಿನ ಆಭರಣಗಳನ್ನು ಧರಿಸಿರುತ್ತಾನೆ. ಬಲಗಡೆ ಕೆಳಗಿನ ಹಸ್ತದಲ್ಲಿ ಪದ್ಮ, ಮೇಲಿನ ಹಸ್ತದಲ್ಲಿ ಶಂಖ, ಅದೇ ರೀತಿಯಾಗಿ ಎಡಗಡೆ ಕೆಳಹಸ್ತದಲ್ಲಿ ಗದೆಯನ್ನು ಮೇಲಿನ ಹಸ್ತದಲ್ಲಿ ಚಕ್ರವನ್ನು ಧರಿಸಿರುತ್ತಾನೆ.

ಇದನ್ನೇ ಹಯಶೀರ್ಷ ಸಂಹಿತೆಯಲ್ಲಿ (ಆದಿ ೧೯ : ೪ - ೫) ಇನ್ನೂ ಸ್ಪಷ್ಟವಾಗಿ ಈ ವಿವರಿಸಲಾಗಿದೆ

**ಪಂಕಜಂ ದಕ್ಷಿಣೇ ಯಸ್ಯ ಪಾಂಚಜನ್ಯಂ ತಥೋಪರಿ |**

**ವಾಮೋಪರಿ ಯಸ್ಯ ಚಕ್ರಂ ಗದಾಚಾಧೋ ವ್ಯವಸ್ಥಿತಾ ||**

**ಆದಿಮೂರ್ತಿ ಭೇದೋಽಯಂ ಕೇಶವೇತಿ ಪ್ರಕೀರ್ತ್ಯತೇ |**

ಬಲ ಪಾರ್ಶ್ವದ ಮುಂದಿನ ಹಸ್ತದಲ್ಲಿ ಪದ್ಮ, ಮೇಲಿನ ಹಸ್ತದಲ್ಲಿ ಶಂಖ ಎಡ ಪಾರ್ಶ್ವದ ಮುಂದಿನ ಹಸ್ತದಲ್ಲಿ ಗದೆ ಮತ್ತು ಮೇಲಿನ ಹಸ್ತದಲ್ಲಿ ಚಕ್ರ ಧರಿಸಿರುತ್ತಾನೆ. ಈ ಸ್ವಾಮಿ ಆದಿಮೂರ್ತಿಯ ಭೇದರೂಪವೇ. ಈತನನ್ನು ಕೇಶವ ಎನ್ನುತ್ತಾರೆ.

ಮಾರ್ಕಂಡೇಯ ಸಂಹಿತೆಯಲ್ಲಿ (೮ : ೩) **ವಾರಿಜಂ ಶಂಖ ಚಕ್ರಂ ಚ ಕೇಶವಂ ದಂಡಧಾರಿಣಮ್** ಎಂದು ಹೇಳಿ ಗದೆಗೆ ಬದಲಾಗಿ ದಂಡವನ್ನು ಸೂಚಿಸಿದೆ. ಪಾದ್ಮಸಂಹಿತೆಯಲ್ಲಿ (ಕ್ರಿ ೧೬ : ೩೦) ದಂಡವನ್ನು ಸೂಚಿಸಿ ಇದೇ ಆಯುಧಗಳು ಪ್ರದಕ್ಷಿಣ ಕ್ರಮದಲ್ಲಿ ಹಸ್ತಗಳಲ್ಲಿ ಅಲಂಕರಿಸಬೇಕೆಂದು ಹೇಳುತ್ತದೆ.



ಚಿತ್ರ ೭೮ : ಕೇಶವ ಮೂರ್ತಿ

**ಕೇಶವಸ್ಯಾಂಬುಜಂ ಶಂಖಂ ಚಕ್ರಂ ದಂಡಸ್ತಥಾಯುಧಮ್**

**ಪ್ರಾದಕ್ಷಿಣ್ಯೇನ ಬಾಹುನಾಮನ್ಯೇಷಾಮುಚ್ಯತೇ ಕ್ರಮಾತ್ ||**

ಇವೆಲ್ಲವೂ ಒಂದೇ ಕ್ರಮದಲ್ಲಿ ಆಯುಧಗಳನ್ನು ಹೇಳಿವೆ. ಆದರೆ ಗದೆಗೆ ಬದಲಾಗಿ ದಂಡ ಹೇಳಿದೆ. ದಂಡವು ಆಯುಧಗಳಲ್ಲಿ ಗದೆಗಿಂತಲೂ ಭಿನ್ನವಾದುದು.

ಇವೆಲ್ಲಕ್ಕಿಂತಲೂ ಭಿನ್ನವಾದ ರೂಪಕಲ್ಪನೆ ವಿಷ್ವಕ್ಸೇನ ಸಂಹಿತೆಯಲ್ಲಿ (೧೧ : ೧೫೨ - ೧೫೩) ಈ ರೀತಿಯಾಗಿ ದೊರೆಯುತ್ತದೆ :

**ದಕ್ಷಿಣೋರ್ಧ್ವಕರೇ ಚಕ್ರಂ ವಾಮೋರ್ಧ್ವೇ ಶಂಖ ಮುದ್ವಹನ್ ||**

**ಗದಾಂ ವಾಮಾಧರೇ ಹಸ್ತೇ ಅಭಯಂ ದಕ್ಷಿಣಾಧರೇ**

**ಆದಿಮೂರ್ತೇಸ್ತು ಭೇದೋಽಯಂ ಕೇಶವಾಖ್ಯಂ ಮುನೀಶ್ವರ ||**

ಮೇಲಿನ ಬಲಹಸ್ತದಲ್ಲಿ ಚಕ್ರ, ಎಡಹಸ್ತದಲ್ಲಿ ಶಂಖ ಧರಿಸಿದ್ದು, ಎಡ ಕೆಳಹಸ್ತದಲ್ಲಿ ಗದೆ ಹಿಡಿದಿದ್ದು ಕೆಳಗಿನ ಬಲಹಸ್ತದಲ್ಲಿ ಅಭಯಮುದ್ರೆ ಧರಸಿರುವ ಸ್ವಾಮಿಯು ಆದಿಮೂರ್ತಿಯ ಭಿನ್ನ ಸ್ವರೂಪವಾಗಿದ್ದು ಈ ಮೂರ್ತಿಯನ್ನೇ ಕೇಶವ ಎನ್ನುತ್ತಾರೆ.

ಇಲ್ಲಿಯ ಆಯುಧಗಳಲ್ಲಿ ಪದ್ಮ ಮಾತ್ರವೇ ಇಲ್ಲ. ಅಭಯ ಹಸ್ತವು ಪದ್ಮವನ್ನು ಹಿಡಿದಿದ್ದರೆ ಈ ಆಯುಧಗಳ ಕ್ರಮದಲ್ಲಿ ಚತುರ್ವಿಂಶತಿ ಮೂರ್ತಿಗಳಲ್ಲಿ ಇದು ಜನಾರ್ದನ ಮೂರ್ತಿಯ ವಿವರವಾಗುತ್ತದೆ ಎಂಬುದನ್ನು ಗಮನಿಸಬೇಕು.

## ೨. ನಾರಾಯಣ

(ಅ) ಭಕ್ತನ ಎಡ ದವಡೆಯಲ್ಲಿ ಆವಾಹಿಸುವ ಈ ಮೂರ್ತಿ ನೋಡಲು ಬಹು ಸುಂದರವಾಗಿರುವವನಾಗಿ ವರ್ಣಿಸಲ್ಪಡುತ್ತಾನೆ. ಕೇಶವನು ಹಿಡಿದಿರುವ ಆಯುಧಗಳಿಗೆ ವಿರುದ್ಧವಾಗಿ ನಾರಾಯಣ ಹಿಡಿದಿರುತ್ತಾನೆ (**ಅಧರೋತ್ತರ ಭಾಗೇನ ಕೃತಮೇತತ್ತು ಯತ್ರ ವೈ ನಾರಾಯಣಾಖ್ಯಾ ಸಾ ಮೂರ್ತಿಃ** ಹಯಶೀರ್ಷ ಸಂಹಿತೆ,ಆದಿ : ೧೯ : ೬)

ರೂಪಮಂಡನದಲ್ಲಿ (೩ : ೧೦) **ನಾರಾಯಣಃ ಕಂಬು ಪದ್ಮ ಗದಾ ಚಕ್ರಧರೋ ಭವೇತ್** ಎಂದು ವರ್ಣಿಸಿದೆ. ಪಾಂಚರಾತ್ರಾಗಮದಲ್ಲಿ

**ನಾರಾಯಣೋ ಘನಶ್ಯಾಮಃ ಪದ್ಮಶಂಖಗದಾರಿಭೃತ್**

**ಪೀತವಾಸಾ ಮಣಿಮಯೈರ್ಭೂಷಣೈರುತ್ತಮೈರ್ವೃತಃ ||**

ಮೇಘದಂತೆ ಕಪ್ಪು ಮೈಕಾಂತಿಯಿಂದ ಇರುವ ಶ್ರೀ ನಾರಾಯಣಮೂರ್ತಿಯು ಬಂಗಾರದಂತಹ ಹಳದಿ ವರ್ಣದ ವಸ್ತ್ರಗಳಿಂದ, ನಾಲ್ಕು ಬಾಹುಗಳಿಂದ, ರತ್ನ ಖಚಿತವಾದ ಬಂಗಾರದ ಆಭರಣಗಳಿಂದ ಅಲಂಕೃತನಾಗಿರುತ್ತಾನೆ. ಬಲ ಪಾರ್ಶ್ವದ ಕೆಳಹಸ್ತದಲ್ಲಿ ಶಂಖವನ್ನು, ಮೇಲಿನ ಹಸ್ತದಲ್ಲಿ ಪದ್ಮವನ್ನು, ಎಡ ಪಾರ್ಶ್ವದ ಕೆಳಹಸ್ತದಲ್ಲಿ ಚಕ್ರವನ್ನು ಮೇಲಿನ ಹಸ್ತದಲ್ಲಿ ಗದೆಯನ್ನು ಧರಿಸಿರುತ್ತಾರೆ.

**ನಾರಾಯಣ ಮಥೋ ವಕ್ಷ್ಯೇ ಶ್ರುಣು ನಾರದ ಸತ್ತಮ**

**ಕುಂದ ಪುಷ್ಪನಿಭಂ ವಾಪಿ ಶ್ಯಾಮಂ ವಾ ರಕ್ತಮೇವ ವಾ ||**

**ಶಂಖ ಚಕ್ರ ಗದಾ ಪಾಣಿಂ ಚತುರ್ಬಾಹುಂ ಕಿರೀಟಿನಮ್**

**ಪೀತಾಂಬರ ಸಮಾಯುಕ್ತಂ ಸರ್ವಾಭರಣ ಭೂಷಿತಮ್ ||**



ಚಿತ್ರ ೬೯ : ನಾರಾಯಣ ಮೂರ್ತಿ

**ಸರ್ವಾವಯ ಸಂಯುಕ್ತಂ ಸರ್ವಾಲಂಕಾರ ಶೋಭಿತಮ್**
**ಸರ್ವದೇವ ಮಯಂ ಸೂಕ್ಷ್ಮಂ ತ್ರೈಲೋಕ್ಯಾಧಿಪತಿಂ ಹರಿಮ್ ॥**
**ಏವಂ ರೂಪಂ ತು ಸಂಚಿಂತ್ಯ ಹೇತಿನ್ಯಾಸಮಥೋ ಶೃಣು**
**ದಕ್ಷಿಣೇ ತು ಕರೇ ಚೋರ್ಧ್ವೇ ಪದ್ಮಂ ಮುಕುಲಕಂ ನ್ಯಸೇತ್ ॥**
**ಅಸ್ಯಾಧರೇ ತು ಚಕ್ರಂ ಸ್ಯಾತ್ಕಾಲಾಗ್ನಿ ಸದೃಶಪ್ರಭಮ್**
**ವಾಮೋರ್ಧ್ವೇ ತು ಗದಾ ನ್ಯಸ್ಯ ಹ್ಯಧೋಹಸ್ತೇ ಶಂಖಂ ನ್ಯಸೇತ್ ॥**
**ಏವಂ ಚಾಯುಧ ವಿನ್ಯಾಸಂ**

(ವಿಷ್ವಕ್ಸೇನ ಸಂಹಿತೆ, ೧೧ : ೧೫೮ - ೧೫೯)

ನಾರಾಯಣನು ಮಲ್ಲಿಗೆಯ ಬಿಳುಪು, ಶ್ಯಾಮಲ ವರ್ಣ ಅಥವ ರಕ್ತವರ್ಣದ ಮೈಕಾಂತಿಯಲ್ಲಿ ಇರಬಹುದು. ನಾಲ್ಕು ತೋಳು, ಕಿರೀಟಗಳಿಂದ ಅಲಂಕೃತನಾಗಿರುವ ಸ್ವಾಮಿಯು ಎಲ್ಲಾ ಆಭರಣಗಳನ್ನು ಧರಿಸಿದ್ದು, ಪೀತಾಂಬರಗಳನ್ನು ಧರಿಸಿರುತ್ತಾನೆ. ಸರ್ವದೇವಮಯನಾದ ತ್ರೈಲೋಕ್ಯಾಧಿಪತಿಯಾದ ಹರಿಯು ಸೂಕ್ಷ್ಮರೂಪದಲ್ಲಿ ನಾರಾಯಣನಾಗಿರುತ್ತಾನೆ. ಈ ಮೂರ್ತಿಯು ಧರಿಸಿರುವ ಆಯುಧಗಳ ಕ್ರಮವು ಇಂತಿರುತ್ತದೆ- ಬಲ ಪಾರ್ಶ್ವದ ಮೇಲ್ಭಾಗದ ಹಸ್ತದಲ್ಲಿ ಪದ್ಮದ ಮೊಗ್ಗು , ಎಡಪಾರ್ಶ್ವದಲ್ಲಿ ಮೇಲ್ಭಾಗದಲ್ಲಿ ಗದೆ, ಬಲಪಾರ್ಶ್ವದ ಮುಂಭಾಗದ ಹಸ್ತದಲ್ಲಿ ಶಂಖ ಮತ್ತು ಎಡಪಾರ್ಶ್ವದ ಮುಂಭಾಗ ಹಸ್ತದಲ್ಲಿ ಚಕ್ರ.

ಪರಾಶರ ಸಂಹಿತೆ (೧೦ : ೧೪ - ೧೫) ಮತ್ತು ಶೇಷ ಸಂಹಿತೆ (೬೧ : ೧೨ - ೧೪) ಗಳಲ್ಲಿ ಈ ಮೂರ್ತಿಯು ಲಕ್ಷ್ಮೀ ಭೂದೇವಿ ಗಳೊಂದಿಗೆ ಇರುವುದಾಗಿ ಹೇಳಲಾಗಿದೆ.

**ಚಕ್ರ ಶಂಖ ಗದಾ ಪದ್ಮಧರಂ ನೀಲೋತ್ಪಲ ಪ್ರಭಮ್**
**ಪುಂಡರೀಕಾಕ್ಷಮಮಲಂ ಕಿರೀಟಾದಿ ವಿಭೂಷಿತಮ್ ॥**
**ಶ್ರೀಭೂಮಿಸಹಿತಂ ದೇವಂ ಪಂಕಜಾಸನ ಸಂಸ್ಥಿತಮ್**
**ಜ್ಞಾನಾನಂದಮಯಂ ದೇವಂ ನಾರಾಯಣ ಮುಪಾಸ್ಮಹೇ ॥**
**ಶ್ರೀಭೂಮಿ ನೀಲಾಸಹಿತಂ ನಾರಾಯಣಮಹಂ ಭಜೇ** (ಶೇಷಸಂಹಿತೆ ೫೮ : ೭)

ಶ್ರೀದೇವಿ - ಭೂದೇವಿ - ನೀಲಾದೇವಿ ಮುವ್ವರೂ ನಾರಾಯಣನೊಂದಿಗೆ ಇರುತ್ತಾರೆ ಎಂದು ಹೇಳುತ್ತದೆ. ನಾರಾಯಣನು ಪದ್ಮದ ಮೇಲೆ ಕುಳಿತಿದ್ದು ಕಿರೀಟ, ಕಟಕ, ಕೇಯೂರ, ಮಕರ ಕುಂಡಲಗಳನ್ನು ಧರಿಸಿದ್ದು ನೀಲವರ್ಣದ ಮೈಕಾಂತಿಯಲ್ಲಿರುತ್ತಾನೆ ಬಲಪಾರ್ಶ್ವದ ಮುಂದಿನಹಸ್ತದಲ್ಲಿ ಪದ್ಮ, ಮೇಲಿನ ಹಸ್ತದಲ್ಲಿ ಚಕ್ರ, ಎಡಪಾರ್ಶ್ವದ ಮುಂದಿನ ಹಸ್ತದಲ್ಲಿ ಗದೆ ಮೇಲಿನ ಹಸ್ತದಲ್ಲಿ ಶಂಖವನ್ನು ಧರಿಸಿರುತ್ತಾನೆ.

**ಚಕ್ರಶಂಖಗದಾಪದ್ಮಧರಂ ಶ್ರೀಭೂಪತಿಂ ವಿಭುಮ್**
**ಸರ್ವಾಲಂಕಾರ ಸಂಯುಕ್ತಂ ನಾರಾಯಣಮಹಂ ಭಜೇ ॥**

ಚಕ್ರ, ಶಂಖ, ಗದೆ, ಪದ್ಮಗಳನ್ನು ನಾಲ್ಕು ಹಸ್ತಗಳಲ್ಲಿ ಧರಿಸಿದ್ದು, ಶ್ರೀ ಮತ್ತು ಭೂದೇವಿಯರ ಒಡೆಯನಾಗಿದ್ದು, ಸಕಲ ಅಲಂಕಾರಗಳಿಂದಲೂ ವಿಭೂಷಿತನಾಗಿರುವ ನಾರಾಯಣಮೂರ್ತಿಯನ್ನು ನಾನು ಭಜಿಸುತ್ತೇನೆ.

ವಿಶ್ವಾಮಿತ್ರಸಂಹಿತೆಯಲ್ಲಿ (೬ : ೪೩ - ೪೭) ಈ ರೀತಿಯ ವಿವರಣೆ ಇದೆ :

ನಾರಾಯಣಂ ಸಮಾರಾಧ್ಯ ಚಕ್ರಾಬ್ಜೇ ಮಂಡಲೋತ್ತಮೇ
ನೀಲಾಂಬುದ ಪ್ರತೀಕಾಶಂ ಪುಂಡರೀಕಾಯತೇಕ್ಷಣಮ್ ॥
ಚತುರ್ಭಿರ್ಬಾಹು ಕಮಲೈ ಶ್ಚಕ್ರ ಶಂಖೌ ಗದಾಂಬುಜೇ
ದಧಾನಂ ಸೌಮ್ಯವಪುಷಂ ನೀಲ ಕುಂಚಿತ ಮೂರ್ಧಜಮ್ ॥
ವಸಾನಂ ಪೀತವಸನೇ ಪೂರ್ಣಚಂದ್ರನಿಭಾನನಮ್
ತಾಮ್ರೋಷ್ಠಂ ಚಾರುಹಸಿತಂ ಲಸನ್ಮಕರ ಕುಂಡಲಮ್ ॥
ಶ್ರೀವತ್ಸಂ ಕೌಸ್ತುಭಂ ಚೈವ ಬಿಭ್ರಾಣಾಂ ಬೃಹತೋರಸಾ
ಮುಕುಟಾಂಗದಹಾರಾದಿ ಸರ್ವಾಭರಣ ಭೂಷಿತಮ್ ॥
ವನಮಾಲಾಂ ದಧಾನಂ ಚ ಸೂರ್ಯ ಕೋಟಿಸಮಪ್ರಭಮ್
ರತ್ನಸಿಂಹಾಸನಾಸೀನಂ ಲಕ್ಷ್ಮ್ಯಾ ದೇವ್ಯಾ ಭುವಾ ಸಹ ॥

ನೀಲವರ್ಣದ ಕಾಂತಿಯಿಂದ ಕಂಗೊಳಿಸುತ್ತಿರುವ ನಾರಾಯಣನು ನಾಲ್ಕು ತೋಳುಗಳಿಂದ ಕೂಡಿದ್ದು ಸೌಮ್ಯ ರೂಪನಾಗಿದ್ದು ಹಳದಿಯ ವಸ್ತ್ರಗಳನ್ನು ಧರಿಸಿದ್ದು ಮುಗುಳ್ನಗೆಯಿಂದ ತನ್ನ ಕೆಂಪು ತುಟಿಗಳನ್ನು ಅರಳಿಸಿ ಪೂರ್ಣಚಂದ್ರನಂತೆ ಶೋಭಾಯಮಾನನಾಗಿದ್ದಾನೆ. ಮಕರ ಕುಂಡಲಗಳನ್ನು, ಶ್ರೀವತ್ಸ, ಕೌಸ್ತುಭ, ಮುಕುಟ, ವನಮಾಲೆ, ಸಕಲ ರತ್ನಾಭರಣಗಳನ್ನು ಧರಿಸಿರುತ್ತಾನೆ. ರತ್ನಸಿಂಹಾಸನದಲ್ಲಿ ಲಕ್ಷ್ಮೀ ಮತ್ತು ಭೂದೇವಿಯರೊಂದಿಗೆ ಮುಂಡಿಸಿದ್ದಾನೆ. ಈ ಮೂರ್ತಿಯ ಬಲಗಡೆಯ ಮುಂದಿನ ಹಸ್ತದಲ್ಲಿ ಚಕ್ರವನ್ನು, ಎಡಗಡೆ ಮುಂದಿನ ಹಸ್ತದಲ್ಲಿ ಶಂಖವನ್ನು ಹಿಡಿದಿದ್ದು, ಬಲಗಡೆಯ ಹಿಂದಿನ ಹಸ್ತದಲ್ಲಿ ಗದೆಯನ್ನು, ಎಡಗಡೆಯ ಹಿಂದಿನ ಹಸ್ತದಲ್ಲಿ ಪದ್ಮವನ್ನು ಧರಿಸಿರುತ್ತಾನೆ.

(ಆ) ಸಾತ್ತ್ವತ ಸಂಹಿತೆ (೧೨ : ೧೪೧ - ೧೪೪) ಮತ್ತು ಈಶ್ವರ ಸಂಹಿತೆ (೨೪ : ೩೩೪ : ೩೩೬). ಗಳಲ್ಲಿ ನಾರಾಯಣನ ಭಿನ್ನ ಸ್ವರೂಪದ ವರ್ಣನೆ ಹೀಗಿದೆ :

ಸ್ಫಾಟಿಕೇನಾಕ್ಷಸೂತ್ರೇಣ ಕರಸ್ಥೇನ ಚ ಶೋಭಿತಮ್
ಗಣಯನ್ನಕ್ಷಸೂತ್ರೀಯಾನಾವರ್ತಾನ್ ವಾಮ ಪಾಣಿನಾ ॥
ಅಥ ನಾರಾಯಣಂ ದೇವಂ ಧ್ಯಾಯೇತ್ ಕುಮುದ ಪಾಂಡುರಮ್
ಬದ್ಧ ಬ್ರಹ್ಮಾಂಜಲಿಂ ಶಾಂತಂ ಹೃತ್ಪದ್ಮಾರ್ಪಿತಮಾನಸಮ್ ॥
ಯುಂಜಾನಂ ಚ ಸ್ವಮಾತ್ಮಾನಂ ಪರಸ್ಮಿನ್ನವ್ಯಯೇ ಪದೇ
ಕಮಂಡಲುಧರಂ ಧ್ಯಾಯೇತ್ ಕಾಂಚನಾಭಮತೋ ಹರಿಮ್ ॥
ವಿಷ್ಟರಾವಿಷ್ಟಪಾಣಿಂ ಚ ಕ್ರಿಯಾಕಾಂಡ ಪ್ರದರ್ಶಕಮ್
ಪಠಂತಮನಿಶಂ ಶಾಸ್ತ್ರಂ ಪಂಚರಾತ್ರ ಪುರಸ್ಸರಮ್ ॥

ಬಿಳಿಯತಾವರೆಯ ಮೈಬಣ್ಣದಲ್ಲಿರುವ ನಾರಾಯಣನು ಎಡಪಾರ್ಶ್ವದ ಮೇಲಿನ ಹಸ್ತದಲ್ಲಿ ಅಕ್ಷಮಾಲೆಯನ್ನು ಹಿಡಿದು ಬಲಪಾರ್ಶ್ವದ ಮೇಲಿನ ಹಸ್ತದಲ್ಲಿ ಕಮಂಡಲುವನ್ನು ಹಿಡಿದಿರುತ್ತಾನೆ. ನಮಸ್ಕಾರ ಮುದ್ರೆಯಲ್ಲಿ (ಬಹ್ಮಾಂಜಲಿ) ಎರಡೂ ಹಸ್ತಗಳನ್ನು ಜೋಡಿಸಿ ಹೃದಯದಬಳಿ ಇರಿಸಿಕೊಂಡು ತಪಸ್ಸಿನಲ್ಲಿರುವಂತೆ ಇರಬಹುದು. ಅಥವ ಸ್ವಾಮಿಯು ಚಿನ್ನದ

ಮೈಬಣದಕಾಂತಿಯಲ್ಲಿದ್ದು ಈ ಮೊದಲು ಹೇಳಿರುವಂತೆ ಅಕ್ಷಮಾಲೆ - ಕಮಂಡಲಗಳನ್ನು ಹಿಡಿದಿದ್ದು ಮಂದಿನ ಹಸ್ತಗಳಲ್ಲಿ ಪುಸ್ತಕವನ್ನು ಹಿಡಿದು ಕ್ರಿಯಾಕಾಂಡ ಪ್ರದರ್ಶಕನಾಗಿ ಶಾಸ್ತ್ರ ಪಠಣಮಾಡುತ್ತಾ ಇರುತ್ತಾನೆ.

ಇದು ದ್ವಾದಶಮೂರ್ತಿಗಳಲ್ಲಿರುವ ನಾರಾಯಣನಿಗಿಂತಲೂ ಭಿನ್ನವಾದ ರೂಪ. ಆದ್ದರಿಂದ ಈತನೇ ಪ್ರತ್ಯೇಕವಾದ ಮೂರ್ತಿ ಎಂಬುದಾಗಿ ಗ್ರಹಿಸುವುದೇ ಸಾಧು.

(೯) ವಿಷ್ಣುವಿನ ಜನಪ್ರಿಯ ನಾಮಗಳಲ್ಲಿ ನಾರಾಯಣ ಎಂಬುದು ಒಂದು. **ಆಪೋ ನಾರಾ ಇತಿ ಪ್ರೋಕ್ತಾ ಅಯನಂ ಸ್ಥಾನಂ ಅಸ್ಯ** ನೀರಿನಲ್ಲಿ ಇರುವವನು ಎಂಬುದು ಸ್ಥೂಲಾರ್ಥ. **ನಾರಸ್ಯ ಜ್ಞಾನಸ್ಯ ಅಯನಂ ಪ್ರಾಪ್ಯಸ್ಥಾನಂ** ಸಕಲ ಜ್ಞಾನಗಳ ಮೂಲಗುರಿ ಎಂಬುದು ವ್ಯಾಪಕಾರ್ಥ. ಆದಿಮೂರ್ತಿಯು ವ್ಯೂಹಮೂರ್ತಿಗಳಾಗಿ ರೂಪುಗೊಳ್ಳುವುದಕ್ಕೆ ಮೂಲ ರೂಪವಿದೆಂದು ಹಲವರು ಗುರ್ತಿಸುತ್ತಾರೆ. ಸಕಲರ ಹೃದಯಗಳಲ್ಲಿ ವಾಸಿಸುವ **ದಹರಾಖ್ಯೇಹೃದಿ ಸ್ಥಿತೇ** ಅಂತರ್ಯಾಮಿ ಈತನೇ.

ನಾರಾಯಣನ ಸಾಧಾರಣ ಮೂರ್ತಿ ರೂಪವು ವಿಷ್ಣುವಿನದೇ. ಆದರೆ ನಾರಾಯಣ ಎಂದಾಗ ಸೂರ್ಯಬಿಂಬದೊಂದಿಗೆ ಸಂಬಂಧವಿದೆ ಎನ್ನುತ್ತಾರೆ. ಈ ಮೂರ್ತಿಯ ಧ್ಯಾನಶ್ಲೋಕವು ಇಂತಿದೆ -

**ಧ್ಯೇಯಃ ಸದಾ ಸವಿತೃ ಮಂಡಲ ಮಧ್ಯವರ್ತೀ**
**ನಾರಾಯಣಃ ಸರಸಿಜಾಸನ ಸಂ ನಿವಿಷ್ಟಃ ।**
**ಕೇಯೂರವಾನ್ ಮಕರ ಕುಂಡಲವಾನ್ ಕಿರೀಟೀ**
**ಹರೀ ಹಿರಣ್ಮಯ ವಪುಃ ಧೃತಶಂಖಚಕ್ರಃ ॥**

(ಶೇಷ ಸಂಹಿತೆ ೩೪ :೧೬ ಮತ್ತು ಆದಿತ್ಯ ಹೃದಯ)

ನಾರಾಯಣ ಮೂರ್ತಿಯುನ್ನು ಸವಿತೃ (ಸೂರ್ಯ) ಮಂಡಲದ ಮಧ್ಯದಲ್ಲಿರುವಂತೆ ರೂಪಿಸಿಕೊಂಡು ಧ್ಯಾನಿಸಬೇಕು. ತಾವರೆಯ ಮೇಲೆ ಕುಳಿತಿರುವ ಈ ಸ್ವಾಮಿಗೆ ಎರಡು ಭುಜಗಳು. ಈತನ ಮೈಕಾಂತಿಯು ಬಂಗಾರದಂತಿರುತ್ತದೆ. ಈ ಸ್ವಾಮಿಯು ಹಾರ, ಕೇಯೂರ, ಕಟಕಗಳನ್ನು ಮಕರ ಕುಂಡಲಗಳನ್ನು ಧರಿಸಿರುತ್ತಾನೆ. ವಕ್ಷದ ಮೇಲೆ ಶ್ರೀವತ್ಸ, ಕೊರಳಲ್ಲಿ ವನಮಾಲೆ ಮತ್ತು ಪೀತಾಂಬರಗಳಿಂದ ಅಲಂಕೃತನಾಗಿರುತ್ತಾನೆ. ಶಾಂತ ಮುಖಭಾವ. ಬಿಳಿಯ ಕಮಲದ ಮೇಲೆ ಸಮಸ್ಥಿತಿ ಭಂಗಿಯಲ್ಲಿ ಸ್ವಾಮಿಯು ನಿಂತಿರಬಹುದು. ಈತನನ್ನು *ಸೂರ್ಯನಾರಾಯಣಮೂರ್ತಿ* ಎನ್ನುತ್ತಾರೆ. ಈತನಿಗೆ ಎರಡು ತೋಳುಗಳು ಬಲಹಸ್ತದಲ್ಲಿ ಚಕ್ರ ಎಡಹಸ್ತದಲ್ಲಿ ಶಂಖವನ್ನು ಧರಿಸಿರುತ್ತಾನೆ.

ನಾರಾಯಣ ಹೃದಯದಲ್ಲಿ **ಉದ್ಯದಾತಿತ್ಯ ಸಂಕಾಶ** ಮೂಡುತ್ತಿರುವ ಸೂರ್ಯನ ಮೈಕಾಂತಿ ಎಂದು, ಕಾಳಿಕಾ ಪುರಾಣದಲ್ಲಿ **ಶುದ್ಧಸ್ಫಟಿಕ ಸಂಕಾಶ** ಎಂದು ವರ್ಣಿತನಾಗಿದ್ದಾನೆ. ಆದರೆ **ನೀಲಮೇಘಶ್ಯಾಮ**ನೆಂದೂ, **ನೀಲಾಂಬುಜ ಭವಿಃ** ಎಂದೇ ನಾರಾಯಣನು ಜನಪ್ರಿಯನಾಗಿದ್ದಾನೆ. ನಿರಾಕಾರತ್ವಕ್ಕೆ ಹತ್ತಿರನಾಗಿರುವ ನಾರಾಯಣನು ನೀಲ ಎಂದು ಆಕಾಶದಂತೆ ಆಕಾರ ರಹಿತನೆಂಬುದರ ಸೂಚನೆ ಇದು. ಈ ದೇವ ಕೇವಲ ಜ್ಞಾನದಿಂದ ಮಾತ್ರವೇ ತಿಳಿಯಬಲ್ಲವನು. ತಮ್ಮ ಧ್ಯಾನಕ್ಕೆ ನೆರವಾಗಲೆಂದು ಮಾತ್ರವೇ ಭಕ್ತರು ನಾರಾಯಣನಿಗೆ ರೂಪವನ್ನು ಆಪಾದಿಸಿದ್ದಾರೆ. ಚತುರ್ವಿಂಶತಿ ಮೂರ್ತಿಗಳಲ್ಲಿರುವ ನಾರಾಯಣನು ಈತನಿಗಿಂತಲೂ ಭಿನ್ನನು ಮತ್ತು ಪ್ರತ್ಯೇಕನಾದವನು ಎಂಬುದನ್ನು ಮಾತ್ರ ಗಮದಲ್ಲಿರಿಸಿಕೊಂಡಿರಬೇಕು.



ಚಿತ್ರ ೨೦ : ಸೂರ್ಯನಾರಾಯಣಮೂರ್ತಿ

## ೩. ಮಾಧವ

ಮಾಧವನನ್ನು ಭಕ್ತನ ಬಲಗಣ್ಣಿಗೆ ಆವಾಹಿಸಲಾಗುತ್ತದೆ. **ಗದಾಧರೋ ಮಾಧವಶ್ಚ ಚಕ್ರ ಶಂಖಾಂಬುಜಾಯುಧಃ** (ಮಾರ್ಕಂಡೇಯ, ೮ . ೪) ಎಂದು ಗರುಡ ಸಂಹಿತೆಯು **ಮಾಧವಶ್ಚಕ್ರ ಶಂಖಾಬ್ಜಗದಾಧರಕರಃ ಸ್ಮೃತಃ** ಎಂದು ಹೇಳುತ್ತದೆ. ರೂಪಮಂಡನ (೩ : ೧೦) **ಮಾಧವಸ್ತು ಗದಾ ಚಕ್ರಂ ಶಂಖಂ ವಹತಿ ಪಂಕಜಮ್** ಎಂದು ವಿವರಿಸುತ್ತದೆ. ಪಾಂಚರಾತ್ರ ಕ್ರಿಯಾಪಾದದಲ್ಲಿ

**ಮಾಧವ ಸ್ತೂತ್ಪಲ ಪ್ರಖ್ಯ ಶ್ಚಕ್ರ ಶಂಖಗದಾಬ್ಜ ಭೃತ್**
**ಚಿತ್ರ ಮಾಲ್ಯಾಂಬರಧರಃ ಪುಂಡರೀಕ ನಿಭೇಕ್ಷಣಃ ॥**

ಮಾಧವಮೂರ್ತಿಯು ನೀಲೋತ್ಪಲದ (ನೀಲಿ ತಾವರೆ)ಯಬಣ್ಣದ ಮೈಕಾಂತಿಯಿಂದ ಹೊಳೆಯುತ್ತಿದ್ದ ಬಗೆಬಗೆಯ ವರ್ಣಗಳ ವಸ್ತ್ರಗಳಿಂದ ಅಲಂಕೃತನಾಗಿ ಅರಳಿದ ತಾವರೆಯಂತೆ ಪ್ರಕಾಶಿಸುತ್ತಿರುತ್ತಾನೆ. ಈತನು ಬಗೆಬಗೆಯ ಮಾಲೆಗಳನ್ನು ಧರಿಸಿರುತ್ತಾನೆ. ಮೂರ್ತಿಯು ಬಲಗಡೆಯ ಕೆಳಹಸ್ತದಲ್ಲಿ ಗದೆ, ಮೇಲಿನಹಸ್ತದಲ್ಲಿ ಚಕ್ರ, ಎಡಗಡೆಯ ಕೆಳಭಾಗದ ಹಸ್ತದಲ್ಲಿ ಪದ್ಮ, ಮೇಲಿನ ಎಡ ಹಸ್ತದಲ್ಲಿ ಶಂಖ ಇರುತ್ತವೆ.

ಹಯಶೀರ್ಷ ಸಂಹಿತೆಯಲ್ಲಿ (ಆದಿ ೧೯ : ೫ - ೬) ಕೆಂಪು ತಾವರೆ, ಪಾಂಚಜನ್ಯ ಶಂಖ, ಚಕ್ರ, ಗದೆ ಇರಬೇಕು. ಮಾಧವನು ಆದಿಮೂರ್ತಿಯ ಒಂದು ಭೇದರೂಪ [**ಸವ್ಯಾಧಃ ಪಂಕಜಂ ಯಸ್ಯ ಪಾಂಚಜನ್ಯಂ ತಥೋಪರಿ ॥ ದಕಿಣೋರ್ಧ್ವಂ ಯಸ್ಯ ಚಕ್ರಂ ಗದಾ ಚಾಧೋ ವ್ಯವಸ್ಥಿತಾ । ಆದಿಮೂರ್ತೇಸ್ತು ಭೇದೋಽಯಂ ಮಾಧವೇತಿ ಪ್ರಕೀರ್ತ್ಯತೇ॥**] ಎಂದು ಹೇಳಲಾಗಿದೆ

**ಮಾಧವಂ ಚಾಧುನಾ ಪ್ರೋಕ್ತಂ ಮಧು ಕೈಟಭನಾಶನಮ್**
**ಅಸ್ತ್ರ ವಿನ್ಯಾಸ ಭೇದಂ ತು ಶೃಣು ಚಾಸ್ಯ ಮಹಾಮುನೇ ॥**
**ವಾಮ ಪಾರ್ಶ್ವೋರ್ಧ್ವ ಹಸ್ತೇ ತು ಶಂಖಂ ಧವಳಕಂ ನ್ಯಸೇತ್**
**ಅಧೋಹಸ್ತೇ ನ್ಯಸೇದ್ರಕ್ತಂ ಪದ್ಮಂ ದ್ವಾದಶಪತ್ರಕಮ್ ॥**
**ದಕ್ಷಿಣೋರ್ಧ್ವಕರೇ ಚಕ್ರಮಧಸ್ತಾಲ್ಲಕುಟಂ ನ್ಯಸೇತ್**
**ತೃತೀಯ ತು ಭವೇನ್ಮೂರ್ತೀರ್ಮಾದವಾಖ್ಯಂ ತು ನಾರದ ॥**

(ವಿಷ್ವಕ್ಸೇನ ಸಂಹಿತೆ, ೧೧ : ೧೬೧ - ೧೬೩)

ಮಧು ಕೈಟಭರನ್ನು ಕೊಂದ ಮಾಧವನ ಅಸ್ತ್ರ ವಿನ್ಯಾಸ ಬೇಧವು ಇಂತಿರುತ್ತದೆ. ಎಡಪಾರ್ಶ್ವದ ಮೇಲಿನ ಹಸ್ತದಲ್ಲಿ ಧವಳ ವರ್ಣದ ಶಂಖವಿರುತ್ತದೆ. ಕೆಳಹಸ್ತದಲ್ಲಿ ರಕ್ತವರ್ಣದ ಪದ್ಮವಿರುತ್ತದೆ. ಇದರಲ್ಲಿ ಹನ್ನೆರಡು ದಳಗಳಿರಬೇಕು. ಬಲಪಾರ್ಶ್ವದ ಮೇಲಿನ ಹಸ್ತದಲ್ಲಿ ಚಕ್ರವು, ಕೆಳಹಸ್ತದಲ್ಲಿ ಗದೆ ಹಿಡಿದಿರುತ್ತಾನೆ. ಈ ಮೂರ್ತಿಯನ್ನು ಮಾಧವನೆಂದು ಕರೆಯುತ್ತಾರೆ. ಈತನು ಮೊದಲ ದ್ವಾದಶಮೂರ್ತಿಗಳಲ್ಲಿ ಮೂರನೆಯವನು.

## ೪. ಗೋವಿಂದ

ಅ ಭಕ್ತನ ಎಡಗಣ್ಣಿನಲ್ಲಿ ಆವಾಹಿತನಾಗುವ ಈ ದೇವನು ವ್ಯೂಹ ಸಂಕರ್ಷಣನಿಂದ ಬಂದವನು. **ಗೋವಿಂದಶ್ಚಕ್ರ ದಂಡಾಬ್ಜ ಶಂಖಾಯುಧಧರೋ ಭವೇತ್ ।** (ಮಾರ್ಕಂಡೇಯ ಸಂಹಿತೆ ೮ : ೫) ಎಂದೂ, ರೂಪಮಂಡನದಲ್ಲಿ (೩ : ೧೨) **ಗೋವಿಂದೋ ಧರತೇ ಚಕ್ರಂ ಗದಾಂ ಪದ್ಮಂ ಚ ಕಂಬುನಾ** ಎಂದೂ ಹೇಳಲಾಗಿದೆ. ಪಾಂಚರಾತ್ರ ಆಗಮದಲ್ಲಿ



ಚಿತ್ರ ೭೧ : ಮಾಧವ ಮೂರ್ತಿ



ಚಿತ್ರ ೭೨ : ಗೋವಿಂದ ಮೂರ್ತಿ

**ಗೋವಿಂದ: ಶಶಿವರ್ಣ ಸ್ಯಾತ್ಪದ್ಮ ಶಂಖಗದಾರಿ ಭೃತ್**

**ರಕ್ತಾರವಿಂದ ನಯನ ಸ್ಪೃಷ್ಟ ಕಾಂಚನ ಭೂಷಣಃ ॥**

ಚಂದ್ರನಂತೆ ಬಿಳುಪುವರ್ಣದ ಮೈಕಾಂತಿಯಿಂದ ಇರುವ, ಕೆಂದಾವರೆಯಂತಹ ಕಣ್ಣುಗಳುಳ್ಳ ಝುಗಝುಗಿಸುವ ಬಂಗಾರದ ಆಭರಣಗಳೊಂದಿಗೆ ನಾಲ್ಕು ಭುಜಗಳನ್ನು ಪಡೆದಿದ್ದು ಬಲಪಾರ್ಶ್ವದ ಮುಂದಿನ ಹಸ್ತದಲ್ಲಿ ಚಕ್ರ, ಮೇಲ್ಭಾಗದ ಹಸ್ತದಲ್ಲಿ ಗದೆ ಮತ್ತು ಅದೇ ರೀತಿ ಎಡಪಾರ್ಶ್ವದ ಮುಂದಿನ ಹಸ್ತದಲ್ಲಿ ಶಂಖ, ಮೇಲ್ಭಾಗದ ಹಸ್ತದಲ್ಲಿ ಪದ್ಮ ಹಿಡಿದಿರುತ್ತಾನೆ.

ಪರಾಶರಸಂಹಿತೆಯು (೧೩ : ೪೦) **ಚಕ್ರಶಂಖಗದಾಪದ್ಮಧಾರಿಣಮ್ ವನಮಾಲಿನಮ್। ಸರ್ವಾಭರಣ ಭೂಷಾಂಗಂ ಗೋವಿಂದಂ ತಂ ನಮಾಮ್ಯಹಮ್।** ಎಂದು ಹೇಳಿ ವನಮಾಲೆ, ಶ್ರೀವತ್ಸ, ಕೌಸ್ತುಭಗಳ ಅಲಂಕರಣವೂ ಈ ಮೂರ್ತಿಗೆ ಉಂಟೆಂದು ಹೇಳುತ್ತದೆ.

**ವಾಸುದೇವಸ್ಯ ಭೇದೋSಯಂ ವಕ್ಷ್ಯೇ ಸಂಕರ್ಷಣಸ್ಯ ತು**

**ತರುಣಾರ್ಕನಿಭಂ ವಾಪಿ ಶ್ಯಾಮಂ ವಾಭ್ರನಿಭಂ ತು ವಾ ॥**

**ಪೀತವಸ್ತ್ರಂ ಚತುರ್ಬಾಹುಂ ಸರ್ವಾಭರಣಭೂಷಿತಮ್**

**ಸರ್ವಾಭರಣ ಸಂಯುಕ್ತಂ ಗೋವಿಂದಂ ಗೋಕುಲಾಲಯಮ್ ॥**

**ಏವಂ ಧ್ಯಾಯೇನ್ಮುನಿಶ್ರೇಷ್ಠ ಸರ್ವಕಾಮಪ್ರದಂ ಹರಿಮ್**

**ಅಸ್ಯಾಸ್ತ್ರನ್ಯಾಸ ಭೇದಂ ತು ಶೃಣು ನಾರದ ಸತ್ತಮ ॥**

**ದಕ್ಷಿಣೋರ್ಧ್ವಕರೇ ತಸ್ಯ ಗದಾಂ ಚಕ್ರಮಧೋ ನ್ಯಸೇತ್**

**ವಾಮಪಾರ್ಶ್ವಸ್ಥ ಹಸ್ತೇ ತು ರತ್ನ(ಕ್ತ) ಪದ್ಮಂ ತು ವಿನ್ಯಸೇತ್ ॥**

**ಅಥ ಕುರ್ಯಾತ್ತು ವಿಪ್ರೇಂದ್ರ ಶಂಖಂ ಗೋಕ್ಷೀರ ಸನ್ನಿಭಮ್**

**ಗೋವಿಂದ ಏವಂ ಸಂಪ್ರೋಕ್ತೋ ವಿಷ್ಣ್ವಾಖ್ಯಮಧುನಾ ಶೃಣು ॥**

ಪರಾವಾಸುದೇವನಿಂದ ಮೂಡಿಬಂದ ಸಂಕರ್ಷನಿಂದ ರೂಪುಗೊಂಡ ಗೋವಿಂದನ ವರ್ಣವು ಉದಯಿಸುತ್ತಿರುವ ಸೂರ್ಯನಂತೆ ಕಿತ್ತಳೆಬಣ್ಣ, ಶ್ಯಾಮಲ ಅಥವ ಬೂದುಬಣ್ಣವಾಗಿರಬಹುದು. ಸಕಲ ಕಾಮನೆಗಳನ್ನು ಪೂರೈಸುವಂತಹ ಈ ಮೂರ್ತಿ ಸರ್ವಾಭರಣಗಳಿಂದ ಅಲಂಕೃತನಾಗಿರುತ್ತಾನೆ. ಈ ಮೂರ್ತಿಯು ಬಲಪಾರ್ಶ್ವದ ಮುಂದಿನ ಹಸ್ತದಲ್ಲಿ ಚಕ್ರವನ್ನು ಮೇಲಿನ ಹಸ್ತದಲ್ಲಿ ಗದೆಯನ್ನು ಹಿಡಿದಿರುತ್ತಾನೆ. ಎಡ ಪಾರ್ಶ್ವದ ಮುಂದಿನ ಹಸ್ತದಲ್ಲಿ ಕೆಂದಾವರೆಯನ್ನು, ಮೇಲಿನ ಹಸ್ತದಲ್ಲಿ ಬಿಳಿಯ ಶಂಖವನ್ನು ಹಿಡಿದಿರುತ್ತಾನೆ.

## ೫. ವಿಷ್ಣು

ಇದು ಚತುರ್ವಿಂಶತಿ ಮೂರ್ತಿಗಳಲ್ಲಿ ಬರುವ ವಿಷ್ಣುಮೂರ್ತಿಯು ಆದಿಮೂರ್ತಿ ವಿಷ್ಣುವಲ್ಲ ಎಂಬುದನ್ನು ಮೊದಲು ಸ್ಪಷ್ಟವಾಗಿ ಅರಿತುಕೊಳ್ಳಬೇಕು. ಸಂಧ್ಯಾಕರ್ಮದಲ್ಲಿ ಈ ಮೂರ್ತಿಯನ್ನು ಭಕ್ತನ ಮೂಗಿನ ಬಲಪುಟದಲ್ಲಿ (ಹೊಳ್ಳೆಯಲ್ಲಿ) ಆವಾಹಿಸಲಾಗುತ್ತದೆ. **ವಿಷ್ಣು: ಕೌಮೋದಕೀಂ ಪದ್ಮಂ ಪಾಂಚಜನ್ಯಂ ಸುದರ್ಶನಮ್** (ರೂಪಮಂಡನಂ, ೩ : ೧೩) ಎಂದು ಕೌಮೋದಕೀ ಗದೆ, ಪದ್ಮ, ಪಾಂಚಜನ್ಯ ಶಂಖ ಮತ್ತು ಸುದರ್ಶನ ಎಂಬ ಚಕ್ರಗಳನ್ನು ಹಿಡಿದಿರಬೇಕು ಎಂಬ ವಿಷ್ಣುವಿನ ವರ್ಣನೆ ಇದೆ. ಪಾಂಚರಾತ್ರಾಗಮದಲ್ಲಿ



ಚಿತ್ರ ೭೩ : ವಿಷ್ಣುಮೂರ್ತಿ

**ಧೌತವರ್ಣೋ ಭವೇದ್ವಿಷ್ಣು ಶ್ಚಕ್ರ ಶಂಖ ಗದಾಬ್ಜ ಭೃತ್**

**ಹೇಮಾಂಬರಧರಃ ಸ್ರಗ್ವೀ ಕೇಯೂರಾಂಗದ ಭೂಷಿತಃ ||**

ವಿಷ್ಣು ಮೂರ್ತಿಯು ಬಿಳಿ ವರ್ಣದ ಮೈಕಾಂತಿಯಲ್ಲಿ ಬಂಗಾರದ ಬಣ್ಣದ ವಸ್ತ್ರಗಳನ್ನು ಧರಿಸಿ ಹೂಮಾಲೆಗಳನ್ನು, ಕಡಗಗಳು, ಕಂಕಣಗಳು, ಸರಗಳು ಮುಂತಾದ ಸಕಲ ಆಭರಣಗಳಿಂದ ಅಲಂಕೃತವಾಗಿದ್ದು ನಾಲ್ಕು ಹಸ್ತಗಳೊಂದಿಗೆ ವಿರಾಜಮಾನವಾಗಿರುತ್ತಾನೆ. ಬಲಭಾಗದ ಕೆಳಗಿನ ಹಸ್ತದಲ್ಲಿ ಗದೆ ಮತ್ತು ಮೇಲಿನ ಹಸ್ತದಲ್ಲಿ ಪದ್ಮ ಇರುತ್ತದೆ. ಅದೇ ರೀತಿಯಾಗಿ ಎಡಭಾಗದಲ್ಲಿ ಕೆಳಗಿನ ಹಸ್ತದಲ್ಲಿ ಚಕ್ರ ಮತ್ತು ಮೇಲಿನ ಹಸ್ತದಲ್ಲಿ ಶಂಖ ಇರುತ್ತದೆ.

ವಿಷ್ವಕ್ಸೇನ ಸಂಹಿತೆ (೧೧ : ೧೬೯ - ೧೭೫)ಯು ಈ ಮೂರ್ತಿಯನ್ನು ಎರಡು ಬಗೆಯಲ್ಲಿ ವರ್ಣಿಸಿದೆ :

**ರಕ್ತ ಪದ್ಮದಲ ಪ್ರಖ್ಯಂ ಶ್ಯಾಮಂ ವಾ ರಕ್ತಮೇವ ವಾ**

**ಕೃಷ್ಣಾಂ ವಾ ಮುನಿಶಾರ್ದೂಲ ಸರ್ವಲಕ್ಷಣ ಸಂಯುತಮ್ ||**

**ಸರ್ವಾವಯ ಸಂಪೂರ್ಣಂ ಸರ್ವಾಭರಣ ಭೂಷಿತಮ್**

**ಶಂಖ ಚಕ್ರಗದಾಪಾಣಿಂ ಪೀತವಸ್ತ್ರಂ ಚತುರ್ಭುಜಮ್ ||**

**ಸರ್ವಾಲಂಕಾರ ಸಂಯುಕ್ತಂ ಧ್ಯಾಯೇದ್ ವಿಷ್ಣುಂ ಸನಾತನಮ್**

**ಪ್ರಥಮೇ ತು ಕರೇ ಪದ್ಮಂ ಹ್ಯಧಸ್ತಾತ್ಕಾರಯೇದ್ ಗದಾಮ್ ||**

**ವಾಮೇ ಶಂಖಂ ನ್ಯಸೇತ್ತಸ್ಯಾಭಯಂ ಚಕ್ರಂ ವಿರಾಜಿತಮ್**

ಕೆಂದಾವರೆಯ ರಕ್ತವರ್ಣ, ಶ್ಯಾಮಲ ಅಥವ ಕಪ್ಪು ವರ್ಣದ ಮೈಕಾಂತಿಯುಳ್ಳ ಸರ್ವಲಕ್ಷಣ ಸಂಪನ್ನನಾದ ಸರ್ವಾಭರಣಗಳಿಂದಲೂ ಅಲಂಕೃತನಾಗಿರುವ, ನಾಲ್ಕು ತೋಳುಗಳಿದ್ದು ಹಳದಿಯ ವಸ್ತ್ರಗಳನ್ನು ಧರಿಸಿರುವ ಮತ್ತು ಶಂಖ ಚಕ್ರ ಗದೆಗಳನ್ನು ಧರಿಸಿರುವ ವಿಷ್ಣುಮೂರ್ತಿಯನ್ನು ಧ್ಯಾನಿಸುತ್ತೇನೆ.

ಮೊದಲ ಬಗೆಯ ವಿಷ್ಣು ಮೂರ್ತಿಯ ಬಲಪಾರ್ಶ್ವದ ಮುಂದಿನ ಹಸ್ತದಲ್ಲಿ ಗದೆಯನ್ನು, ಮೇಲಿನ ಹಸ್ತದಲ್ಲಿ ಪದ್ಮವನ್ನು, ಎಡಪಾರ್ಶ್ವದಲ್ಲಿ ಮೇಲಿನ ಹಸ್ತದಲ್ಲಿ ಶಂಖವನ್ನು ಮುಂದಿನ ಹಸ್ತದಲ್ಲಿ ಚಕ್ರವನ್ನು ಧರಿಸಿರುತ್ತಾನೆ.

**(ಆ) ಅಥವಾ ಮುನಿಶಾರ್ದೂಲ ಶೃಣು ವಿಷ್ಣುಂ ಸನಾತನಮ್ ||**

**ಋಜುಸ್ಥಿತಂ ಸುಸೌಮ್ಯಂ ಯತ್ಕಟ ಹಸ್ತ ಸಮನ್ವಿತಮ್**

**ಶಂಖಚಕ್ರೋಭಯೋಪೇತಂ ಪೀತಾಂಬರ ಸಮನ್ವಿತಮ್ ||**

**ಸರ್ವಾವಯ ಸಂಪೂರ್ಣಂ ಸರ್ವಾಭರಣಭೂಷಿತಮ್**

**ಸರ್ವಾಲಂಕಾರ ಸಂಯುಕ್ತಂ ಧ್ಯಾಯೇದ್ವಿಷ್ಣುಂ ಸನಾತನಮ್ ||**

**ದ್ವಿಃಪ್ರಕಾರಂ ಮಯಾ ಪ್ರೋಕ್ತಂ ವಿಷ್ಣುಂ ಸಕಲಮವ್ಯಯಮ್**

**ಏವಂ ಧ್ಯಾಯೇನ್ಮುನಿ ಶ್ರೇಷ್ಠ ಕರ್ತುರಿಚ್ಛಾ ವಶಾತ್ ಕುರು ||**

ಎರಡನೆಯ ಬಗೆಯ ವಿಷ್ಣುಮೂರ್ತಿಯು ಸಮಪಾದಸ್ಥಾನಕಭಂಗಿಯಲ್ಲಿ ನಿಂತಿದ್ದು, ಸೌಮ್ಯಮುಖದೊಂದಿಗಿರುತ್ತಾನೆ. ಮೇಲಿನ ಬಲಹಸ್ತದಲ್ಲಿ ಚಕ್ರವನ್ನು ಎಡಹಸ್ತದಲ್ಲಿ ಶಂಖವನ್ನು ಧರಿಸಿದ್ದು ಕೆಳಗಿನ ಬಲಹಸ್ತದಲ್ಲಿ ಅಭಯಹಸ್ತವನ್ನೂ, ಎಡಹಸ್ತವನ್ನು

ಕಟ್ಯಾವಲಂಬಿತಹಸ್ತವಾಗಿ ಇರಿಸಿಕೊಂಡಿರುತ್ತಾನೆ.

ಈ ರೀತಿ ವಿಷ್ಣುವನ್ನು ಎರಡು ಬಗೆಗಳಲ್ಲಿ ವರ್ಣಿಸಲಾಗಿದೆ. ಭಕ್ತರಾದವರು ಇವರಲ್ಲಿ ಯಾರನ್ನಾದರೂ ಆಯ್ಕೆ ಮಾಡಿಕೊಂಡು ಮನಸಾಭೀಷ್ಟ ಸಿದ್ಧಿಯನ್ನು ಗಳಿಸಬಹುದು.

(ಇ) ಈ ಮೂರ್ತಿಗೆ ವಾಹನ ಪರಿವಾರಗಳೂ ಉಂಟೆಂಬ ವಿವರಣೆ ಇದೇ ವಿಷ್ವಕ್ಸೇನ ಸಂಹಿತೆ (೩೮ : ೫೧ - ೫೫) ಈ ರೀತಿಯಾಗಿ ವಿವರಿಸುತ್ತದೆ

**ಶಂಖ ಚಕ್ರಧರಂ ದೇವಂ ಪೀತವಾಸಂ ಚತುರ್ಭುಜಮ್ ॥**
**ಸರ್ವಾಭರಣ ಸಂಯುಕ್ತಂ ವನಮಾಲಾ ವಿರಾಜಿತಮ್**
**ರಾಜಾವರ್ತಮಣಿ ಪ್ರಖ್ಯಂ ಹಾರಕೇಯೂರ ಭೂಷಿತಮ್ ॥**
**ಶ್ರೀವತ್ಸ ವಕ್ಷಸಂ ಚಾರು ಮಕರಾಕೃತಿ ಕುಂಡಲಮ್**
**ಕಂಬುಗ್ರೀವಂ ಮಹಾಬಾಹುಂ ಕಿಂಚಿತ್ಪ್ರ ಹಸಿತಾನನಮ್ ॥**
**ಏವಂ ಧ್ಯಾತ್ವಾ ಮಹಾವಿಷ್ಣುಂ ಗರುಡೋಪರಿ ಸಂಸ್ಥಿತಮ್**
**ಸಹ ದ್ವಾದಶಭಿಶ್ಚೈವ ಮೂರ್ತಿಭಿರ್ದಶಭಿಸ್ತದಾ ॥**
**ಲೋಕ ಪಾಲೈಸ್ತಥಾದಿತ್ಯೈ: ರುದ್ರೈರ್ವಸುಭಿರೇವ ಚ**
**ಋಷಿಭಿ ಶ್ಚಾರಣೈಸ್ಸಿದ್ಧೈ: ಕಿನ್ನರೈರಪ್ಸರೋಗಣೈ: ॥**

ಶಂಖ - ಚಕ್ರಗಳನ್ನು ಧರಿಸಿದ್ದು ನಾಲ್ಕು ಭುಜಗಳುಳ್ಳ, ಹಳದಿಯ ವಸ್ತ್ರಗಳನ್ನು ಧರಿಸಿರುವ ದೇವನು ಎಲ್ಲಾ ಆಭರಣಗಳನ್ನೂ ಧರಿಸಿದ್ದು, ಹಾರ, ಕೇಯೂರಗಳನ್ನು, ಮಣಿಗಳನ್ನೂ, ವನಮಾಲೆ, ಕೌಸ್ತುಭ, ಶ್ರೀವತ್ಸಗಳನ್ನು, ಮಕರ ಕುಂಡಲಗಳನ್ನು ಧರಿಸಿರುವ ವಿಷ್ಣುಮೂರ್ತಿಯ ಕಂಠವು ಶಂಖದಂತೆ ಇದ್ದು ಅಜಾನುಬಾಹುವಾಗಿ, ವಿಶಾಲ ವಕ್ಷಸ್ಥಳವನ್ನು, ಬಾಹುಗಳನ್ನು ಪಡೆದಿರುತ್ತಾನೆ. ಈತನು ಗರುಡನ ಮೇಲೆ ಕುಳಿತಿದ್ದರೆ ಈತನನ್ನು ಆವರಿಸಿಕೊಂಡು ದ್ವಾದಶಮೂರ್ತಿಗಳು, ದಶಾವತಾರಮೂರ್ತಿಗಳು, ಅಷ್ಟದಿಕ್ಪಾಲಕರೂ, ದ್ವಾದಶ ಆದಿತ್ಯರು, ಏಕಾದಶ ರುದ್ರರು, ಅಷ್ಟ ವಸುಗಳು, ಋಷಿಗಳು, ಚಾರಣರು, ಸಿದ್ಧರು, ಕಿನ್ನರರು, ಅಪ್ಸರೆಯರು ಇರುತ್ತಾರೆ.

ಇಲ್ಲಿ ಶಂಖ - ಚಕ್ರಗಳನ್ನು ಮಾತ್ರವೇ ಹೇಳಿರುವುದರಿಂದ ಮುಂದಿನ ಬಲಹಸ್ತದಲ್ಲಿ ಅಭಯ ಮುದ್ರೆ ಎಡಹಸ್ತದಲ್ಲಿ ವರದ ಮುದ್ರೆ ಅಥವ ಕಟ್ಯಾವಲಂಬಿತ ಹಸ್ತಮುದ್ರೆ ಇರಬಹುದು. ಇದು ಚತುರ್ವಿಂಶತಿ ಮೂರ್ತಿಗಳಲ್ಲಿರುವ ವಿಷ್ಣುವಲ್ಲ.

(ಈ) ಈ ಮೂರ್ತಿಗೆ ಎಂಟು ಬಾಹುಗಳಿರುವಂತಹ ಒಂದು ವಿಶೇಷರೂಪು ವಿಷ್ಣುಸಂಹಿತೆ (೧ : ೧೮ - ೨೦) ಯಲ್ಲಿ ಈ ರೀತಿ ವರ್ಣಿಸಲಾಗಿದೆ :

**ಶಂಖ ಚಕ್ರಗದಾ ಪದ್ಮ ಶಾರ್ಙ್ಗಾಸಿ ಶರಖೇಟಕೈ:**
**ಶ್ರೀವತ್ಸಕೌಸ್ತುಭಾ ಪೀತ ಕೌಶೇಯೈರ್ವನಮಾಲಯಾ ॥**
**ಕಿರೀಟ ಹಾರ ಕೇಯೂರ ಕುಂಡಲಾದಿ ವಿಭೂಷಣೈ:**
**ಅಲಂಕೃತಮುದಾರಾಂಗಮ ಪ್ರಮೇಯಂ ಸುರೋತ್ತಮಮ್ ॥**
**ದಿವ್ಯರೂಪಂ ಖಗಾರೂಢಂ ದಿವ್ಯಗಂಧಾನು ಲೇಪನಮ್**
**ಸಹಸ್ರಾದಿತ್ಯ ಸಂಕಾಶಂ ದುರ್ನಿರೀಕ್ಷ್ಯಂ ಸುರಾಸುರೈ: ॥**

ಶ್ರೀವತ್ಸ, ಕೌಸ್ತುಭ, ವನಮಾಲೆ, ಹಳದಿಯ ವಸ್ತ್ರಗಳು, ಕಿರೀಟ, ಹಾರ, ಕೇಯೂರ ಕುಂಡಲಗಳು ಮುಂತಾದುವುಗಳಿಂದ ಅಲಂಕೃತನಾಗಿರುವ ಸುರಶ್ರೇಷ್ಠನು ಎಂಟು ಬಾಹುಗಳನ್ನು ಪಡೆದಿದ್ದು ಅವುಗಳಲ್ಲಿ ಶಂಖ - ಚಕ್ರ, ಗದಾ - ಪದ್ಮ, ಶಾರ್ಙ್ಗ - ಬಾಣ, ಖಡ್ಗ - ಖೇಟಕ (ಗುರಾಣಿ)ಗಳನ್ನು ಧರಿಸಿರುತ್ತಾನೆ. ಸಾವಿರ ಸೂರ್ಯರಂತೆ ತೇಜೋವಂತನಾಗಿದ್ದು ಸುರರು ಅಸುರರು ಇಬ್ಬರಿಂದಲೂ ನೋಡಲು ಅಸಾಧ್ಯವಾಗಿರುವ ಪ್ರಕಾಶದಿಂದ ಕಂಗೊಳಿಸುತ್ತಿರುತ್ತಾನೆ. ಗರುಡನ ಮೇಲೆ ಕುಳಿತಿರುವ ಈ ವಿಷ್ಣುವು ದಿವ್ಯ ಮಂಗಳರೂಪನು.

(ಆ), (ಇ) ಮತ್ತು (ಈ) ಕಂಡಿಕೆಗಳಲ್ಲಿ ವಿವರಿತವಾಗಿರುವ ವಿಷ್ಣುಮೂರ್ತಿಯು ಚತುರ್ವಿಂಶತಿ ಮೂರ್ತಿಗಳಲ್ಲಿರುವ ಮೂರ್ತಿಯಲ್ಲ. ಇದೇ ಪ್ರತ್ಯೇಕ ಎಂಬುದನ್ನು ಅರಿತುಕೊಳ್ಳಬೇಕು.

## ೬. ಮಧುಸೂದನ

(ಅ) ಸಂಧ್ಯಾವಂದನೆಯಲ್ಲಿ ಈ ಮೂರ್ತಿಯನ್ನು ಭಕ್ತನಾದವನು ತನ್ನ ಮೂಗಿನ ಎಡ ಪುಟದಲ್ಲಿ ಹೊಳ್ಳೆಯಲ್ಲಿ ಆವಾಹಿಸುತ್ತಾನೆ. ರೂಪಮಂಡನವು (೩ : ೧೩) **ಮಧುಸೂದನಸ್ತು ಚಕ್ರಂ ಶಂಖಂ ಸರಸಿಜಂ ಗದಾಮ್ ।** ಎಂದು ಹೇಳುತ್ತದೆ. **ಮಧುಸೂಧನಶ್ಚಕ್ರ ಶಂಖವಾರಿಜೋ ದಂಡತತ್ಪರಃ ।** (ಮಾರ್ಕಂಡೇಯ ಸಂಹಿತೆ, ೮ : ೬ ), **ವಿಷ್ಣುರ್ಗದಾಬ್ಜ ಶಂಖಾರಿಧರಃ ಸ್ಯಾನ್ಮಧುಸೂದನಃ ।** (ಪಾದ್ಮಸಂಹಿತೆ ೧೬ : ೩೨) ಎಂಬ ವಿವರಣೆ ಇದೆ.

**ಅರವಿಂದ ನಿಭಃ ಶ್ರೀಮಾನ್ ಮಧುಜತ್ಕಮಲಾಶ್ರಯಃ**
**ಶಂಖಂ ಚಕ್ರಂ ಗದಾ ಪದ್ಮಂ ದೋರ್ಭಿರ್ನಿತ್ಯಂ ಬಿಭರ್ತ್ಯಸೌ ॥**

ಮಧುಸೂದನಮೂರ್ತಿಯು ಕೆಂಪು ತಾವರೆಯಂತೆ ಕೆಂಪು ಕಾಂತಿಯಿಂದ ಲಕ್ಷ್ಮೀದೇವಿಯೊಂದಿಗೆ ಕಮಲಾಸನದಲ್ಲಿ ಇರುತ್ತಾನೆ. ಈತನಿಗೆ ನಾಲ್ಕು ಬಾಹುಗಳಿರುತ್ತವೆ. ಬಲಪಾರ್ಶ್ವದಲ್ಲಿ ಮುಂದಿನ ಹಸ್ತದಲ್ಲಿ ಚಕ್ರ, ಮೇಲಿನ ಹಸ್ತದಲ್ಲಿ ಶಂಖ ಮತ್ತು ಎಡಪಾರ್ಶ್ವದಲ್ಲಿ ಮುಂದಿನ ಹಸ್ತದಲ್ಲಿ ಗದೆ, ಮೇಲಿನ ಹಸ್ತದಲ್ಲಿ ಪದ್ಮ ಧರಿಸಿರುತ್ತಾನೆ.

ಪರಾಶರ ಸಂಹಿತೆಯು (೧೩ : ೫೧ - ೫೨) ಈ ಸ್ವಾಮಿ ವನಮಾಲೆಯನ್ನು ಧರಿಸಿ ಶ್ರೀದೇವಿ - ಭೂದೇವಿಯರೊಂದಿಗೆ ಇರುತ್ತಾನೆ **ಸರ್ವಾಲಂಕಾರ ಸಂಯುಕ್ತಂ ವನಮಾಲಾ ವಿಭೂಷಿತಮ್ । ಶ್ರೀ ಭೂ ಸಮೇತಂ ದೇವೇಶಂ ನಮಾಮಿ ಮಧುಸೂದನಮ್ ॥** ಎಂದು ಹೇಳುತ್ತದೆ. ಹಯಶೀರ್ಷಸಂಹಿತೆಯು (೧೯ : ೧೨) ಈ ಸ್ವಾಮಿಯು ಸಂಕರ್ಷಣನಲ್ಲಿ ಒಂದು ಭೇದ (**ಮಧುಸೂದನ ನಾಮೋಽಯಂ ಭೇದಃ ಸಂಕರ್ಷಣಾಸ್ಯತು**) ಎಂದು ಹೇಳಿ ವ್ಯೂಹಮೂರ್ತಿಯಿಂದ ಉದ್ಭವವಾದ ದೇವ ಎಂಬುದನ್ನು ಸ್ಪಷ್ಟಗೊಳಿಸುತ್ತದೆ.

**ರಕ್ತೋತ್ಪಲದಲಪ್ರಖ್ಯಂ ಪೀತವಸ್ತ್ರಂ ಚತುರ್ಭುಜಮ್**
**ಶಂಖಚಕ್ರ ಗದಾಪಾಣಿಂ ಸರ್ವಾವಯವ ಶೋಭಿತಮ್ ॥**
**ಸರ್ವಾಲಂಕಾರ ಸಂಯುಕ್ತಂ ಸರ್ವಾಭರಣ ಭೂಷಿತಮ್**
**ಪ್ರಥಮೇ ತು ಕರೇ ಶಂಖಮಧಸ್ತಾತ್ ಚಕ್ರಕಂ ನ್ಯಸೇತ್ ॥**
**ಪದ್ಮಂ ವಾಮೋರ್ಧ್ವಹಸ್ತೇ ತು ಗದಾಂ ಚಾಧಃ ಕರೇ ನ್ಯಸೇತ್**
**ಮಧುಸೂದನ ಮೂರ್ತೇಸ್ತು ಲಕ್ಷಣಂ ವಿದ್ಧಿ ನಾರದ ॥**

(ವಿಷ್ವಕ್ಸೇನ ಸಂಹಿತೆ ೧೧ : ೧೭೬ - ೧೭೮)



ಚಿತ್ರ ೭೪ : ಮಧುಸೂದನ ಮೂರ್ತಿ

ಕೆಂದಾವರೆಯು ದಳದ ಕೆಂಪಿನಂತೆ ಕಾಂತಿಯುನಾಗಿದ್ದು ಹಳದಿಯ ವಸ್ತ್ರಗಳನ್ನು ಧರಿಸಿ, ನಾಲ್ಕು ತೋಳುಗಳನ್ನು ಪಡೆದಿದ್ದು ಅವುಗಳಲ್ಲಿ ಚಕ್ರ - ಶಂಖ - ಪದ್ಮ - ಗದೆಗಳನ್ನು ಎಲ್ಲಾ ಆಭರಣ, ಅಲಂಕಾರಗಳನ್ನು ಧರಿಸಿರುತ್ತಾನೆ. ಬಲ ಪಾರ್ಶ್ವದಲ್ಲಿ ಮೇಲಿನ ಹಸ್ತದಲ್ಲಿ ಶಂಖವನ್ನು, ಮುಂದಿನಹಸ್ತದಲ್ಲಿ ಚಕ್ರವನ್ನು, ಎಡಪಾರ್ಶ್ವದಲ್ಲಿ ಮೇಲಿನಹಸ್ತದಲ್ಲಿ ಪದ್ಮವನ್ನು, ಮುಂದಿನಹಸ್ತದಲ್ಲಿ ಗದೆಯನ್ನು ಧರಿಸಿರುತ್ತಾನೆ.

(ಆ) ಮಧುಸೂದನ ಮೂರ್ತಿಯು ಎಂಟು ಬಾಹುಗಳು ಹೊಂದಿರುವುದರ ಉಲ್ಲೇಖವು ಸಾತ್ವತ ಸಂಹಿತೆ(೧೨ : ೨೦ : ೨೪)ಯಲ್ಲಿ ಹೀಗೆ ದೊರೆಯುತ್ತದೆ :

**ಪ್ರಲಯಾನಲ ಸೂರ್ಯಾಭಃ ಸ್ಮರ್ತವ್ಯೋ ಮಧುಸೂದನಃ**
**ಅಷ್ಟ ಬಾಹುರ್ವಿಶಾಲಾಂಸೋSಪ್ಯಗ್ನೀಷ್ಟೋಮಕರಾಂಕಿತಃ ||**
**ಶಂಖಚಕ್ರ ಧರಶ್ಚೈವ ಬಾಣಕಾರ್ಮುಕ ಧೃಕ್ ತಥಾ**
**ರಜಸ್ತಮೋಭ್ಯಾಂ ಮೂರ್ತಾಭ್ಯಾಂ ಸಂಪ್ರವೃತ್ತಿನಿವೃತ್ತಯೇ ||**
**ಕರ್ಣಪೀಠನಿವಿಷ್ಟಂ ಚ ಧ್ಯೇಯಂ ಪಾಣಿಯುಗಂ ವಿಭೋಃ**
**ವಿದ್ಯಾಧಿದೇವಂ ಭಗವಚ್ಚತುರ್ವಕ್ತ್ರಂ ಚತುರ್ಭುಜಮ್ ||**
**ಲಂಬಕೂರ್ಚ (ಕರ್ಣಂ) ಜಟಾದಂಡಕಮಂಡಲ್ವಕ್ಷ ಸೂತ್ರಿಣಮ್**
**ಫುಲ್ಲ ರಕ್ತಾಂಬುಜಾಭಾಸಂ ಶ್ವೇತ ಪದ್ಮಕರಾಂಕಿತಮ್ ||**
**ಶೃತೀ ಋಗಾದ್ಯಾ ವಕ್ತ್ರೇಭ್ಯಃ ಪ್ರೋದ್ಗಿರಂತಮನುಸ್ಮರೇತ್**
**ನಿರ್ಧೂಮಾಂಗಾರ ವರ್ಣೋSಯಂ ಶಂಖ ಪದ್ಮಾಕ್ಷಸೂತ್ರಿಣಮ್ ||**

ಪ್ರಳಯಾಗ್ನಿಯ ಮಧ್ಯೆ ಸೂರ್ಯತೇಜಸ್ಸಿನಿಂದ ಕಂಗೊಳಿಸುತ್ತಿರುವ ಮಧುಸೂದನ ಮೂರ್ತಿಯು ಅಗ್ನಿಯ ಉಜ್ವಲ ಜ್ವಾಲೆಗಳಹಂತಹ ಎಂಟು ಹಸ್ತಗಳನ್ನು ಪಡೆದಿರುತ್ತಾನೆ. ಈತನು ಪ್ರವೃತ್ತಿ ಮತ್ತು ನಿವೃತ್ತಿ ಮಾರ್ಗಗಳ ಅಧಿಷ್ಠಾತೃವಾಗಿರುವುದರಿಂದ ಈತನಲ್ಲಿಯೇ ರಜಸ್ಸು, ತಮಸ್ಸುಗುಣಗಳು ಈತನಿಂದಲೇ ರೂಪುಗೊಂಡು ಹರಡುತ್ತವೆ. ರಕ್ತವರ್ಣದ ಕಾಂತಿಯಲ್ಲಿರುವ ಈತನು ಹೊಗೆ ಇಲ್ಲದ ಕೆಂಡದಂತೆ ಪ್ರಕಾಶಮಾನನಾಗಿರುತ್ತಾನೆ. ಈತನ ಮುಖದಿಂದ ನಿರಂತರವಾಗಿ ಋಗಾದಿವೇದಗಳು ಹೊರಹೊಮ್ಮುತ್ತಿರುತ್ತವೆ. ಈತನಿಗೆ ನಾಲ್ಕು ಮುಖಗಳು. ನಾಲ್ಕು ತೋಳುಗಳು. ಬಲಪಾರ್ಶ್ವದ ಹಸ್ತಗಳಲ್ಲಿ ಕೆಳಗಿನಿಂದ ಕ್ರಮವಾಗಿ ಮೇಲಕ್ಕೆ ಚಕ್ರ, ಬಾಣ (ಕಾರ್ಮುಕ), ಕಮಂಡಲು ಮತ್ತು ಶಂಖಗಳನ್ನು ಧರಿಸಿರುತ್ತಾನೆ. ಎಡ ಪಾರ್ಶ್ವದ ಹಸ್ತಗಳಲ್ಲಿ ಕೆಳಗಿನಿಂದ ಕ್ರಮವಾಗಿ ಮೇಲಕ್ಕೆ ಗದೆ, ದಂಡ, ಅಕ್ಷಸೂತ್ರ ಮತ್ತು ಪದ್ಮಗಳನ್ನು ಧರಿಸಿರುತ್ತಾನೆ. ಪದ್ಮದ ವರ್ಣವು ಬಿಳುಪು. ಈತನು ವಿದ್ಯಾಧಿದೇವತೆ ಯಾಗಿರುತ್ತಾನೆ.

ಸ್ಪಷ್ಟವಾಗಿ ಈ ಸ್ವಾಮಿಯು ಚತುರ್ವಿಂಶತಿ ಮೂರ್ತಿಗಳಲ್ಲಿ ಒಬ್ಬನಾದ ಮಧುಸೂದನ ಅಲ್ಲ ಎಂಬುದು ಗೊತ್ತಾಗುತ್ತದೆ.

## ೭. ತ್ರಿವಿಕ್ರಮ

ಈ ಮೂರ್ತಿಯನ್ನು ಇದೇ ಹೆಸರಿನ ಅವತಾರದಿಂದ ಪ್ರತ್ಯೇಕವಾಗಿ ಗುರ್ತಿಸಬೇಕು. ಅವತಾರದ ಸಂದರ್ಭದಲ್ಲಿ ವಿವರಿಸುವಾಗಲೂ ಈ ವಿಷಯವನ್ನು ಸೂಚಿಸಲಾಗಿದೆ (ನೋಡಿ ಅಧ್ಯಾಯ ೫ ಪುಟ೧೧೩). ಸಂಧ್ಯಾಕರ್ಮದಲ್ಲಿ ಭಕ್ತನಾದವನು ಈ ಮೂರ್ತಿಯನ್ನು ತನ್ನ

ಬಲಗಿವಿಯ ರಕ್ಷಣೆಗಾಗಿ ಆವಾಹಿಸುತ್ತಾನೆ.

ರೂಪಮಂಡನದಲ್ಲಿ (೩ : ೧೫) ತ್ರಿವಿಕ್ರಮನು ತನ್ನ ನಾಲ್ಕುಹಸ್ತಗಳಲ್ಲಿ ಪದ್ಮ, ಗದೆ, ಚಕ್ರ ಮತ್ತು ಶಂಖ ಧರಿಸಿರುತ್ತಾನೆ (ತ್ರಿವಿಕ್ರಮೋಽಂಬುಜ ಗದಾ ಚಕ್ರಶಂಖಾಂಸ್ಬಿ ಭರ್ತಿಯ) ಎಂದು ಹೇಳಲಾಗಿದೆ. ಅಗ್ನಿಪುರಾಣದಲ್ಲಿ (೨೮ : ೪) ಪದ್ಮ, ಗದೆ, ಚಕ್ರ, ಶಂಖ ಎಂದು (ಭಕ್ತ್ಯಾ ತ್ರಿವಿಕ್ರಮ: ಪದ್ಮ ಗದೋಚಕ್ರೀ ಚ ಶಂಖ್ಯಾಪಿ) ಎಂದು ಹೇಳಲಾಗಿದೆ. ಮಾನಸೋಲ್ಲಾಸದಲ್ಲಿಯೂ ರೂಪಮಂಡನದಲ್ಲಿ ಹೇಳಿರುವಂತೆಯೇ ಆಯುಧಗಳನ್ನು ಹೇಳಲಾಗಿದೆ. ಪಾಂಚರಾತ್ರಾಗಮದಲ್ಲಿ ಈ ರೀತಿಯ ಧ್ಯಾನವಿದೆ

**ತ್ರಿವಿಕ್ರಮೋ ರಕ್ತವರ್ಣ: ಶಂಖಚಕ್ರ ಗದಾಬ್ಜ ಭೃತ್**

**ಕಿರೀಟಹಾರ ಕೇಯೂರ ಕುಂಡಲೈಶ್ಚ ವಿರಾಜತೇ ||**

ತ್ರಿವಿಕ್ರಮನು ಕೆಂಪುವರ್ಣ ದೇಹಕಾಂತಿಯಿಂದ ನಾಲ್ಕು ಕೈಗಳಿಂದ ಕಿರೀಟ, ಹಾರ, ಕೇಯೂರ, ಕುಂಡಲಗಳಿಂದ, ನಾನಾ ಮಣಿಗಳಿಂದ, ಬಂಗಾರದ ಒಡವೆಗಳಿಂದ ಅಲಂಕೃತನಾಗಿರುತ್ತಾನೆ. ಬಲಗಡೆ ಮುಂದಿನ ಹಸ್ತದಲ್ಲಿ ಪದ್ಮವನ್ನು, ಮೇಲಿನ ಹಸ್ತದಲ್ಲಿ ಗದೆಯನ್ನು, ಎಡಗಡೆ ಮುಂದಿನ ಹಸ್ತದಲ್ಲಿ ಶಂಖವನ್ನು ಮೇಲಿನ ಹಸ್ತದಲ್ಲಿ ಚಕ್ರವನ್ನು ಧರಿಸಿರುತ್ತಾನೆ.

ವಿಷ್ವಕ್ಸೇನ ಸಂಹಿತೆಯಲ್ಲಿ (೧೧ : ೧೭೯ - ೧೮೧) ಈ ಮೂರ್ತಿಯ ಬಗ್ಗೆ ವಿವರಣೆ ಹೀಗಿದೆ -

**ಸಂಕರ್ಷಣ ಭೇದೋಯಂ ತ್ರಿವಿಕ್ರಮಥೋ ಶೃಣು**

**ತಪ್ತಹಾಟಕ ಸಂಕಾಶಂ ಶ್ಯಾಮವರ್ಣನಿಭಂ ತು ವಾ ||**

**ಸರ್ವಾಲಂಕಾರ ಸಂಯುಕ್ತಂ ಸರ್ವಾವಯವ ಶೋಭಿತಮ್**

**ಸರ್ವಾಭರಣ ಸಂಯುಕ್ತಂ ಪೀತವಸ್ತ್ರಂ ಚತುರ್ಭುಜಂ ||**

**ಶಂಖ ಚಕ್ರಗದಾ ಪಾಣಿಂ ಸರ್ವದೇವ ನಮಸ್ಕೃತಮ್**

**ತ್ರಿವಿಕ್ರಮಸ್ಯ ಸಂಪ್ರೋಕ್ತಂ...**

ವ್ಯೂಹ ಸಂಕರ್ಷಣನಿಂದ ಪ್ರಾದುರ್ಭಾವಗೊಂಡಿರುವ ತ್ರಿವಿಕ್ರಮನು ಕಾಯಿಸಿರುವ ಚಿನ್ನದಂತೆ ಅಥವ ಶ್ಯಾಮಲ ವರ್ಣದಲ್ಲಿ ಇರುತ್ತಾನೆ. ಎಲ್ಲಾ ಅಲಂಕಾರಗಳನ್ನು, ಆಭೂಷಣಗಳನ್ನು ಧರಿಸಿದ್ದು ಬಹು ಆಲಂಕಾರಿಕವಾಗರುತ್ತಾನೆ. ಹಳದಿಯ ವಸ್ತ್ರವನ್ನು ಧರಿಸಿರುತ್ತಾನೆ. ಈತ ನಾಲ್ಕು ತೋಳುಗಳು ಎಡ ಪಾರ್ಶ್ವದ ಮುಂಡಿನ ಹಸ್ತದಲ್ಲಿ ಶಂಖ, ಎಡದಲ್ಲಿ ಮೇಲಿನ ಹಸ್ತದಲ್ಲಿ ಚಕ್ರವನ್ನು, ಬಲಪಾರ್ಶ್ವದ ಮೇಲಿನ ಹಸ್ತದಲ್ಲಿ ಗದೆಯನ್ನು, ಮುಂದಿನ ಹಸ್ತದಲ್ಲಿ ಪದ್ಮವನ್ನು ಧರಿಸಿರುತ್ತಾನೆ.

ಹಯಶೀರ್ಷಸಂಹಿತೆ (ಆದಿ, ೧೩ : ೨೧ - ೨೩)ಯಲ್ಲಿ ಅವತಾರಮೂರ್ತಿಯ ಉಲ್ಲೇಖನೀಡಿದರೂ ವರ್ಣನೆ ಮಾತ್ರ ಚತುರ್ವಿಂಶತಿ ಮೂರ್ತಿಯದೇ ಇದೆ

**ದಕ್ಷಿಣೋರ್ಧ್ವೇ ಗದಾ ಯಸ್ಯ ಪಂಕಜಂ ಚಾಪ್ಯಧ: ಸ್ಥಿತಮ್ ||**

**ವಾಮೋರ್ಧ್ವೇ ಸಂಸ್ಥಿತಂ ಚಕ್ರಂ ಅಧಶ್ಶಂಖಂ ಪ್ರದೃಶ್ಯತೇ**

**ಬ್ರಹ್ಮಾಂಡಗಂ ವಾಮಪಾದಂ ದಕ್ಷಿಣಂ ಶೇಷಪೃಷ್ಠಗಮ್ ||**



ಚಿತ್ರ ೭೪ : ತ್ರಿವಿಕ್ರಮ ಮೂರ್ತಿ

**ಬಲಿವಂಚನ ಸಂಸಕ್ತಂ ವಾಮನಂಚಾ ಷ್ಯದಃ ಸ್ಥಿತಮ್**

**ತ್ರಿವಿಕ್ರಮೇತಿ ಸಾಮೂರ್ತಿಃ ಸ್ಥಾಪಿತಾ ರಾಜ್ಯ ಭೋಗದಾ ॥**

ಬಲಪಾರ್ಶ್ವದ ಮೇಲಿನ ಹಸ್ತದಲ್ಲಿ ಗದೆ, ಮುಂದಿನ ಹಸ್ತದಲ್ಲಿ ಪದ್ಮ ಎಡಪಾರ್ಶ್ವದ ಮೇಲಿನ ಹಸ್ತದಲ್ಲಿ ಚಕ್ರ ಮುಂದಿನ ಹಸ್ತದಲ್ಲಿ ಶಂಖ ಧರಿಸಿರುವ ನಾಲ್ಕು ಬಾಹುಗಳ ಈ ಮೂರ್ತಿಯು ಎಡಪಾದದಿಂದ ಬ್ರಹ್ಮಾಂಡವನ್ನೆಲ್ಲಾ ಅಳೆಯುತ್ತಿರುವಂತೆ ಮೇಲಕ್ಕೆತ್ತಿರುತ್ತಾನೆ. ಬಲಪಾದವು ಶೇಷನ ಮೇಲಿರುತ್ತದೆ. ಕೆಳಗೆ ಬಲಿಯನ್ನು ವಂಚಿಸಲು ವರವನ್ನು ಕೇಳುವ ವಾಮನಮೂರ್ತಿ ಇರುತ್ತಾನೆ. ಈ ರೀತಿಯ ತ್ರಿವಿಕ್ರಮಮೂರ್ತಿಯನ್ನು ಸ್ಥಾಪಿಸಿ ಪೂಜಿಸುವುದರಿಂದ ರಾಜ್ಯಭೋಗ ಲಭಿಸುತ್ತದೆ

## ೮. ವಾಮನ

ಈ ಮೂರ್ತಿಯನ್ನು ಇದೇ ಹೆಸರಿನ ಅವತಾರ ಮೂರ್ತಿಯಿಂದ ಪ್ರತ್ಯೇಕವಾಗಿ ಗುರ್ತಿಸಬೇಕು. ಅವತಾರದ ಸಂದರ್ಭದಲ್ಲಿ ವಿವರಿಸುವಾಗಲೂ ಈ ವಿಷಯವನ್ನು ಸೂಚಿಸಲಾಗಿದೆ (ನೋಡಿ ಅಧ್ಯಾಯ ೫ ಪುಟ ೧೦೬). ಭಕ್ತನಾದವನು ಈ ಮೂರ್ತಿಯನ್ನು ತನ್ನ ಎಡ ಕಿವಿಯ ರಕ್ಷಣೆಗಾಗಿ ಸಂಧ್ಯಾಕರ್ಮದಲ್ಲಿ ಆವಾಹಿಸುತ್ತಾನೆ.

ರೂಪಮಂಡನದಲ್ಲಿ (೩ : ೧೭) ಈ ಮೂರ್ತಿಯು ಶಂಖ - ಚಕ್ರ - ಗದೆ -ಪದ್ಮಗಳನ್ನು ಧರಿಸಿರುವಂತೆ ಹೇಳಲಾಗಿದೆ (**ವಾಮನ ಶ್ಯಂಖ ಬೃಚ್ಚಕ್ರ ಗದಾ ಪದ್ಮಲಸತ್ಕರ**) ಪಾಂಚರಾತ್ರಾಗಮ ದಲ್ಲಿ ಧ್ಯಾನವು ಹೀಗಿದೆ :

**ವಾಮನಃ ಕುಂದವರ್ಣಃ ಸ್ಯಾತ್ಪುಂಡರೀಕಾಯ ತೇಕ್ಷಣಃ**

**ದೋರ್ಭಿಃ ಶಂಖಂ ಗದಾಂಚಕ್ರಂ ಪದ್ಮಂ ಚೈವ ಭರ್ತ್ಯಸೌ ॥**

ವಾಮನಮೂರ್ತಿಯು ಮಲ್ಲಿಗೆ ಹೂವಿನಂತೆ ಬಿಳುಪಾದ ಶರೀರವನ್ನು ಹೊಂದಿದ್ದು ತಾವರೆಯಂತೆ ಅರಳಿದ ವಿಶಾಲ ನೇತ್ರಗಳನ್ನು ಪಡೆದಿರುತ್ತಾನೆ. ಈತನಿಗೆ ನಾಲ್ಕು ಬಾಹುಗಳು. ಬಲಪಾರ್ಶ್ವದ ಮುಂದಿನ ಹಸ್ತದಲ್ಲಿ ಶಂಖವನ್ನು, ಮೇಲಿನ ಹಸ್ತದಲ್ಲಿ ಚಕ್ರವನ್ನು ಹಿಡಿದಿರುತ್ತಾನೆ. ಅದೇ ರೀತಿಯಾಗಿ ಎಡಪಾರ್ಶ್ವದ ಮುಂದಿನ ಹಸ್ತದಲ್ಲಿ ಪದ್ಮವನ್ನು ಮೇಲಿನ ಹಸ್ತದಲ್ಲಿ ಗದೆಯನ್ನು ಹಿಡಿದಿರುತ್ತಾನೆ.

ಮಾರ್ಕಂಡೇಯ ಸಂಹಿತೆ (೮) ಯು ವಾಮನಮೂರ್ತಿಯ ಶಂಖ - ಚಕ್ರ ಗದೆ - ಪದ್ಮದಾರಿ (**ಶಂಖಚಕ್ರಗದಾ ಪಾಣಿರ್ವಾಮನ ಸ್ಯಾಬ್ಜ ಮೀರಿತಮ್**) ಎಂದು ವರ್ಣಿಸಿದೆ.

## ೯. ಶ್ರೀಧರ

ಸಂಧ್ಯಾಕರ್ಮದಲ್ಲಿ ಭಕ್ತನ ಬಲಭುಜಕ್ಕೆ ರಕ್ಷಣೆಯನ್ನು ಒದಗಿಸಲು ಆವಾಹಿಸಲ್ಪಡುವ ದೇವ. ರೂಪಮಂಡನವು (೩ : ೧೭) **ಶ್ರೀಧರೋ ವಾರಿಜಂ ಚಕ್ರಂ ಗದಾಂ ಶಂಖಂ ದಧಾತಿ ಚ** ಎಂದು ಹೇಳುತ್ತದೆ. ಅಗ್ನಿಪುರಾಣದಲ್ಲಿ (೪೮ : ೫) ಗದೆಗೆ ಬದಲಾಗಿ ಧನುಸ್ಸನ್ನು ಹೇಳಲಾಗಿದೆ (**ಗತಿದಃ ಶ್ರೀಧರಃ ಪದ್ಮೀ ಚಕ್ರಶಾರ್ಙ್ಗೀ ಚ ಶಂಖ್ಯಪಿ**). ಮಾಸಸೋಲ್ಲಾಸದಲ್ಲಿ ಪದ್ಮ, ಚಕ್ರ, ಗದಾ, ಶಂಖ ಎಂದು ಹೇಳಿ ರೂಪಮಂಡನವನ್ನೇ ಬೆಂಬಲಿಸುತ್ತದೆ. ಪಾಂಚರಾತ್ರಗಮವು ಈ ರೀತಿಯ ಧ್ಯಾನವನ್ನು ಹೇಳುತ್ತದೆ :

**ಶ್ರೀಧರಃ ಪುಂಡರೀಕಾಭಶ್ಚಕ್ರ ಶಂಖಗದಾಬ್ಜಭೃತ್**
**ರಕ್ತಾರವಿಂದ ನಯನೋ ಮುಕ್ತಾದಾಮ ವಿಭೂಷಿತಃ ॥**

ಶ್ರೀಧರಮೂರ್ತಿಯು ಬಿಳಿಯ ತಾವರೆಯಂತೆ ಶ್ವೇತವರ್ಣ ಮೈಕಾಂತಿಯಿಂದ ನಾಲ್ಕು ತೋಳುಗಳನ್ನು ಪಡೆದುಕೊಂಡಿದ್ದು ಕೆಂಪು ತಾವರೆಯಂತಹ ಕಣ್ಣುಗಳೊಂದಿಗೆ ಮುತ್ತಿನ ಹಾರಗಳನ್ನು ಧರಿಸಿರುತ್ತಾನೆ. ಬಲಪಾರ್ಶ್ವದ ಕೆಳಗಿನಹಸ್ತದಲ್ಲಿ ಪದ್ಮವನ್ನು ಮೇಲಿನ ಹಸ್ತದಲ್ಲಿ ಚಕ್ರವನ್ನು ಧರಿಸಿರುತ್ತಾನೆ. ಎಡಪಾರ್ಶ್ವದಲ್ಲಿ ಕೆಳಹಸ್ತದಲ್ಲಿ ಶಂಖವನ್ನು, ಮೇಲಿನ ಹಸ್ತದಲ್ಲಿ ಗದೆಯನ್ನು ಧರಿಸಿರುತ್ತಾನೆ.

ಪಾದ್ಮ ಸಂಹಿತೆಯಲ್ಲಿ (೧೬ : ೩೪) **ಶ್ರೀಧರೋ ಧೃತವಾರಿಜಃ ಸಾರ್ಧಂ ಚಕ್ರಗದಾ ಶಂಖೈಃ** ಎಂದು ಹೇಳಲಾಗಿದೆ.

ಪರಾಶರ ಸಂಹಿತೆಯು **ಚಕ್ರಶಂಖಗದಾಪದ್ಮಧಾರಿಣಂ ಭೂರಮಾಪತಿಮ್ ನಮಾಮಿ ಶ್ರೀಧರಂ** ಎಂದು ಹೇಳಿ ಆಯುಧಕ್ರಮವನ್ನು ಚಕ್ರ - ಶಂಖ - ಗದೆ - ಪದ್ಮ ಎಂದು ವ್ಯತ್ಯಸ್ತವಾಗಿ ಹೇಳುತ್ತದೆ.

ಪ್ರದ್ಯುಮ್ನ ಮೂರ್ತಿಯ ಪ್ರಭೇದ ರೂಪವಾದ ಈತನ ಎಡಗಡೆಗೆ ದೇವಿ ಇರುತ್ತಾಳೆ. ಈ ದೇವನು ಪದ್ಮದ ಮೇಲೆ ನಿಂತು ಅಥವ ಕುಳಿತು ಇರುತ್ತಾನೆ ಎಂದು ವಿವರಿಸುತ್ತಾ ಹಯಶೀರ್ಷ ಸಂಹಿತೆ (ಆದಿ , ೧೯ : ೧೫ - ೧೭) ಈ ರೀತಿಯ ವಿವರಣೆ ನೀಡುತ್ತದೆ :

**ಊರ್ಧ್ವ ದಕ್ಷಿಣತಶ್ಚಕ್ರಂ ಅಧಃ ಪದ್ಮಂ ವ್ಯವಸ್ಥಿತಮ್ ॥**
**ವಾಮೋರ್ಧ್ವಂ ಕೌಮುದೀ ಯಸ್ಯ ಪಾಂಚಜನ್ಯಮಧಃ ಸ್ಥಿತಮ್**
**ಪದ್ಮಾ ಪದ್ಮಕರಾ ಯಸ್ಯ ವಾಮಪಾರ್ಶ್ವೇ ವ್ಯವಸ್ಥಿತಾ ॥**
**ಸ್ಥಿತೋ ವಾಪ್ಯುಪವಿಷ್ಟೋ ವಾ ಸಾನುರಾಗೋಽವಿಕಾರವಾನ್**
**ಪ್ರದ್ಯುಮ್ನಸ್ಯ ಪ್ರಭೇದೋಽಯಂ ಶ್ರೀಧರೇತಿ ಪ್ರಕೀರ್ತ್ಯತೇ ॥**

ಮೇಲಿ ಬಲಹಸ್ತದಲ್ಲಿ ಚಕ್ರ, ಕೆಳಹಸ್ತದಲ್ಲಿ ಪದ್ಮ. ಮೇಲಿನ ಎಡಹಸ್ತದಲ್ಲಿ ಕೌಮೋದಕೀ ಗದೆ. ಕೆಳ ಬಲಹಸ್ತದಲ್ಲಿ ಪಾಂಚಜನ್ಯವೆಂಬ ಶಂಖ ಧರಿಸಿರುತ್ತಾನೆ. ಪದ್ಮದಮೇಲೆ ಕುಳಿತು ಅಥವ ನಿಂತಿರುವ ಈತನ ಎಡಭಾಗದಲ್ಲಿ ದೇವಿ ಇರುತ್ತಾಳೆ. ವ್ಯೂಹಮೂರ್ತಿ ಪ್ರದ್ಯುಮ್ನನಿಂದ ಆವಿರ್ಭಾವಗೊಂಡಿರುವ ಈತನ ಹೆಸರು ಶ್ರೀಧರ.

ವಿಷ್ವಕ್ಸೇನ ಸಂಹಿತೆಯಲ್ಲಿ (೧೧ : ೧೮೭ - ೧೯೦) ಈ ರೀತಿಯ ಧ್ಯಾನ ದೊರೆಯುತ್ತದೆ:

**ತಪ್ತ ಜಾಂಬೂನದ ಪ್ರಖ್ಯಂ ಶ್ರೀವತ್ಸಾಂಕಿತ ವಕ್ಷಸಮ್**
**ಸರ್ವಾವಯವ ಸಂಪೂರ್ಣಂ ಸರ್ವಾಭರಣ ಭೂಷಿತಮ್ ॥**
**ಪೀತವಸ್ತ್ರಂ ಚತುರ್ಬಾಹುಂ ಶಂಖ ಚಕ್ರಗದಾ ಧರಮ್**
**ಶ್ರಿಧರಸ್ಯ ಮಯಾ ಪ್ರೋಕ್ತಂ ಲಕ್ಷಣಂ ಭುಕ್ತಿಮುಕ್ತಿದಮ್ ॥**
**ಊರ್ಧ್ವ ಚಕ್ರಮಧಃ ಪದ್ಮಂ ದಕ್ಷಿಣೇ ತು ಕರೇ ನ್ಯಸೇತ್**
**ವಾಮೇ ಚೈವ ಗದಾ ಜ್ಞೇಯಾ ಹ್ಯಧಶ್ಶಂಖಂ ವಿರಾಜಿತಮ್ ॥**
**ತಥಾ ಶ್ರೀಧರ ಮೂರ್ತಿಸ್ತು ವಿಜ್ಞೇಯಾ ದೇಶಿಕೋತ್ತಮೈಃ**
**ಏವಂ ಪ್ರದ್ಯುಮ್ನ ಭೇದಸ್ತು ಅನಿರುದ್ಧಾಖ್ಯ ಮುಚ್ಯತೇ ॥**



ಚಿತ್ರ ೨೬ : ವಾಮನ ಮೂರ್ತಿ



ಚಿತ್ರ ೭೭ : ಶ್ರೀಧರ ಮೂರ್ತಿ

ಈ ಮೂರ್ತಿಯು ಶ್ರೀವತ್ಸದಿಂದ ಅಲಂಕೃತನಾಗಿರುತ್ತಾನೆ. ಹಳದಿಯ ವಸ್ತ್ರಗಳನ್ನು ಧರಿಸಿರುತ್ತಾನೆ. ಈತನ ಮೈಬಣ್ಣ ಕರಗಿಸಿದ ಬಂಗಾರದ ಹಾಗೆ ಇರುತ್ತದೆ. ವ್ಯೂಹಮೂರ್ತಿಯಾದ ಪ್ರದ್ಯುಮ್ನನಲ್ಲಿ ಉದ್ಭವವಾದ ಮೂರ್ತಿ. ಆಯುಧ ಕ್ರಮವು ಪದ್ಮ - ಚಕ್ರ - ಗದೆ - ಶಂಖ. ಬಲಪಾರ್ಶ್ವದ ಮುಂದಿನ ಹಸ್ತದಲ್ಲಿ ಪದ್ಮ, ಮೇಲಿನ ಹಸ್ತದಲ್ಲಿ ಚಕ್ರ ಮತ್ತು ಎಡಪಾರ್ಶ್ವದ ಮೇಲಿನ ಹಸ್ತದಲ್ಲಿ ಗದೆ, ಮುಂದಿನ ಹಸ್ತದಲ್ಲಿ ಶಂಖ ಧರಿಸಿರುತ್ತಾನೆ.

## ೧೦. ಹೃಷೀಕೇಶ

ಸಂಧ್ಯಾಕರ್ಮದಲ್ಲಿ ಭಕ್ತನ ಎಡ ಬಾಹುವಿನ ರಕ್ಷಣೆಗಾಗಿ ಆವಾಹಿಸುವ ಮೂರ್ತಿ.

ರೂಪಮಂಡನದಲ್ಲಿ (೩ : ೧೮) **ಹೃಷೀಕೇಶೋ ಗದಾಂ ಚಕ್ರಂ ಪದ್ಮಶಂಖಂ ಚ ಧಾರಯೇತ್** ಎಂದು ಹೇಳಿದೆ. ಪಾಂಚರಾತ್ರಾಗಮದಲ್ಲಿ ಹೀಗಿದೆ :

**ವಿದ್ಯುದ್ವರ್ಣೋ ಹೃಷಿಕೇಶಶ್ಚಕ್ರ ಶಂಖ ಗದಾಬ್ಜಭೃತ್**

**ರಕ್ತ ಮಾಲ್ಯಾಂಬರಧರಃ ಪುಂಡರೀಕಾವತಂಸಕಃ ||**

ಹೃಷಿಕೇಶಮೂರ್ತಿಯು ಮಿಂಚಿನ ಬಳ್ಳಿಯಂತಹ ಮೈಬಣ್ಣದೊಂದಿಗೆ, ಕೆಂಪು ಹೂಮಾಲೆಗಳನ್ನು ಧರಿಸಿ, ಕೆಂಪು ವಸ್ತ್ರಗಳಿಂದ ಅಲಂಕೃತನಾಗಿ, ತಾವರೆಯನ್ನು ತಲೆಯಲ್ಲಿ ಧರಿಸಿ ನಾಲ್ಕು ತೋಳುಗಳೊಂದಿಗೆ ಇರುತ್ತಾನೆ. ಬಲಪಾರ್ಶ್ವದ ಕೆಳಹಸ್ತದಲ್ಲಿ ಗದೆಯನ್ನು, ಮೇಲಿನ ಹಸ್ತದಲ್ಲಿ ಚಕ್ರವನ್ನು ಧರಿಸಿರುತ್ತಾನೆ. ಎಡಪಾರ್ಶ್ವದ ಕೆಳಹಸ್ತದಲ್ಲಿ ಶಂಖವನ್ನು, ಮೇಲಿನ ಹಸ್ತದಲ್ಲಿ ಪದ್ಮವನ್ನು ಧರಿಸಿರುತ್ತಾನೆ.

ವಿಷ್ವಕ್ಸೇನ ಸಂಹಿತೆ (೧೧ : ೯೧ - ೯೩) ಈ ವಿವರಣೆ ದೊರೆಯುತ್ತದೆ :

**ನೀಲೋತ್ಪಲದಲ ಪ್ರಖ್ಯಂ ಚತುರ್ಬಾಹುಂ ಕಿರೀಟಿನಮ್**

**ಶಂಖ ಚಕ್ರಗದಾ ಪಾಣಿಂ ಸರ್ವಾಭರಣ ಭೂಷಿತಮ್ ||**

**ಶ್ರೀವತ್ಸ ವಕ್ಷಸೋಪೇತಂ ಹೃಷಿಕೇಶಂ ಸನಾತನಮ್**

**ದಕ್ಷಿಣೋಽಸ್ಯ ಮಹಾಚಕ್ರಂ ಗದಾ ಚ ತದಧಃ ಸ್ಥಿತಾ ||**

**ವಾಮಹಸ್ತೇ ಮಹಾಪದ್ಮಮಧಸ್ತಚ್ಛಂಖಮೇವ ಚ**

**ಸಾಮೂರ್ತಿಸ್ತು ಸದಾ ಜ್ಞೇಯಾ ಹೃಷೀಕೇಶೇತಿ ನಾಮತಃ ||**

ನಾಲ್ಕು ತೋಳುಗಳೊಂದಿಗೆ ನೀಲೋತ್ಪಲದಂತೆ ಮೈಬಣ್ಣ ಪಡೆದಿರುವ, ಎಲ್ಲಾ ಆಭರಣಗಳನ್ನೂ ಶ್ರೀ ವತ್ಸವನ್ನು ವಕ್ಷದಲ್ಲಿ ಧರಿಸಿರುವ ಹೃಷಿಕೇಶಮೂರ್ತಿಯು ಬಲಪಾರ್ಶ್ವದ ಕೆಳಹಸ್ತದಲ್ಲಿ ಗದೆಯನ್ನು, ಮೇಲಿನ ಹಸ್ತದಲ್ಲಿ ಸುದರ್ಶನ ಮಹಾ ಚಕ್ರವನ್ನು, ಎಡಪಾರ್ಶ್ವದ ಕೆಳಹಸ್ತದಲ್ಲಿ ಶಂಖವನ್ನು, ಮೇಲಿನ ಹಸ್ತದಲ್ಲಿ ಪದ್ಮವನ್ನು ಧರಿಸಿರುತ್ತಾನೆ.

ಇದಕ್ಕಿಂತಲೂ ಭಿನ್ನವಾದ ಆಯುಧಗಳನ್ನು ಧರಿಸಿರುವ ಹೃಷೀಕೇಶಮೂರ್ತಿಯ ವರ್ಣನೆಯು ಪರಾಶರ ಸಂಹಿತೆಯಲ್ಲಿ (೧೩ : ೭೪) ಹೀಗೆ ದೊರೆಯುತ್ತದೆ.

**ಶಂಖಚಕ್ರಧನುರ್ಬಾಣಧರಂ ಶ್ರೀಭೂಪತಿಂ ವಿಭುಮ್**

**ಸರ್ವಾಭರಣ ಶೋಭಾಂಗಂ ಹೃಷೀಕೇಶಂ ಸಮಾಹ್ವಯಮ್ ||**

ಶ್ರೀದೇವಿ - ಭೂದೇವಿಗಳ ಒಡೆಯನಾದ, ನಾಲ್ಕು ತೋಳುಗಳುಳ್ಳ ಮೂರ್ತಿಯು ಬಲಪಾರ್ಶ್ವದ ಕೆಳಹಸ್ತದಲ್ಲಿ ಬಾಣವನ್ನು, ಮೇಲಿನ ಹಸ್ತದಲ್ಲಿ ಚಕ್ರವನ್ನೂ, ಎಡಪಾರ್ಶ್ವದ



ಚಿತ್ರ ೭೮ : ಹೃಷೀ ಕೇಶ ಮೂರ್ತಿ

ಕೆಳಹಸ್ತದಲ್ಲಿ ಧನುಸ್ಸನ್ನು, ಮೇಲಿನ ಹಸ್ತದಲ್ಲಿ ಶಂಖವನ್ನು ಧರಿಸಿರುತ್ತಾನೆ. ಈತನು ಶ್ರೀಧರಮೂರ್ತಿ. ಈ ಮೂರ್ತಿಯನ್ನು ನಮಸ್ಕರಿಸುತ್ತೇನೆ.

## ೧೧. ಪದ್ಮನಾಭ

ಸಂಧ್ಯಾಕರ್ಮದಲ್ಲಿ ಈತನನ್ನು ಭಕ್ತನು ತನ್ನ ಹೊಕ್ಕುಳಲ್ಲಿ ಆವಾಹಿಸಿ ಕೊಳ್ಳುತ್ತಾನೆ. ರೂಪಮಂಡನ (೩ : ೧೯) **ಪದ್ಮನಾಭಃ ಪಾಂಚಜನ್ಯಂ ಪದ್ಮಂ ಚಕ್ರಂ ಗದಾಮಪಿ** ಎಂದು ಹೇಳಿ ಶಂಖ - ಪದ್ಮ - ಚಕ್ರ - ಗದೆಗಳೆಂಬ ಕ್ರಮವನ್ನು ಹೇಳಲಾಗಿದೆ. ಹಯಶೀರ್ಷ ಸಂಹಿತೆಯಲ್ಲಿ (೧೯ : ೧೮ - ೧೯) ಹೀಗೆ ಧ್ಯಾನ ದೊರೆಯುತ್ತದೆ :

**ದಕ್ಷಿಣೋರ್ಧ್ವಂ ಪುಂಡರೀಕಂ ಪಾಂಚಜನ್ಯಮಧಸ್ತಥಾ ||**
**ವಾಮೋರ್ಧ್ವಂ ಸಂಸ್ಥಿತಂ ಚಕ್ರಂ ಕೌಮುದೀ ತದಧಃ ಸ್ಥಿತಾ**
**ಪದ್ಮನಾಭೇತಿ ಸಾ ಮೂರ್ತಿಃ ಸ್ಥಾಪಿತಾ ಮೋಕ್ಷದಾಯಿನೀ ||**

ಬಲ ಪಾರ್ಶ್ವದ ಕೆಳಹಸ್ತದಲ್ಲಿ ಪಾಂಚಜನ್ಯ, ಶಂಖ ಮೇಲಿನ ಹಸ್ತದಲ್ಲಿ ಪದ್ಮ, ಎಡಪಾರ್ಶ್ವದಲ್ಲಿ ಕೆಳಹಸ್ತದಲ್ಲಿ ಗದೆ, ಮೇಲಿನ ಹಸ್ತದಲ್ಲಿ ಚಕ್ರ ಧರಿಸಿರುವ ಈ ಮೂರ್ತಿಯು ಪದ್ಮನಾಭಮೂರ್ತಿ ಈ ಸ್ವಾಮಿಯನ್ನು ಸ್ಥಾಪಿಸಿ ಪೂಜಿಸುವವರಿಗೆ ಮೋಕ್ಷದೊರೆಯುತ್ತದೆ.

ಪಾಂಚರಾತ್ರಾಗಮದಲ್ಲಿಯ ಧ್ಯಾನವು ಈ ರೀತಿಯಾಗಿದೆ :

**ಇಂದ್ರನೀಲ ನಿಭಶ್ಚಕ್ರ ಶಂಖ ಪದ್ಮಗದಾಧರಃ**
**ಪದ್ಮನಾಭಃ ಪೀತವಾಸಾಶ್ಚಿತ್ರಮಾಲ್ಯಾನು ಲೇಪನಃ ||**

ಇಂದ್ರನೀಲ ರತ್ನದಂತೆ ನೀಲವರ್ಣಕಾಂತಿಯಿಂದ ಶೋಭಾಯ ಮಾನವಾಗಿದ್ದು, ಹಳದಿವಸ್ತ್ರಗಳನ್ನು ಧರಿಸಿ ವಿವಿಧ ವರ್ಣಗಳಮಾಲೆಗಳಿಂದ, ಆಭರಣಗಳಿಂದ ಅಲಂಕೃತನಾಗಿ ನಾಲ್ಕು ತೋಳುಗಳನ್ನು ಪಡೆದುಕೊಂಡಿರುತ್ತಾನೆ. ಬಲಪಾರ್ಶ್ವದ ಕೆಳಭಾಗದ ಹಸ್ತದಲ್ಲಿ ಶಂಖವನ್ನು, ಮೇಲಿನ ಹಸ್ತದಲ್ಲಿ ಪದ್ಮವನ್ನು, ಎಡಭಾಗದ ಕೆಳ ಹಸ್ತದಲ್ಲಿ ಗದೆಯನ್ನು ಮೇಲಿನ ಹಸ್ತದಲ್ಲಿ ಚಕ್ರವನ್ನು ಧರಿಸಿರುತ್ತಾನೆ.

ಪರಾಶರ ಸಂಹಿತೆಯಲ್ಲಿ (೧೩ : ೮೦) ಚಕ್ರ - ಶಂಖ - ಗದಾ - ಖಡ್ಗ ಧಾರಿಯಾಗಿದ್ದು ನಾಭಿಯಲ್ಲಿ ಪದ್ಮವಿರುತ್ತದೆ (**ಚಕ್ರಶಂಖಗದಾ ಖಡ್ಗಧರಂ ನಾಭೌ ಚ ಪಂಕಜಮ್| ಕಿರೀಟಾದಿ ವಿಭೂಷಾಂಗಂ ಪದ್ಮನಾಭಂ ನಮಾಮ್ಯಹಮ್||**)

ವಿಷ್ವಕ್ಸೇನ ಸಂಹಿತೆಯಲ್ಲಿ (೧೧ : ೧೯೪ - ೧೯೯) ಶಂಖ - ಪದ್ಮ - ಚಕ್ರ - ಗದೆಗಳನ್ನು ಧರಿಸಿ ಶ್ರೀವತ್ಸದಿಂದ ಅಲಂಕೃತನಾಗಿರುವ ಮೂರ್ತಿಯ ವರ್ಣನೆ ದೊರೆಯುತ್ತದೆ. ಇದಲ್ಲದೆ ವಿಶೇಷವಾದ ಮೂರ್ತಿಯ ವರ್ಣನೆಯು ಹೀಗೆ ದೊರೆಯುತ್ತದೆ

**ಅಥವಾ ಪದ್ಮನಾಭಸ್ಯ ಲಕ್ಷಣಂ ಶೃಣು ಸುವ್ರತ**
**ದ್ವಿಭುಜಂ ಪಂಕಜಾಕ್ಷಂ ತು ಶ್ಯಾಮಂ ವಾಭ್ರನಿಭಂ ತು ವಾ ||**
**ಧ್ಯಾಯೇತ್ತಸ್ಮಿನ್ ಮುನಿಶ್ರೇಷ್ಠ ಕಾರಯೇಲ್ಲಕ್ಷಣೈರ್ಯುತಮ್**
**ಶಯನೇ ಸತಿ ಸಂಪ್ರೋಕ್ತಂ ಪದ್ಮನಾಭಸ್ಯ ನಾರದ ||**
**ಅತ್ರಕರ್ಮಾರ್ಚನಾದೀನಾಂ ಲಕ್ಷ್ಮಣಂ ವಕ್ಷ್ಯತೇ ಧುನಾ**
**ಯೋಗಮುದ್ರ ಸಮಾಯುಕ್ತಂ ಶಂಖಚಕ್ರ ಸಮನ್ವಿತಮ್ ||**



ಚಿತ್ರ, ೭೯ : ಪದ್ಮನಾಭ ಮೂರ್ತಿ

**ಕಾರಯೇದ್ವಾ ಮುನಿಶ್ರೇಷ್ಠ ಕರ್ಮಾರ್ಚಾಂ ಪೂರ್ವವತ್ತು ವಾ**

**ಇತ್ಯೇವಂ ಪದ್ಮನಾಭಸ್ಯ ಲಕ್ಷಣಂ ಪರಿಕೀರ್ತಿತಮ್ ॥**

**ಭಿತ್ತಿ ಪಾರ್ಶ್ವೇऽಸ್ಯ ನಾಭ್ಯೂರ್ಧ್ವೇ ರಕ್ತ ಪದ್ಮಂ ಸುನಾಲಕಮ್**

**ಕಾರಯೇತ್ಸುಮನೋರಮ್ಯಂ ಶತಪತ್ರಂ ಸಕರ್ಣಿಕಮ್ ॥**

**ತದರ್ಧಂ ವಾऽರ್ಧಕಂ ವಾಪಿ ದಲಂ ಪದ್ಮಾಸ್ಯ ನಾರದ**

**ಕರ್ಣಿಕಾಗ್ರೇ ವಿಧಿಂ ಧ್ಯಾಯೇಲ್ಲಕ್ಷಣೈ ಸ್ಸಹ ನಾರದ ॥**

**ತಲ್ಲಕ್ಷಣಂ ಪ್ರವಕ್ಷ್ಯಾಮಿ ಶೃಣು ಭಕ್ತಿಶುಭಪ್ರದಮ್**

**ಪದ್ಮಾಸನ ಸಮಾಯುಕ್ತಂ ವಿಧಿಂ ಕನಕಸನ್ನಿಭಮ್ ॥**

ಪದ್ಮನಾಭಮೂರ್ತಿಯ ಲಕ್ಷಣವು ಇಂತಿರುತ್ತದೆ : ಎರಡು ಬಾಹುಗಳೊಂದಿಗೆ ತಾವರೆಯಂತಹ ಕಣ್ಣುಗಳು, ಈ ಮೂರ್ತಿಯು ಶ್ಯಾಮಲ ವರ್ಣ ಅಥವ ಬೂದು ಬಣ್ಣದಲ್ಲಿದ್ದು ಸಕಲ ಸಲ್ಲಕ್ಷಣಗಳನ್ನೂ ಪಡೆದುಕೊಂಡಿರುತ್ತಾನೆ. ಈ ಮೂರ್ತಿಯು ಶಯನ ಭಂಗಿಯಲ್ಲಿರಬೇಕು. ಈ ಮೂರ್ತಿಯ ಕರ್ಮಾರ್ಚಾ ಬಿಂಬವು ಯೋಗಮುದ್ರೆಯಲ್ಲಿದ್ದು ಶಂಖ ಚಕ್ರವನ್ನು ಧರಿಸಿರಬೇಕು. ಉಳಿದ ಎತ್ತರ ಇತ್ಯಾದಿ ಅಂಶಗಳನ್ನು ಶಾಸ್ತ್ರದ ನಿಯಮದ ಪ್ರಕಾರವೇ ಮಾಡಬೇಕು. ಗರ್ಭಗುಡಿಯ ಪಾರ್ಶ್ವಗೋಡೆಯಲ್ಲಿ ಮೂರ್ತಿಯ ನಾಭಿಪ್ರದೇಶದಿಂದ ಮೇಲಕ್ಕೆ ಶತದಳ ಪದ್ಮವನ್ನು ಚಿತ್ರಿಸಬೇಕು. ಶಯನಾಸನ ಸ್ವಾಮಿಯ ಎಲ್ಲಾ ಲಕ್ಷಣಗಳು ಈ ಮೂರ್ತಿಗೆ ಅನ್ವಯವಾಗುತ್ತವೆ. ಪಕ್ಕದ ಪದ್ಮದಲ್ಲಿ ಬಂಗಾರದ ಬಣ್ಣದಲ್ಲಿ ಬ್ರಹ್ಮನು ಪದ್ಮಾಸನದಲ್ಲಿ ವಿರಾಜಮಾನನಾಗಿರುತ್ತಾನೆ.

## ೧೨. ದಾಮೋದರ

ಸಂಧ್ಯಾಕರ್ಮದಲ್ಲಿ ಈ ದೇವನನ್ನು ಕಪಾಲದಲ್ಲಿ ಆವಾಹಿಸಲಾಗುತ್ತದೆ. **ದಾಮೋದರೋऽಂಬುಜ ಶಂಖ ಗದಾಂ ಧತ್ತೇ ಸುದರ್ಶನಮ್** ಎಂದು ರೂಪಮಂಡನ (೩ :೧೯) ಹೇಳುತ್ತದೆ. ಪಾಂಚರಾತ್ರಾಗಮವು ಈ ರೀತಿಹೇಳುತ್ತದೆ.

**ದಾಮೋದರಃ ಶಾದ್ವಲಾಭೋ ಗದಾಪದ್ಮಾರಿ ಶಂಖಭೃತ್**

**ಪೀತವಾಸಾ ವಿಶಾಲಾಕ್ಷೋ ನಾನಾರತ್ನ ವಿಭೂಷಿತಃ ॥**

ದಾಮೋದರ ಮೂರ್ತಿಯು ಎಳೆಯ ಗರಿಕೆಯ ಮೈ ಬಣ್ಣದ ಕಾಂತಿಯೊಂದಿಗೆ, ಹಳದಿಯ ವಸ್ತ್ರಗಳನ್ನು ಧರಿಸಿದ್ದು, ವಿಶಾಲವಾದ ಕಣ್ಣುಗಳೊಂದಿಗೆ ನಾನಾ ಬಗೆಯ ರತ್ನಭೂಷಣಗಳಿಂದ, ಮಾಲೆಗಳಿಂದ ಅಲಂಕೃತನಾಗಿದ್ದು ನಾಲ್ಕು ಬಾಹುಗಳನ್ನು ಪಡೆದುಕೊಂಡಿರುತ್ತಾನೆ. ಬಲ ಪಾರ್ಶ್ವದ ಕೆಳಹಸ್ತದಲ್ಲಿ ಪದ್ಮವನ್ನು, ಮೇಲಿನ ಹಸ್ತದಲ್ಲಿ ಶಂಖವನ್ನು ಹಿಡಿದಿರುತ್ತಾನೆ. ಎಡ ಪಾರ್ಶ್ವದ ಕೆಳಹಸ್ತದಲ್ಲಿ ಚಕ್ರವನ್ನು, ಮೇಲಿನ ಹಸ್ತದಲ್ಲಿ ಗದೆಯನ್ನು, ಹಿಡಿದಿರುತ್ತಾನೆ.

**ದಕ್ಷಿಣೋರ್ಧ್ವೇ ಪಾಂಚಜನ್ಯಮಧಸ್ತಾತ್ತು ಕುಶೇಶಯಮ್**

**ಸವ್ಯೋರ್ಧ್ವಂ ಕೌಮುದೀ ದೇವಿ ಹೇತಿರಾಜಮಧಃ ಸ್ಥಿತಮ್ ॥**

**ಅನಿರುದ್ಧಸ್ಯ ಭೇದೋಯಂ ದಾಮೋದರ ಇತಿ ಸ್ಮೃತಃ**

(ಹಯಶೀರ್ಷಸಂಹಿತೆ, ೧೯ : ೨೦ - ೨೧)

ಅನಿರುದ್ಧನಿಂದ ಉದ್ಭವಿಸಿದ್ದು ಆತನ ಭೇದರೂಪದ ಮೂರ್ತಿಯಾದ ದಾಮೋದರನು ನಾಲ್ಕು ಬಾಹುಗಳನ್ನು ಪಡೆದಿರುತ್ತಾನೆ. ಈ ಮೂರ್ತಿಯ ಬಲ ಪಾರ್ಶ್ವದ ಕೆಳ ಹಸ್ತದಲ್ಲಿ ಪದ್ಮವು, ಮೇಲಿನ ಹಸ್ತದಲ್ಲಿ ಪಾಂಚಜನ್ಯ ಶಂಖವು ಇರುತ್ತವೆ. ಎಡ ಪಾರ್ಶ್ವದ ಕೆಳ ಹಸ್ತದಲ್ಲಿ ಸುದರ್ಶನ ಎಂಬ ಚಕ್ರವು ಮೇಲಿನ ಹಸ್ತದಲ್ಲಿ ಕೌಮೋದಕಿ ಎಂಬ ಗದೆಯು ಇರುತ್ತವೆ.

ಪರಾಶರ ಸಂಹಿತೆಯಲ್ಲಿ (೧೩ : ೮೬ - ೮೭) ಕಮಲದಲ್ಲಿ ಕುಳಿತಿರುವ ಈ ಮೂರ್ತಿಯ ವಿಶಿಷ್ಟವಾದ ಧ್ಯಾನವು ಈ ರೀತಿಯಾಗಿದೆ :

**ಚಕ್ರ ಶಂಖಧರಂ ದೇವಂ ಲಕ್ಷ್ಮ್ಯಾಲಿಂಗಿತವಕ್ಷಸಮ್**
**ಗದಾಶಾರ್ಙ್ಗ ಖಡ್ಗಧರಂ ಪದ್ಮಪೀಠೋಪರಿ ಸ್ಥಿತಮ್ ||**
**ಸರ್ವಾಭರಣ ಭೂಷಾಂಗಂ ಭಕ್ತೈಸ್ಸೇವ್ಯಂ ಜಗತ್ಪತಿಮ್**
**ನಮಾಮಿ ಸತತಂ ಭಕ್ತ್ಯಾ ದಾಮೋದರಮನಾಮಯಮ್ ||**

ಬಲಪಾರ್ಶ್ವದಲ್ಲಿಯ ಹಸ್ತಗಳಲ್ಲಿ ಕೆಳಗಿನಿಂದ ಮೇಲಕ್ಕೆ ಕ್ರಮವಾಗಿ ಅಭಯಮುದ್ರೆ, ಶಾರ್ಙ್ಗ (ಧನುಸ್ಸು), ಚಕ್ರಗಳನ್ನು ಎಡಪಾರ್ಶ್ವದಲ್ಲಿ ಕೆಳಗಿನಿಂದ ಮೇಲಕ್ಕೆ ಕ್ರಮವಾಗಿ ಗದೆ, ಖಡ್ಗ, ಶಂಖಗಳನ್ನು ಧರಿಸಿ ಆರು ಬಾಹುಗಳನ್ನು ಪಡೆದಿರುವ ದೇವನ ವಕ್ಷಸ್ಥಳದಲ್ಲಿ ಶ್ರೀವತ್ಸದ ಅಲಂಕರಣವಿರುತ್ತದೆ. ನಾಲ್ಕು ಬಾಹುಗಳು ಮಾತ್ರವೇ ಇರುವಂತೆ ರೂಪಿಸಿದಾಗ ಎಡಭಾಗದಲ್ಲಿ ಖಡ್ಗ ಮತ್ತು ಶಂಖ, ಬಲಭಾಗದಲ್ಲಿ ಶಾರ್ಙ್ಗ ಮತ್ತು ಚಕ್ರಗಳು ಮಾತ್ರವೇ ಇರುತ್ತವೆ. ಪದ್ಮಪೀಠದಮೇಲೆ ಕುಳಿತಿರುವ ಈ ಮೂರ್ತಿಯು ಸಕಲಾಭರಣಗಳಿಂದಲೂ ಅಲಂಕೃತನಾಗಿದ್ದು ಭಕ್ತರಿಂದ ಸೇವಿಸಲ್ಪಡುತ್ತಿರುತ್ತಾನೆ. ಇಂತಹ ದಾಮೋದರಮೂರ್ತಿಗೆ ಭಕ್ತಿಪೂರ್ವಕ ನಮಸ್ಕಾರಗಳು.

**ನೀಲಜೀಮೂತ ಸಂಕಾಶಂ ಪೀತವಸ್ತ್ರಂ ಚತುರ್ಭುಜಮ್**
**ಸರ್ವಾವಯವ ಸಂಪೂರ್ಣಂ ಸರ್ವಾಭರಣ ಭೂಷಿತಮ್ ||**
**ಸರ್ವಾಲಂಕಾರ ಸಂಯುಕ್ತಂ ಶ್ರೀವತ್ಸಾಂಕಿತ ವಕ್ಷಸಮ್**
**ಶಂಖ ಚಕ್ರ ಗದಾ ಪಾಣಿಂ ವನಮಾಲಾವಿರಾಜಿತಮ್ ||**
**ಏವಂ ಧ್ಯಾಯೇತ್ಸ್ವ ಪಂತಂ ತು ದಾಮೋದರಮನಾಮಯಮ್**
**ಪ್ರಥಮೇಽಸ್ಯ ಕರೇ ಶಂಖಮಧಸ್ತಾತ್ ಪದ್ಮಮೇವಹಿ ||**
**ವಾಮೇ ಚೈವ ಗದಾಂ ತಸ್ಯ ಹ್ಯದಸ್ತಾತ್ ಚಕ್ರಮೇವ ಹಿ**
**ಅನಿರುದ್ಧಸ್ಯ ಭೇದೋಯಂ ದಾಮೋದರ ಇತಿ ಸ್ಮೃತಃ ||**

(ವಿಷ್ವಕ್ಸೇನ ಸಂಹಿತೆ ೧೧ : ೨೨೯ - ೨೩೨)

ನೀಲವರ್ಣ ಶರೀರಕಾಂತಿಯಿಂದ ಪ್ರಕಾಶಿಸುತ್ತಾ ಹಳದಿಯ ವಸ್ತ್ರಗಳನ್ನು ಉಟ್ಟು, ಸಕಲ ಆಭರಣಗಳನ್ನು ಸಕಲ ಅಂಕಾರಗಳನ್ನು ಧರಿಸಿ, ವನಮಾಲಾದಿ ಹಾರಗಳಿಂದಲೂ ಶ್ರೀವತ್ಸದಿಂದಲೂ ಶೋಭಿತನಾಗಿ ನಾಲ್ಕು ತೋಳುಗಳನ್ನು ಪಡೆದುಕೊಂಡು ಪದ್ಮ ಶಂಖ ಗದೆ ಚಕ್ರವನ್ನು ಧರಿಸಿದ್ದು ವ್ಯೂಹಮೂರ್ತಿ ಅನಿರುದ್ಧನ ಭೇದವಾದ ದಾಮೋದರ ಮೂರ್ತಿಯನ್ನು ಭಕ್ತಿಯಿಂದ ಧ್ಯಾನಿಸುತ್ತೇನೆ. ಬಲ ಪಾರ್ಶ್ವದ ಮೇಲಿನ ಹಸ್ತದಲ್ಲಿ ಶಂಖವನ್ನು ಧರಿಸಿದ್ದು ಕೆಳಗಿನ ಹಸ್ತದಲ್ಲಿ ಪದ್ಮವನ್ನು ಧರಿಸಿರುತ್ತಾನೆ. ಎಡ ಪಾರ್ಶ್ವದ ಮೇಲಿನ ಹಸ್ತದಲ್ಲಿ



ಚಿತ್ರ ೮೦ : ದಾಮೋದರಮೂರ್ತಿ

ಗದೆಯನ್ನು ಧರಿಸಿದ್ದು ಕೆಳಗಿನ ಹಸ್ತದಲ್ಲಿ ಚಕ್ರವನ್ನು ಧರಿಸಿರುತ್ತಾನೆ. ಈ ಮೂರ್ತಿಯು ದಾಮೋದರನು.

ಇದುವರೆವಿಗಿನ ಹನ್ನೆರಡು ಮೂರ್ತಿಗಳನ್ನು ದ್ವಾದಶಮೂರ್ತಿಗಳೆಂದು ಹೇಳುತ್ತಾರೆ. ಇವರೆಲ್ಲರೂ ವ್ಯೂಹ ಮೂರ್ತಿಗಳಿಂದ ಬಂದ ಪ್ರಥಮ ಪ್ರಸರಣದಲ್ಲಿ ಬರುತ್ತಾರೆ. ಇನ್ನು ಮುಂದೆ ದ್ವಿತೀಯ ಪ್ರಸರಣದಲ್ಲಿ ಬಂದ ಇನ್ನು ಹನ್ನೆರಡುಮೂರ್ತಿಗಳನ್ನು ವಿವರಿಸುತ್ತೇವೆ. ಇವರು ಚತುರ್ವಿಂಶತಿ ಮೂರ್ತಿಗಳ ಲೆಕ್ಕದಲ್ಲಿ ಬರುತ್ತಾರೆ. ದ್ವಾದಶಮೂರ್ತಿಗಳು ಎಂದಾಗ ಮೊದಲ ಹನ್ನೆರಡು ಮೂರ್ತಿಗಳು ಮಾತ್ರವೇ ಪರಿಗಣಿಸಲ್ಪಡುತ್ತಾರೆ ; ಇವರು ಬಹು ಪ್ರಧಾನರಾಗಿರುತ್ತಾರೆ.

## ೧೩. ಸಂಕರ್ಷಣ

**ಚತುರ್ವಿಂಶತಿ** ಮೂರ್ತಿಗಳಲ್ಲಿ ಒಬ್ಬನಾದ ಸಂಕರ್ಷಣಮೂರ್ತಿಯನ್ನು ರೂಪಮಂಡನ (೩ : ೧೨) **ಸಂಕರ್ಷಣೋ ಗದಾಶಂಬು ಸರಸೀರುಹ ಚಕ್ರಭೃತ್** ಎಂದು ಹೇಳುತ್ತದೆ. ಗದೆ - ಶಂಖ - ಪದ್ಮ - ಚಕ್ರಗಳನ್ನು ಧರಿಸಿರುತ್ತಾನೆ. ಪಾಂಚರಾತ್ರಾಗಮವು ಈ ರೀತಿಯಾಗಿ ವರ್ಣಿಸಿದೆ:

**ಸಂಕರ್ಷಣಃ ಸಿತೋಥತ್ಸ್ಯೋ ಶಂಖಪದ್ಮಾರಿಸದ್ಗದಾಃ**

ಬಿಳಿಯ ಮೈಕಾಂತಿಯಿಂದ ಶೋಭಾಯ ಮಾನನಾಗಿರುವ ಸಂಕರ್ಷಣ ಮೂರ್ತಿಯು ಬಲಭಾಗದ ಕೆಳ ಹಸ್ತದಲ್ಲಿ ಗದೆಯನ್ನು ಮೇಲಿನ ಹಸ್ತದಲ್ಲಿ ಶಂಖವನ್ನು, ಎಡಭಾಗದ ಕೆಳ ಹಸ್ತದಲ್ಲಿ ಚಕ್ರ ಮತ್ತು ಮೇಲಿನ ಹಸ್ತದಲ್ಲಿ ಪದ್ಮವನ್ನು ಧರಿಸಿರುತ್ತಾನೆ.

## ೧೪. ವಾಸುದೇವ

ಚತುರ್ವಿಂಶತಿ ಮೂರ್ತಿಗಳಲ್ಲಿ ಒಬ್ಬನಾದ ವಾಸುದೇವ ಮೂರ್ತಿಯು ಪರಾವಾಸುದೇವ ಮತ್ತು ವ್ಯೂಹ ವಾಸುದೇವ ಇವರಿಂದ ಪ್ರತ್ಯೇಕನಾದವನು. ರೂಪಮಂಡನ (೩ : ೯) ವು **ವಾಸುದೇವೋ ಗದಾಶಂಖಚಕ್ರಪದ್ಮ ಧರೋಮತಃ** ಎಂದು ಗದೆ ಶಂಖ ಚಕ್ರ ಪದ್ಮಗಳನ್ನು ಧರಿಸಿರುವ ಚತುರ್ಭುಜ ಮೂರ್ತಿಎಂದು ವಿವರಿಸಿದೆ. ಪಾಂಚರಾತ್ರಾಗಮವು ಈ ರೀತಿ ಹೇಳಿದೆ.

**ವಾಸುದೇವಃ ಶಂಖ ಚಕ್ರಗದಾಪದ್ಮ ಧರಃ ಸಿತಃ**

ವಾಸುದೇವ ಮೂರ್ತಿಯು ಬಿಳುಪಾದ ಮೈಕಾಂತಿಯಿಂದ ಪ್ರಕಾಶಿಸುತ್ತಿರುತ್ತಾನೆ. ಬಲಭಾಗದ ಕೆಳಹಸ್ತದಲ್ಲಿ ಗದೆಯನ್ನು ಮೇಲಿನ ಹಸ್ತದಲ್ಲಿ ಶಂಖವನ್ನು, ಎಡ ಕೆಳಹಸ್ತದಲ್ಲಿ ಪದ್ಮ ಮೇಲಿನ ಹಸ್ತದಲ್ಲಿ ಚಕ್ರವನ್ನು ಧರಿಸಿರುತ್ತಾನೆ.

## ೧೫. ಪ್ರದ್ಯುಮ್ನ

ಚತುರ್ವಿಂಶತಿ ಮೂರ್ತಿಗಳಲ್ಲಿ ಒಬ್ಬನಾದ ಪ್ರದ್ಯುಮ್ನನು ವ್ಯೂಹ ಪ್ರದ್ಯುಮ್ನನಿಂದ ಪ್ರತ್ಯೇಕನಾದವನು. ಆದ್ದರಿಂದ ರೂಪಮಂಡನ (೩ : ೧೫) ದಲ್ಲಿ **ಪ್ರದ್ಯುಮ್ನಶ್ಚ ಚಕ್ರಶಂಖಗದಾಭೋಜಾನಿ ಪಾಣಿಭಿಃ** ಎಂದು ಹೇಳಿ ಚಕ್ರ - ಶಂಖ - ಗದೆ - ಪದ್ಮ ಧರಿಸಿರುತ್ತಾನೆ ಎಂದು ವರ್ಣಿಸಿದೆ. ಪಾಂಚರಾತ್ರಮದಲ್ಲಿ ಈ ರೀತಿ ವರ್ಣನೆ ಇದೆ :

**ಪ್ರದ್ಯುಮ್ನ : ಕನಕಾಭಃ ಸ್ಯಾಚ್ಛಂಖಾಬ್ಜಾರಿಗದಾಧರಃ**

ಬಂಗಾರದ ಮೈಬಣ್ಣವಿರುವ ಪ್ರದ್ಯುಮ್ನನಿಗೆ ನಾಲ್ಕು ತೋಳುಗಳಿದ್ದು ಬಲ ಭಾಗದ ಕೆಳಹಸ್ತದಲ್ಲಿ ಚಕ್ರವನ್ನು ಮೇಲಿನ ಹಸ್ತದಲ್ಲಿ ಶಂಖವನ್ನು ಧರಿಸಿರುತ್ತಾನೆ. ಎಡಪಾರ್ಶ್ವದ ಕೆಳಹಸ್ತದಲ್ಲಿ ಪದ್ಮವನ್ನು ಮೇಲಿನ ಹಸ್ತದಲ್ಲಿ ಗದೆಯನ್ನು ಧರಿಸಿರುತ್ತಾನೆ.



ಚಿತ್ರ ೮೧ : ಸಂಕರ್ಷಣ ಮೂರ್ತಿ



ಚಿತ್ರ ೮೨ : ವಾಸುದೇವ ಮೂರ್ತಿ



ಚಿತ್ರ ೮೩ : ಪ್ರದ್ಯುಮ್ನ ಮೂರ್ತಿ

## ೧೬. ಅನಿರುದ್ಧ

ಚತುರ್ವಿಂಶತಿ ಮೂರ್ತಿಗಳಲ್ಲಿ ಒಬ್ಬನಾದ ಅನಿರುದ್ಧನು ವ್ಯೂಹ ಅನಿರುದ್ಧನಿಂದ ಪ್ರತ್ಯೇಕನಾದವನು. ರೂಪ ಮಂಡನದಲ್ಲಿ (೩ : ೧೮) ಅನಿರುದ್ಧೋಲಸಚ್ಚಕ್ರ ಗದಾ ಶಂಖಾರವಿಂದವಾನ್ ಎಂದು ಹೇಳಲಾಗಿದೆ. ಈತನು ಚಕ್ರ - ಗದಾ - ಶಂಖ - ಪದ್ಮಗಳನ್ನು ಧರಿಸಿರುತ್ತಾನೆ ಪಾಂಚರಾತ್ರಾಗಮದಲ್ಲಿ ಈ ಮೂರ್ತಿಯ ವರ್ಣನೆ ಇಂತಿದೆ

**ಅನಿರುದ್ಧೋ ನೀಲವರ್ಣಃ ಶಂಖ ಪದ್ಮ ಗದಾರಿಭೃತ್ ||**

ಅನಿರುದ್ಧನು ನೀಲವರ್ಣ ಮೈಕಾಂತಿಯಿಂದ ತೇಜೋವಂತನಾಗಿರುತ್ತಾನೆ. ಬಲಪಾರ್ಶ್ವದ ಕೆಳ ಹಸ್ತದಲ್ಲಿ ಚಕ್ರವನ್ನು ಮೇಲಿನ ಹಸ್ತದಲ್ಲಿ ಗದೆಯನ್ನು ಹಿಡಿದಿರುತ್ತಾನೆ ಎಡ ಪಾರ್ಶ್ವದಲ್ಲಿ ಕೆಳ ಹಸ್ತದಲ್ಲಿ ಪದ್ಮವನ್ನು ಮೇಲಿನ ಹಸ್ತದಲ್ಲಿ ಶಂಖವನ್ನು ಧರಿಸಿರುತ್ತಾನೆ.

೧೩ರಿಂದ ೧೬ರತನಕ ಹೇಳಲಾಗಿರುವ ಸಂಕರ್ಷಣ, ವಾಸುದೇವ, ಪ್ರದ್ಯುಮ್ನ ಮತ್ತು ಅನಿರುದ್ಧ ಮೂರ್ತಿಗಳು ವ್ಯೂಹ ಮೂರ್ತಿಗಳಿಂದ ಕೇಶವಾದಿಮೂರ್ತಿಗಳು ಆವಿರ್ಭವಿಸಿ ಬಂದ ನಂತರ ವ್ಯೂಹಮೂರ್ತಿಗಳಿಂದಲೇ ಬಂದವರು. ಇವರಿಂದ ನಂತರ ಎರಡನೆಯ ಪ್ರಸರಣವಾಗಿ ಅಷ್ಟಮೂರ್ತಿಗಳು ಬಂದರು ಎಂದು ಕೆಲವು ಆಕರಗಳಲ್ಲಿ ಹೇಳಲಾಗಿದೆ. ಅವುಗಳ ಪ್ರಕಾರ

| | | |
|---|---|---|
| ಸಂಕರ್ಷಣನಿಂದ | - | ಪುರುಷೋತ್ತಮ, ಅಧೋಕ್ಷಜ |
| ವಾಸುದೇವನಿಂದ | - | ನಾರಸಿಂಹ, ಅಚ್ಯುತ |
| ಪ್ರದ್ಯುಮ್ನನಿಂದ | - | ಜನಾರ್ದನ, ಉಪೇಂದ್ರ |
| ಅನಿರುದ್ಧನಿಂದ | - | ಹರಿ, ಕೃಷ್ಣ |

ಆವಿರ್ಭವಿಸಿದರು ಈ ನಾಲ್ಕು ಮೂರ್ತಿಗಳು ವ್ಯೂಹಮೂರ್ತಿಗಳಿಂದ ಭಿನ್ನರಾಗಿ ಮೂರ್ತಿಗಳ ನೆಲೆಯಲ್ಲಿ ನಿಂತವರು.

ಇನ್ನು ಕೆಲವು ಆಕರಗಳ ಪ್ರಕಾರ ಅಷ್ಟಮೂರ್ತಿಗಳು ಪ್ರಥಮ ಪ್ರಸರಣದ ದ್ವಾದಶ ಮೂರ್ತಿಗಳಂತೆಯೇ ಎರಡನೆಯ ಪ್ರಸರಣವಾಗಿ ವ್ಯೂಹಮೂರ್ತಿಗಳಿಂದಲೇ ಬಂದವರು.

ಪಾಂಚರಾತ್ರಾಗಮದಲ್ಲಿ ಈ ದ್ವಿತೀಯ ಪ್ರಸರಣ ೪ + ೮ = ೧೨ ಮೂರ್ತಿಗಳಿಗೆ ಹೆಚ್ಚಿನ ಪ್ರಾಶಸ್ತ್ಯವಿಲ್ಲ. ಆದ್ದರಿಂದ ಸಾಧಾರಣವಾಗಿ ದ್ವಾದಶಮೂರ್ತಿಗಳ ಉಲ್ಲೇಖ (ಕೇಶವಾದಿ ದಾಮೋದರಾಂತ ಮೂರ್ತಿಗಳ) ಹೆಚ್ಚಾಗಿರುತ್ತದೆ.

## ೧೭. ಪುರುಷೋತ್ತಮ

ಪುರುಷೋತ್ತಮಸ್ತು ಚಕ್ರಂ ಪದ್ಮಂ ಶಂಖಂ ಗದಾಂ ದಧತ್ ಎಂದು ರೂಪಮಂಡನ (೩ : ೧೧) ಹೇಳುತ್ತದೆ. ಆಯುಧಕ್ರಮವು ಚಕ್ರ - ಪದ್ಮ - ಶಂಖ - ಗದೆ ಎಂದು ಸ್ಪಷ್ಟಗೊಳಿಸಿದೆ. ಪಾಂಚರಾತ್ರಗಮದಲ್ಲಿ ಈ ಮೂರ್ತಿಯಧ್ಯಾನವು ಇಂತಿದೆ :

**ಪದ್ಮ ಶಂಖ ಗದಾ ಚಕ್ರ ಭೃಚ್ಛ್ವೇತಃ ಪುರುಷೋತ್ತಮಃ**

ಪುರುಷೋತ್ತಮನು ಬಿಳಿಯ ಶರೀರ ಕಾಂತಿಯಲ್ಲಿದ್ದು ನಾಲ್ಕು ಭುಜಗಳನ್ನು ಹೊಂದಿರುತ್ತಾನೆ. ಬಲಪಾರ್ಶ್ವದ ಕೆಳಭಾಗದ ಕೈಯಲ್ಲಿ ಚಕ್ರವನ್ನು, ಮೇಲಿನ ಹಸ್ತದಲ್ಲಿ ಪದ್ಮವನ್ನು ಹಿಡಿದಿರುತ್ತಾನೆ. ಎಡ ಪಾರ್ಶ್ವದ ಕೆಳಭಾಗದ ಕೈಯಲ್ಲಿ ಗದೆಯನ್ನು, ಮೇಲಿನ ಕೈಯಲ್ಲಿ ಶಂಖವನ್ನು ಹಿಡಿದಿರುತ್ತಾನೆ.



ಚಿತ್ರ ೮೪ : ಅನಿರುದ್ಧ ಮೂರ್ತಿ

**ಪುರುಷೋತ್ತಮ ಭೇದಾಸ್ತೇ ವರ್ಣಯಿಷ್ಯಾಮಿ ಸತ್ತಮ**
**ಸಂಕರ್ಷೇವಸರ ಪ್ರಾಪ್ತಾನ್ ಸ್ಥಾಪಯೇತ್ತು ಯಥಾವಿಧಿ ॥**

ಎಂದು ಹಯಶೀರ್ಷ ಸಂಹಿತೆಯು (೨೨ : ೪) ಪುರುಷೋತ್ತಮನು ಸಂಕರ್ಷಣ ಗುಂಪಿಗೆ ಸೇರಿದವನು ಎಂದು ಹೇಳಿದೆ. ವಾಸುದೇವನಲ್ಲಿ ಎರಡನೆಯ ಪ್ರಸಾರದಲ್ಲಿ ಅಧೋಕ್ಷಜನೊಂದಿಗೆ ಮೂಡಿಬಂದ ಎಂಬ ಹೇಳಿಕೆಯೂ ಇದೆ.

ಈ ಮೂರ್ತಿ ಚಕ್ರ - ಶಂಖವನ್ನು ಧರಿಸಿರುವುದು ಭಕ್ತರ ರಕ್ಷಣೆಗಾಗಿ (**ಚಕ್ರಶಂಖಧರಂ ದೇವಂ ಭಕ್ತರಕ್ಷಾರ್ಥಮಾದರಾತ್**) ಎಂದು ಪರಾಶರ ಸಂಹಿತೆಯು (೧೩ : ೧೧೮) ಹೇಳುತ್ತದೆ.

## ೧೮. ಅಧೋಕ್ಷಜ

**ಅಧೋಕ್ಷಜಃ ಸರಸಿಜಂ ಗದಾಂ ಶಂಖಂ ಸುದರ್ಶನಮ್** ಎಂದು ರೂಪಮಂಡನವು (೩ : ೧೧) ಹೇಳಿ ಪದ್ಮ - ಗದೆ - ಶಂಖ - ಚಕ್ರವು ಆಯುಧಕ್ರಮ ಎಂಬುದನ್ನು ಸ್ಪಷ್ಟಗೊಳಿಸಸಿದೆ. ಪಾಂಚರಾತ್ರಾಗಮವು ಇಂತು ಹೇಳುತ್ತದೆ :

**ಧತ್ತೇ ಚಾಧೋಕ್ಷಜೋ ನೀಲೋ ಗದಾಚಕ್ರದರಾಬ್ಜಕಮ್ ॥**

ನೀಲವರ್ಣ ಮೈಬಣ್ಣದಲ್ಲಿ ನಾಲ್ಕು ತೋಳು ಹೊಂದಿರುವ ಈ ಮೂರ್ತಿ ತನ್ನ ಬಲ ಪಾರ್ಶ್ವದ ಕೆಳ ಹಸ್ತದಲ್ಲಿ ಪದ್ಮವನ್ನು, ಮೇಲಿನ ಹಸ್ತದಲ್ಲಿ ಗದೆಯನ್ನು, ಎಡ ಪಾರ್ಶ್ವದಲ್ಲಿ ಕೆಳ ಹಸ್ತದಲ್ಲಿ ಚಕ್ರವನ್ನು ಮೇಲಿನ ಕೈಯ್ಯಲ್ಲಿ ಶಂಖವನ್ನು ಹಿಡಿದಿರುತ್ತಾನೆ.

## ೧೯.ನಾರಸಿಂಹ

ಇದು ಅವತಾರಮೂರ್ತಿಗಿಂತಲೂ ಪ್ರತ್ಯೇಕವಾದುದು. ಇಲ್ಲಿಯ ಮೂರ್ತಿಗೆ ನರ ಮುಖವೇ ಇರುತ್ತದೆ ಸಿಂಹ ಮುಖವಲ್ಲ. ಇದು ಚತುರ್ವಿಂಶತಿ ಮೂರ್ತಿಗಳಲ್ಲಿ ಒಂದಾದ್ದರಿಂದ ಕೇವಲ ಆಯುಧಗಳ ವ್ಯವಸ್ಥೆಯ ಅಂತರ ಮಾತ್ರವೇ ಇರುತ್ತದೆ.

**ನಾರಸಿಂಹಸ್ತು ಚಕ್ರಾಬ್ಜಗದಾಕಂಬು ವಿರಾಜಿತಃ** ಎಂದು ರೂಪಮಂಡನವು (೩ : ೧೬) ಹೇಳುತ್ತದೆ. ಎಂದರೆ ಆಯುಧ ವಿನ್ಯಾಸವು ಚಕ್ರ - ಪದ್ಮ - ಗದೆ ಎಂದು ನಿಶ್ಚಿತಗೊಳಿಸಲಾಗಿದೆ. ಪಾಂಚರಾತ್ರಾಗಮವು ಈ ರೀತಿ ಹೇಳುತ್ತದೆ.

**ನಾರಸಿಂಹಃ ಶ್ವೇತವರ್ಣಃ ಗದಾ ಶಂಖಾರಿ ಪದ್ಮಭೃತ್ ॥**

ನಾರಸಿಂಹಮೂರ್ತಿ ಶ್ವೇತವರ್ಣದವನಾಗಿದ್ದು ನಾಲ್ಕು ತೋಳುಗಳನ್ನು ಪಡೆದಿರುತ್ತಾನೆ. ಬಲ ಪಾರ್ಶ್ವದ ಕೆಳಹಸ್ತದಲ್ಲಿ ಚಕ್ರವನ್ನು, ಮೇಲಿನ ಹಸ್ತದಲ್ಲಿ ಪದ್ಮವನ್ನು ಧರಿಸಿರುತ್ತಾನೆ. ಎಡ ಪಾರ್ಶ್ವದಲ್ಲಿ ಕೆಳಹಸ್ತದಲ್ಲಿ ಶಂಖವನ್ನು ಮೇಲಿನ ಹಸ್ತದಲ್ಲಿ ಗದೆಯನ್ನು ಧರಿಸಿರುತ್ತಾನೆ.

## ೨೦. ಅಚ್ಯುತ

**ಅಚ್ಯುತಸ್ತು ಗದಾಪದ್ಮ ಚಕ್ರಶಂಖೈಃ ಸಮನ್ವಿತಃ** ಎಂದು ರೂಪಮಂಡನ (೩ : ೧೪) ವಿವರಿಸುತ್ತದೆ. ಗದೆ ಪದ್ಮ ಚಕ್ರ ಶಂಖವು ಈ ಮೂರ್ತಿಯ ಆಯುಧವಿನ್ಯಾಸದ ವಿವರ. ಪಾಂಚರಾತ್ರಾಗಮವು ಈ ರೀತಿ ಧ್ಯಾನಿಸುತ್ತದೆ :

**ಧತ್ತೇಽಚ್ಯುತಃ ಸ್ವರ್ಣವರ್ಣೋ ಗದಾ ಶಂಖಾರಿಸಾರಸಾನ್ ॥**

ಅಚ್ಯುತಮೂರ್ತಿ ಬಂಗಾರದ ಮೈಬಣ್ಣ ಉಳ್ಳವನು. ನಾಲ್ಕು ಬಾಹುಗಳಿದ್ದು ಅವುಗಳಲ್ಲಿ ಬಲಪಾರ್ಶ್ವದ ಕೆಳ ಹಸ್ತದಲ್ಲಿ ಗದೆಯನ್ನು, ಮೇಲಿನ ಹಸ್ತದಲ್ಲಿ ಪದ್ಮವನ್ನು ಹಿಡಿದಿರುತ್ತಾನೆ.



ಚಿತ್ರ ೮೫ : ಪುರುಷೋತ್ತಮ ಮೂರ್ತಿ



ಚಿತ್ರ ೮೬ : ಅಧೋಕ್ಷಜ ಮೂರ್ತಿ



ಚಿತ್ರ ೮೮ : ಅಚ್ಯುತ ಮೂರ್ತಿ

ಅದೇ ರೀತಿಯಾಗಿ ಎಡ ಪಾರ್ಶ್ವದ ಕೆಳಹಸ್ತದಲ್ಲಿ ಶಂಖವನ್ನು, ಮೇಲಿನ ಹಸ್ತದಲ್ಲಿ ಚಕ್ರವನ್ನು ಹಿಡಿದಿರುತ್ತಾನೆ. ಮಾರ್ಕಂಡೇಯ ಸಂಹಿತೆಯು (೮) ಅಚ್ಯುತೋ ಗದಯಾಸಾರ್ಧಂ ಪದ್ಮಾರಿ ಶ್ಯಂಖ ಹಸ್ತವಾನ್ ಎಂದೂ ಪಾದ್ಮಸಂಹಿತೆ (೭ : ೪೦) ಅಚ್ಯುತೋ ದಂಡಪದ್ಮಾರಿಶ್ಯಂಖಹಸ್ತಶ್ಚತುರ್ಭುಜಃ ಎಂದು ಹೇಳಿ ಆಯುಧ ನ್ಯಾಸವನ್ನು ತಿಳಿಸಿ ಗದೆಯ ಸ್ಥಾನದಲ್ಲಿ ದಂಡವನ್ನು ಹೇಳಿದೆ.

**ಶಂಖ ಚಕ್ರಗಾದಾಪದ್ಮಧಾರಿಣಂ ಭೂರಮಾಪತಿಮ್**
**ಸರ್ವಾಭರಣ ಸಂಯುಕ್ತಮಚ್ಯುತಂ ತಂ ನಮಾಮ್ಯಹಮ್ ॥**

ಎಂದು ಪರಾಶರಸಂಹಿತೆಯು (೧೩) ಹೇಳಿ ಈ ಮೂರ್ತಿಯೊಂದಿಗೆ ಶ್ರೀದೇವಿ, ಭೂದೇವಿಗಳೂ ಇರಬಹುದೆಂದು ಸೂಚಿಸುತ್ತದೆ

## ೨೧. ಜನಾರ್ದನ

**ಜನಾರ್ದನೋಽಂಬುಜಂ ಚಕ್ರಂ ಕಂಬುಂ ಕೌಮೋದಕೀಂ ದಧೌ ॥**

ರೂಪಮಂಡನ (೩ : ೧೭) ಈ ಧ್ಯಾನವು ಆಯುಧಗಳ ಕ್ರಮವನ್ನು ಪದ್ಮ - ಚಕ್ರ - ಶಂಖ - ಗದೆ ಎಂದು ನಿಶ್ಚಿತಗೊಳಿಸಿದೆ. ಪಾಂಚರಾತ್ರಾಗಮದಲ್ಲಿ ಈ ರೀತಿಧ್ಯಾನ ದೊರೆಯುತ್ತದೆ.

**ಜನಾರ್ದನೋ ರಕ್ತವರ್ಣಶ್ಚಕ್ರ ಶಂಖಗದಾಬ್ಜ ಭೃತ್**

ಜನಾರ್ದನಮೂರ್ತಿಯು ಕೆಂಪುವರ್ಣದ ಮೈಕಾಂತಿಯಿಂದ ಇರುತ್ತಾನೆ. ನಾಲ್ಕು ತೋಳುಗಳಿದ್ದು ಬಲ ಪಾರ್ಶ್ವ ಕೆಳಗಿನ ಹಸ್ತದಲ್ಲಿ ಪದ್ಮವನ್ನು, ಮೇಲಿನ ಹಸ್ತದಲ್ಲಿ ಚಕ್ರವನ್ನು ಹಿಡಿದಿರುತ್ತಾನೆ. ಎಡಪಾರ್ಶ್ವದ ಕೆಳಗಿನ ಹಸ್ತದಲ್ಲಿ ಗದೆ ಮತ್ತು ಮೇಲಿನ ಹಸ್ತದಲ್ಲಿ ಶಂಖವನ್ನು ಹಿಡಿದಿರುತ್ತಾನೆ.

ಪಾದ್ಮಸಂಹಿತೆಯು ಜನಾರ್ದನಃ ಪದ್ಮ ಚಕ್ರ ಶಂಖದಂಡಶ್ಚತುರ್ಭುಜಃ ಎಂದು ಹೇಳುತ್ತದೆ. ಪರಾಶರ ಸಂಹಿತೆ (೧೩) ಇಂತು ಪ್ರಾರ್ಥಿಸುತ್ತದೆ :

**ಶಂಖ ಚಕ್ರಗದಾ ಪದ್ಮಧಾರಿಣಂ ಶ್ರೀಪತಿಂ ಹರಿಮ್**
**ಸರ್ವಾಲಂಕಾರ ಸಂಯುಕ್ತಂ ತಂ ನಮಾಮಿ ಜನಾರ್ದನಮ್ ॥**

## ೨೨. ಉಪೇಂದ್ರ

ರೂಪಮಂಡನವು (೩ : ೧೪) ಉಪೇಂದ್ರೋ ವಹತೇ ಶಂಖಂ ಗದಾಂ ಚಕ್ರಂ ಕುಶೇಶಯಮ್ ಎಂದು ಶಂಖ ಗದೆ ಚಕ್ರ ಪದ್ಮ ಎಂದು ಆಯುಧಕ್ರಮವನ್ನು ಸ್ಪಷ್ಟಗೊಳಿಸಿದೆ. ಪಾಂಚರಾತ್ರಾಗಮದ ಧ್ಯಾನವು ಈ ರೀತಿಯಾಗಿದೆ :

**ಉಪೇಂದ್ರೋ ನೀಲವರ್ಣಸ್ತು ಗದಾ ಚಕ್ರಾಬ್ಜ ಶಂಖಭೃತ್ ॥**

ಉಪೇಂದ್ರನು ನೀಲವರ್ಣದ ಮೈಬಣ್ಣಉಳ್ಳವನು. ಅವನ ನಾಲ್ಕು ತೋಳುಗಳಲ್ಲಿ ಬಲಪಾರ್ಶ್ವದ ಕೆಳಹಸ್ತದಲ್ಲಿ ಶಂಖವನ್ನು ಮೇಲಿನ ಹಸ್ತದಲ್ಲಿ ಗದೆಯನ್ನು ಹಿಡಿದಿರುತ್ತಾನೆ. ಎಡ ಪಾರ್ಶ್ವದ ಕೆಳಹಸ್ತದಲ್ಲಿ ಪದ್ಮವನ್ನು, ಮೇಲಿನ ಹಸ್ತದಲ್ಲಿ ಚಕ್ರವನ್ನು ಧರಿಸಿರುತ್ತಾನೆ.

ಪರಾಶರ ಸಂಹಿತೆಯಲ್ಲಿ (೧೩) ಈ ರೀತಿ ಧ್ಯಾನವಿದೆ :

**ಚಕ್ರಶಂಖಗದಾ ಖಡ್ಗಧಾರಿಣಂ ಶ್ರೀಧರಂ ವಿಭುಮ್**
**ಸರ್ವಾಭರಣ ಭೂಷಾಂಗಮುಪೇಂದ್ರ ದೇವಮಾಶ್ರಯೇ ॥**



ಚಿತ್ರ ೮೯ : ಜನಾರ್ದನ ಮೂರ್ತಿ



ಚಿತ್ರ ೯೦ : ಉಪೇಂದ್ರ ಮೂರ್ತಿ

ಚಕ್ರ ಶಂಖ ಗದೆ ಖಡ್ಗಗಳನ್ನು ಧರಿಸಿರುವ, ಹಾಗೂ ಶ್ರೀದೇವಿಯ ನಾಥನಾದ ಸರ್ವಾಭರಣಭೂಷಣನಾದ ಉಪೇಂದ್ರ ಮೂರ್ತಿಯನ್ನು ಆಶ್ರಯಿಸುತ್ತೇನೆ.

## ೨೩. ಹರಿ

**ಹರಿರ್ಧಾರಯತೇ ಕಂಬುಂ ಚಕ್ರಂ ಪದ್ಮಂ ತಥಾಗದಾಮ್** ಎಂದ ರೂಪಮಂಡನ (೩ : ೨೦) ಹೇಳಿ ಈ ಮೂರ್ತಿಯ ಆಯುಧವಿನ್ಯಾಸವು ಶಂಖ - ಚಕ್ರ - ಪದ್ಮ- ಗದೆ ಎಂದು ನಿಖರಪಡಿಸಿದೆ. ಪಾಂಚರಾತ್ರಾಗಮದಲ್ಲಿ ಈ ರೀತಿಯ ಧ್ಯಾನವಿದೆ :

**ಹರಿಃ ಕನಕವರ್ಣಃ ಸ್ಯಾ ಚ್ಚಕ್ರ ಶಂಖಗದಾಬ್ಜ ಭೃತ್**

ಕನಕವರ್ಣದ ಕಾಂತಿಯಲ್ಲಿರುವ ಈ ಮೂರ್ತಿಯು ಚತುರ್ಭುಜನಾಗಿದ್ದು ಬಲಪಾರ್ಶ್ವದ ಕೆಳ ಹಸ್ತದಲ್ಲಿ ಗದೆಯನ್ನು, ಮೇಲಿನ ಹಸ್ತದಲ್ಲಿ ಪದ್ಮವನ್ನು, ಎಡಪಾರ್ಶ್ವದ ಕೆಳ ಹಸ್ತದಲ್ಲಿ ಶಂಖವನ್ನು ಮೇಲಿನ ಹಸ್ತದಲ್ಲಿ ಚಕ್ರವನ್ನು ಹಿಡಿದಿರುತ್ತಾನೆ.

ಪಾದ್ಮಸಂಹಿತೆಯಲ್ಲಿ (೧೬ : ೪೨) ಶಂಖ - ಚಕ್ರ - ಪದ್ಮಗಳೊಂದಿಗೆ ದಂಡಾಸ್ತ್ರವನ್ನು ಕಮಲಾಸನವನ್ನು ಹೇಳಿದೆ **(ಶಂಖ ಚಕ್ರಾಬ್ಜದಂಡಾಸ್ತ್ರ ಹರಿಃ ಸ್ಯಾತ್ ಕಮಾಲಾಸನ).**

**ದಿವ್ಯೇ ಸ್ಸಿದ್ಧೇ ಮಾನುಷೇ ಚ ಶ್ರೀಭೂನೀಲಾಧಿಪಂ ಹರಿಮ್**

**ಚಕ್ರ ಶಂಖ ಗದಾಪದ್ಮಮಾಲಿನಂ ಗರುಡಾದಿಕಮ್** ||

(ಪರಾಶರಸಂಹಿತೆ, ೧೯ : ೨೭)

ಶ್ರೀದೇವಿ, ಭೂದೇವಿ, ನೀಲಾದೇವಿಗಳ ಒಡೆಯನಾದ ಈ ಮೂರ್ತಿಯು ಗರುಡನ ಮೇಲೆ ಕುಳಿತಿದ್ದು ವನಮಾಲೆಯನ್ನು, ಶ್ರೀವತ್ಸ, ಕೌಸ್ತುಭಗಳನ್ನು ಧರಿಸಿ ಶಂಖ - ಚಕ್ರ - ಪದ್ಮ- ಗದೆಗಳನ್ನು ಕ್ರಮವಾಗಿ ಧರಿಸಿರುತ್ತಾನೆ. ದಿವ್ಯ, ಸಿದ್ಧರೂ, ಮನುಷ್ಯರು ಈತನ ಕರುಣೆಗಳಿಸಲು ಈತನನ್ನು ಸುತ್ತುಗಟ್ಟಿರುತ್ತಾರೆ.

## ೨೪. ಕೃಷ್ಣ

ಚತುರ್ವಿಂಶತಿ ಮೂರ್ತಿಗಳಲ್ಲಿ ಒಂದು. ಇದು ಅವತಾರ ಮೂರ್ತಿಯಲ್ಲ. ಆದ್ದರಿಂದ ರೂಪಮಂಡನವು (೩ : ೨೦) ಈ ರೀತಿ ಧ್ಯಾನಿಸುತ್ತದೆ :

**ಕೃಷ್ಣಃ ಕರ್ರೆ ಪಾಂಚಜನ್ಯಂ ಗದಾಂ ಪದ್ಮಂ ಸುದರ್ಶನಮ್**

ಕೃಷ್ಣನು ಶಂಖ - ಗದೆ - ಪದ್ಮ - ಚಕ್ರಗಳನ್ನು ತನ್ನ ನಾಲ್ಕು ಹಸ್ತಗಳಲ್ಲಿ ಅನುಕ್ರಮವಾಗಿ ಧರಿಸಿರುತ್ತಾನೆ.

ಪಾಂಚರಾತ್ರಾಗಮದಲ್ಲಿ ಈ ಧ್ಯಾನ ದೊರೆಯುತ್ತದೆ :

**ಕೃಷ್ಣಸ್ತು ಕೃಷ್ಣವರ್ಣಃ ಸ್ಯಾದ್ಗದಾಬ್ಜಧರ ಚಕ್ರಭೃತ್**

ಕೃಷ್ಣನು ಕಪ್ಪುಬಣ್ಣದಲ್ಲಿದ್ದು ಕಾಂತಿಯುತನಾಗಿರುತ್ತಾನೆ. ನಾಲ್ಕು ತೋಳುಗಳಲ್ಲಿ ಬಲಪಾರ್ಶ್ವದ ಕೆಳಹಸ್ತದಲ್ಲಿ ಶಂಖವನ್ನು ಮೇಲಿನ ಹಸ್ತದಲ್ಲಿ ಗದೆಯನ್ನು ಧರಿಸಿದ್ದು ಎಡಪಾರ್ಶ್ವದ ಕೆಳ ಹಸ್ತದಲ್ಲಿ ಚಕ್ರವನ್ನು ಮೇಲಿನ ಹಸ್ತದಲ್ಲಿ ಪದ್ಮವನ್ನು ಧರಿಸಿರುತ್ತಾನೆ.

## ೨೫. ಚತುರ್ವಿಂಶತಿ ಶಕ್ತಿರೂಪಗಳು

ಆದರೆ ಚತುರ್ವಿಂಶತಿ ಮೂರ್ತಿಗಳ ಸ್ತ್ರೀಶಕ್ತಿಗಳ ರೂಪದ ಬಗ್ಗೆ ಹಯಶೀರ್ಷ ಸಂಹಿತೆಯಲ್ಲಿ (೧೯ : ೨೨ - ೨೩) ಒಂದು ಸಾಮಾನ್ಯವಾದ ನಿಯಮ ಹೀಗೆ ಕೊಡಲಾಗಿದೆ :



ಚಿತ್ರ ೯೧ : ಹರಿ ಮೂರ್ತಿ



ಚಿತ್ರ ೯೨ : ಕೃಷ್ಣ ಮೂರ್ತಿ

ಏತೇಷಾಂ ತು ಸ್ತ್ರೀಯೌ ಕಾರ್ಯೇ ಪದ್ಮ ವೀಣಾಧರೇ ಶುಭೇ ॥
ಏತತ್ಸಮಾಸತಃ ಪ್ರೋಕ್ತಂ ಮೂರ್ತಿನಾಂ ಲಕ್ಷಣಂ ಮಯಾ

ಚತುರ್ವಿಂಶತಿ ಮೂರ್ತಿಗಳ ಶಕ್ತಿಗಳು ಲಕ್ಷ್ಮೀಯ ಪರ್ಯಾಯ ರೂಪಗಳೇ. ಅವರೆಲ್ಲರೂ ಪದ್ಮ ಮತ್ತು ವೀಣೆಗಳನ್ನು ಧರಿಸಿರುತ್ತಾರೆ. ಇವರಲ್ಲಿ ವ್ಯತ್ಯಾಸಗಳೇನೂ ಇರುವುದಿಲ್ಲ. ಎಲ್ಲರೂ ಒಂದೇ ರೀತಿಯಾಗಿರುತ್ತಾರೆ.

ಈ ರೀತಿಯ ಸಾಮಾನ್ಯ ನಿಯಮವಿದ್ದರೂ ಪ್ರತಿಯೊಬ್ಬರನ್ನು ಪ್ರತ್ಯೇಕವಾಗಿ ಗುರ್ತಿಸುವ ಪ್ರಯತ್ನವಿದೆ. ಅದರಲ್ಲೂ ದ್ವಾದಶಮೂರ್ತಿಗಳ ಶಕ್ತಿಗಳ ಬಗ್ಗೆ ಸ್ಪಷ್ಟತೆ ಇದೆ. ಉಳಿದವರ ಬಗ್ಗೆ ಬೇರೆ ಬೇರೆ ಹೆಸರುಗಳು ಇರುವುದರಿಂದ ಗೊಂದಲದ ಅವಕಾಶವಿದೆ. ಆದರೆ ಇವೆಲ್ಲಾ ಲಕ್ಷ್ಮಿಯ ರೂಪಗಳೇ ಆಗಿರುವುದರಿಂದ ಈ ಅಂತರಗಳನ್ನು ಪರಿಗಣನೆಗೆ ತೆಗೆದುಕೊಂಡಿಲ್ಲ.

ಶ್ರೀಶ್ಚ ವಾಗೀಶ್ವರೀ ಕಾಂತಿ ಕ್ರಿಯಾಶಕ್ತಿ ವಿಭೂತಯಃ
ಇಚ್ಛಾ ಪ್ರೀತೀ ರತಿಶ್ಚೈವ ಮಾಯಾ ಧೀ ರ್ಮಹಿಮೇತಿ ಚ ॥
ಶಕ್ತಯಃ ಕೇಶವಾದೀನಾಂ ಕ್ರಮೇಣ ಪರಿಕೀರ್ತಿತಾಃ
ಧೀಸ್ತಾರಾ ವಾರುಣೀ ಶಕ್ತಿಃ ಪದ್ಮಾ ವಿದ್ಯಾ ತಥೈವ ಚ ॥
ಸಾಂಖ್ಯಾ ವಿಶ್ವಾ ಖಗಾ ಭೂರ್ಗೌರ್ಲಕ್ಷ್ಮೀ ವಾಗೀಶ್ವರೀ ತಥಾ
ಅಮೃತಾಹರಿಣೀ ಛಾಯಾ ನಾರಸಿಂಹೀ ತಥಾ ಸುಧಾ ॥
ಶ್ರೀ ಕಾಂತಿ ವೀರಾಃ ಕಾಮ ಚ ಸತ್ಯಾ ಶಾಂತಿ ಸ್ಸರೋರುಹಾ
ಮಾಯಾ ಪದ್ಮಾಸನಾ ಖರ್ವಾ ವಿಕ್ರಾಂತಿರ್ನರ ಸಂಭವಾ ॥
ನಾರಾಯಣೀ ಹರಿಪ್ರೋತಿರ್ಗಾಂಧಾರೀ ಕಾಶ್ಯಪೀ ತಥಾ
ವೈದೇಹಿ ವೈದವಿದ್ಯಾ ಚ ಪದ್ಮಿನೀ ನಾಗಶ್ಯಾಯಿನೀ ॥
ತ್ರಿಂ ಶಾಚ್ಚಾಷ್ಟಾವಿಮಾ ದೇವ್ಯಃ ಪದ್ಮನಾಭಾದಿ ಶಕ್ತಯಃ
ಯತ್ರಾಂಶ್ಯಾ ಭಗವನ್ಮೂರ್ತಿಃ ಪೂಜ್ಯಾ ತತ್ರ ಶ್ರಿಯಂ ಯಜೇತ್ ॥
ಅಸ್ಯಾನ್ವಿಮಾನದೇವಾಂಸ್ತು ಪೂರ್ವೋಕ್ತಾನೇವ ಪೂಜಯೇತ್
ವಿಮಾನಸ್ಯ ಚತುರ್ದಿಕ್ಷು ಕಲ್ಪಿತಾಂ ಚ ವಿಶೇಷತಃ ॥
ತುಷ್ಟಿಂ ಪುಷ್ಟಿಂ ಚ ಸಾವಿತ್ರೀ ವಾಗ್ದೇವೀ ಚ ಸಮರ್ಚಯೇತ್

(ಈಶ್ವರ ಸಂಹಿತೆ, ೭ : ೩೨ - ೩೯)

ಕೇಶವ ನಾರಾಯಣಾದಿಮೂರ್ತಿಗಳ ಶಕ್ತಿಗಳು ಕ್ರಮವಾಗಿ ಇವರು : ಕೇಶವನ ಶಕ್ತಿಯು ಶ್ರೀ. ನಾರಾಯಣ ಶಕ್ತಿಯು ವಾಗೀಶ್ವರೀ. ಮಾಧವನಿಗೆ ಕಾಂತಿ. ಗೋವಿಂದನಿಗೆ ಕ್ರಿಯಾಶಕ್ತಿ. ವಿಷ್ಣುವಿಗೆ ವಿಭೂತೀ. ಮಧುಸೂದನನಿಗೆ ಇಚ್ಛಾಶಕ್ತಿ. ತ್ರಿವಿಕ್ರಮನಿಗೆ ಪ್ರೀತೀ. ವಾಮನನಿಗೆ ರತಿ. ಶ್ರೀಧರನಿಗೆ ಮಾಯಾ. ಹೃಷೀಕೇಶನಿಗೆ ಧೀರ್ಮಹಿಮಾ

ಪದ್ಮನಾಭ ಮತ್ತು ನಂತರದ ಮೂರ್ತಿಗಳಿಗೆ ಮುವ್ವತ್ತೆಂಟು ದೇವಿಯರೆಂದು ಹೇಳಲಾಗಿದೆ ಧೀ, ತಾರಾ, ವಾರುಣೀ, ಶಕ್ತಿ, ಪದ್ಮಾ, ವಿದ್ಯಾ, ಸಂಖ್ಯಾ, ವಿಶ್ವಾ, ಖಗಾ, ಭೂ, ಗೌರಿ, ಲಕ್ಷ್ಮೀ, ವಾಗೀಶ್ವರೀ, ಅಮೃತಾ, ಹರಿಣೀ, ಛಾಯಾ, ನಾರಸಿಂಹೀ, ಸುಧಾ, ಶ್ರೀ, ಕಾಂತೀವೀರಾ, ಕಾಮಾ, ಸತ್ಯಾ, ಶಾಂತಿ, ಸರೋರುಹಾ, ಮಾಯಾ, ಪದ್ಮಾಸನಾ, ಖರ್ವಾ, ವಿಕ್ರಾಂತಿ, ನರಸಂಭವಾ, ನಾರಾಯಿಣೀ, ಹರಿಪ್ರೋತೀ, ಗಾಂಧಾರಿ, ಕಾಶ್ಯಪೀ, ವೈದೇಹಿ, ವೇದವಿದ್ಯಾ, ಪದ್ಮಿನೀ, ನಾಗಶ್ಯಾಯಿನೀ

ಭಗವಂತನ ಇತರ ಮೂರ್ತಿಗಳಿಗೂ ಪೂಜೆಸಲ್ಲಿಸಬೇಕು. ವಿಮಾನದ ನಾಲ್ಕು ದಿಕ್ಕುಗಳಲ್ಲೂ ತುಷ್ಟಿ, ಪುಷ್ಟಿ, ಸಾವಿತ್ರೀ ಮತ್ತು ವಾಗ್ದೇವಿಯರ ಮೂರ್ತಿಗಳನ್ನು ರೂಪಿಸಿ ಅರ್ಚಿಸಬೇಕು.

ಇಲ್ಲಿ ಪದ್ಮನಾಭಾದಿ ಮೂರ್ತಿಗಳಿಗೆ ದೇವಿಯರನ್ನು ೩೮ಎಂದು ಒಟ್ಟಾಗಿ ಹೇಳಲಾಗಿದೆ. ವಿಭಜನೆ ಇಲ್ಲ. ದೇವಿಯ ಲಕ್ಷಣ ಆಯುಧಗಳ ಬಗ್ಗೆಯೂ ಇಲ್ಲಿ ವಿವರಣೆ ಇಲ್ಲ. ಬೇರೆ ಬೇರೆ ಆಕರಗಳಲ್ಲಿ ಬೇರೆ ಬೇರೆ ಹೆಸರುಗಳಿವೆಯಾದ್ದರಿಂದ ಹಯಶೀರ್ಷದ ವಿವರಣೆಯನ್ನೇ ಪ್ರತಿಮಾನಿರ್ಮಾಣದಲ್ಲಿ ಅನುಸರಿಸುವವಾಡಿಕೆ ಇದೆ.

ಚತುರ್ವಿಂಶತಿ ಮೂರ್ತಿಗಳ ಸ್ತ್ರೀಶಕ್ತಿಗಳು ಸಾಧಾರಣವಾಗಿ ಪದ್ಮ ಮತ್ತು ವೀಣೆ ಹಿಡಿದಿರುವಂತೆ ರೂಪಿಸಿ ಆಯಾ ಮೂರ್ತಿಗಳೊಂದಿಗೆ ಇರಿಸಬೇಕು.

ಗೌತಮೀಯ ತಂತ್ರವನ್ನು ಉಲ್ಲೇಖಿಸುತ್ತಾ ಮಂತ್ರ ಮಹೋದಧಿಯಲ್ಲಿ ಚತುರ್ವಿಂಶತಿ ಮೂರ್ತಿಗಳ ದೇವಿಯರ ಉಲ್ಲೇಖವನ್ನು ಆಯಾದೇವರೊಂದಿಗೆ ಕೊಡಲಾಗಿದೆ. ಆ ವಿವರಗಳು ಮೇಲೆ ಉಲ್ಲೇಖಿಸಿರುವ ವಿವರಗಳೊಂದಿಗೆ ಹೊಂದಾಣಿಕೆಯಾಗುವುದಿಲ್ಲ. ಆದರೆ ಇವೆಲ್ಲಾ ಲಕ್ಷ್ಮಿಯ ಭಿನ್ನಾವತಾರಗಳು ಎಂದು ಶಾಸ್ತ್ರವು ಉಘ್ಘಡಿಸುವುದರಂದಲೂ, ಚತುರ್ವಿಂಶತಿಮೂರ್ತಿಗಳು ವಿಷ್ಣುವಿನ ಅಂಶದವರೇ ಆಗಿರುವುದರಿಂದಲೂ ಈ ಭಿನ್ನತೆಗಳಿಗೆ ಹೆಚ್ಚಿನ ಗಮನ ಕೊಡುವುದಿಲ್ಲ. ಆದ್ದರಿಂದಲೇ ದೇವಿ ಮೂರ್ತೀರೂಪವು ಒಂದೇ ಬಗೆಯಾಗಿರುತ್ತದೆ ಎಂದು ಹೇಳಿರುವುದು. ಇಲ್ಲಿ ಭಿನ್ನತೆಗಿಂತಲೂ ಐಕ್ಯತೆಯೇ ಹೆಚ್ಚಾಗಿದೆ. ಅನೇಕ ಬಾರಿ ಅವನ್ನು ಪರ್ಯಾಯನಾಮಗಳು ಎಂದು ಅಂಗೀಕರಿಸುವುದುಂಟು.

ಪ್ರಸ್ತುತದಲ್ಲಿ ವಿವರಿಸಿರುವ ಪರಾವಾಸುದೇವ, ವ್ಯೂಹಮೂರ್ತಿಗಳು, ಚತುರ್ವಿಂಶತಿ ಮೂರ್ತಿಗಳು ಇವರ ವಿಕಸನ ಕ್ರಮವನ್ನು ಪುಟ ೩೫೭ಕ್ಕೆ ಎದುರಾಗಿ ಪಟ್ಟಿಕೆಯ ಕ್ರಮದಲ್ಲಿ ಕೊಡಲಾಗಿದೆ. ಈ ವಿವರಗಳು ವೈಷ್ಣವ ಪ್ರತಿಮಾಕಲ್ಪದಲ್ಲಿ ಬಹು ಮುಖ್ಯವಾದುವು. ಇದನ್ನು ಗ್ರಹಿಸುವುದು ಅವಶ್ಯಕವಾದುದರಿಂದ ಈ ಪಟ್ಟಿಕೆಗಳು ವಾಚಕರ ನೆರವಿಗೆ ಬರುತ್ತವೆ ಎಂದು ನಂಬಿದ್ದೇವೆ.

ಚತುರ್ವಿಂಶತಿ ಮೂರ್ತಿಗಳ ಮತ್ತು ಅವರ ಸ್ತ್ರೀ ಶಕ್ತಿಗಳ ರೂಪಗಳ ಬಗ್ಗೆ ವಿವರಣೆ ತಿಳಿದಿದ್ದಾಯಿತು. ಆದರೆ ವಿಷ್ಣುವಿನ ಇತರ ರೂಪಗಳೂ ಉಂಟು. ಇವೇ ಮೂರ್ತಿ ಶಿಲ್ಪಗಳಲ್ಲಿ ವಿಶೇಷವಾಗಿ ಕಾಣಸಿಗುತ್ತವೆ. ಭಕ್ತರ ಆಯ್ಕೆಯಿಂದ ಹಲವು ಸಿದ್ಧಿಗಳಿಗೆ ಈ ಮೂರ್ತಿಗಳು ನೆರವಾಗುತ್ತವೆ ಎಂಬ ಹೇಳಿಕೆಗಳು ಆಗಮಗಳಲ್ಲಿ ಇವೆ. ಆದ್ದರಿಂದ ಸಂಕ್ಷಿಪ್ತವಾಗಿ ಈ ಮೂರ್ತಿಗಳ ಬಗ್ಗೆ ತಿಳಿಯೋಣ.

## ಈ. ವಿಷ್ಣುವಿನ ಇತರ ರೂಪಗಳು

### ೧. ಮಹಾವಿಷ್ಣು

ವೈಕುಂಠದಲ್ಲಿ ಸಿಂಹಾಸನದ ಮೇಲೆ ಕುಳಿತು ತನ್ನ ಪರಿವಾರದವರೊಂದಿಗೆ ಇರುವ ವಿಷ್ಣುಮೂರ್ತಿಯ ವಿಗ್ರಹ ದೇವಾಲಯದ ವಿಮಾನದ ಹೊರಭಾಗಗಳಲ್ಲಿ ಕಾಣಬಹುದು

ಈ ರೀತಿಯ ಚಿತ್ರಗಳು ಬಹುವಾಗಿವೆ. ವಿಷ್ಣುಲೋಕವನ್ನು ಆಳುತ್ತಿರುವ ದೃಶ್ಯವು ಬಹು ರಮ್ಯವಾದುದು.

(ಅ)ಸನತ್ಕುಮಾರ ಸಂಹಿತೆ (೧೦ : ೩ - ೧೧) ಯಲ್ಲಿ ಈ ವಿವರಗಳು ದೊರೆಯುತ್ತವೆ:

**ಮಹಾವಿಷ್ಣುಂ ಮಹಾತ್ಮಾನಾಂ ವಿಷ್ಣು ಲೋಕಸ್ಥಮೀಶ್ವರಮ್ ||**
**ಸಿಂಹಾಸನೇ ಸಮಾಸೀನಂ ಸರ್ವ ಪಾರಿಷದ್ಯೈರ್ವೃತಮ್**
**ವಿನ್ಯಸ್ತವಾಮ ಪಾದಂ ತು ಶ್ರೀಯಸ್ತ್ವಂಕೇ ಸನಾತನಮ್ ||**
**ತತಃ ಸಿದ್ಧಿ ಸರಸ್ವತ್ಯೋ ಶ್ಚಾಮರವ್ಯಗ್ರಹಸ್ತಯೋಃ**
**ಪೃಷ್ಠತಃ ಸ್ಥಿತಯೋಸ್ತತ್ರ ವಿನಯಾನತಚಕ್ಷು ಷೋಃ ||**
**ಸ್ಥಿತೇ ಪುರಸ್ತಾನ್ನಮ್ರಾಂಗೇ ಕಿಂಚಿದ್ದೂರೇ ಕೃತಾಂಜಲೌ**
**ಭೂಮೌ ವಿನ್ಯಸ್ತನಯನೇ ವಿನೀತೇ ಚ ಗರುತ್ಮತಿ ||**
**ಆಲವಟ್ಟಕಾರಾಯಾಂ ತು ಧಾರಾಯಾಂ ವಾಮಪಾರ್ಶ್ವತಃ**
**ಸ್ಥಿತಾಯಾಂ ಬ್ರಹ್ಮಗೋತ್ರಾಯಾಂ ದಿವ್ಯೇ ಸಂಹೃತ್ಯ ಚಕ್ಷು ಷೀ ||**
**ಬದ್ಧಾಂಜಲಿ ಪುಟೇ ನಮ್ರೇ ಕಿಂಚಿದೀಶಾನ ಗೋಚರೇ**
**ಪೀತವಸ್ತ್ರೇ ಹರಿಶ್ಯಾಮೇ ವಿಷ್ವಕ್ಸೇನ ವ್ಯವಸ್ಥಿತೇ ||**
**ನಾರದೇ ದಕ್ಷಿಣೇ ಪಾರ್ಶ್ವೇ ದಿವ್ಯಗೇಯ ಸಮನ್ವಿತೇ**
**ಸಾತೋದ್ಯೇ ಚ ಸುಖಾಸೀನೇ ತುಂಬುರು ಪ್ರಮುಖ್ಯೈಃ ಸಹ ||**
**ಶ್ರೀಯಶ್ಚ ಪೃಷ್ಠತಃ ಕಿಂಚಿನ್ನಮ್ರಗಾತ್ರೇ ಕೃತಾಂಜಲೌ**
**ಮಾರ್ಕಂಡೇಯ ಸಮಾಸೀನೇ ಪುಷ್ಪಾಂಜಲಿ ಸಮನ್ವಿತೇ ||**
**ದ್ವಾರಪಾಲಕೃತಾನುಜ್ಞಾಃ ಶರಣಂ ಜಗ್ಮುರಂಜಸಾ**
**ದೃಷ್ಟ್ವಾ ತಂ ಪರಮಾತ್ಮಾನಂ ಸರ್ವವ್ಯಾಪಿನಮಚ್ಯುತಮ್ ||**

ವಿಷ್ಣುಲೋಕದ (ವೈಕುಂಠದ) ಒಡೆಯನಾದ ಮಹಾವಿಷ್ಣುವು ತನ್ನ ಸಿಂಹಾಸನದ ಮೇಲೆ ಕುಳಿತಿದ್ದಾನೆ. ಆತನ ಮಡಚಿರುವ ಎಡ ತೊಡೆಯ ಮೇಲೆ ಶ್ರೀದೇವಿ ಕುಳಿತಿದ್ದಾಳೆ. ಸಿದ್ಧಿ, ಸರಸ್ವತಿ, ದೇವತೆಗಳು, ಗ್ರಹಗಳು ಇವರೆಲ್ಲರೂ ವಿನೀತರಾಗಿ ಕೈಮುಗಿದು ಸ್ವಾಮಿಯ ಪಾದಗಳನ್ನು ನೋಡುತ್ತಿದ್ದಾರೆ. ಪಾದಗಳ ಬಳಿ ಸ್ವಲ್ಪ ಮೇಲ್ಭಾಗದಲ್ಲಿ ಭೂದೇವಿಯು ನಮಸ್ಕಾರ ಮುದ್ರೆಯಲ್ಲಿ ಕುಳಿತಿದ್ದಾಳೆ. ಬಳಿಯಲ್ಲಿ ಗರುಡನೂ ಅದೇ ರೀತಿಯಲ್ಲಿ ಕುಳಿತಿದ್ದಾನೆ. ವಿಷ್ವಕ್ಸೇನ, ನಾರದ ಇಬ್ಬರೂ ಬಲಗಡೆಗೆ ನಿಂತಿದ್ದರೆ. ಎಡಗಡೆಗೆ ತುಂಬುರಾದಿಗಳು ನಿಂತಿದ್ದಾರೆ. ಶ್ರೀದೇವಿಯ ಹಿಂಭಾಗದಲ್ಲಿ ಮಾರ್ಕಂಡೆಯ ಮುನಿಯು ಅಂಜಲಿಯಲ್ಲಿ ಹೂಗಳನ್ನು ಹಿಡಿದು ನಿಂತಿರುತ್ತಾನೆ. ದ್ವಾರಪಾಲರು, ಭಕ್ತಗಣ ಇವರನ್ನೊಳಗೊಂಡ ಸರ್ವವ್ಯಾಪಿಯಾದ ಪರಮಾತ್ಮ ಅಚ್ಯುತನ ದರ್ಶನ ಮಾತ್ರದಿಂದಲೇ ಎಲ್ಲರೂ ಪಾವನರಾಗುತ್ತಾರೆ.

ಇಲ್ಲಿ ಪಾರ್ಷದರ ವಿವರಣೆ ಇದೆಯಾದರೂ ಮಹಾವಿಷ್ಣುವಿನ ವಿವರಣೆ ಇಲ್ಲ. ಆದ್ದರಿಂದ ಸ್ವಾಮಿಯು ಶಂಖ - ಚಕ್ರ - ಗದಾ - ಪದ್ಮಧಾರಿಯಾಗಿಯೇ ಇರುತ್ತಾನೆ ಎಂದು ಭಾವಿಸಬಹುದು. ಅಥವ ಬಲ ಪಾರ್ಶ್ವದ ಕೆಳಹಸ್ತವನ್ನು ಅಭಯ ಮುದ್ರೆಯಲ್ಲೂ ರೂಪಿಸಬಹುದು.

## ೨. ವೈಕುಂಠ ನಾರಾಯಣಮೂರ್ತಿ

(ಅ) ಅಷ್ಟಾಕ್ಷರೀ ಕಲ್ಪದಲ್ಲಿರುವ ಈ ಮೂರ್ತಿಯ ಧ್ಯಾನವನ್ನು ಉಪರೋಕ್ತಧ್ಯಾನ ಲಕ್ಷಣಕ್ಕೆ ಪೂರಕವಾಗುವುದೆಂದು ಇಲ್ಲಿ ಉಲ್ಲೇಖಿಸುತ್ತಿದ್ದೇವೆ.

**ಸವ್ಯಂ ಪಾದಂ ಪ್ರಸಾರ್ಯ ಶ್ರಿತದುರಿತಹರಂ ದಕ್ಷಿಣಂ ಕುಂಚಯಿತ್ವಾ**
**ಜಾನು ನ್ಯಾಧಾಯ ಸವ್ಯೇ ಕರಮಿತರ ಭುಜಂ ನಾಗಭೋಗೇ ನಿಧಾಯ ।**
**ಪಾರ್ಶ್ವದ್ವ್ಯಾಹು ದ್ವಯೇನ ಪ್ರತಿಭಟಶಮನೇ ಧಾರಯನ್ ಶಂಖಚಕ್ರೇ**
**ದೇವೀ ಭೂಷಾದಿ ಜುಷ್ಟೋ ಜನಯತು ಜಗತಃ ಶರ್ಮ ವೈಕುಂಠನಾಥಃ ॥**

(ಪದ್ಮಪುರಾಣಂ)

ವೈಕುಂಠ ನಾರಾಯಣಮೂರ್ತಿಯು ಮೇಘದಂತೆ ಶ್ಯಾಮಲ ವರ್ಣದ ಶರೀರ ಕಾಂತಿಯಿಂದ, ನಾಲ್ಕು ಕೈಗಳಿಂದ, ಸಕಲ ಆಭರಣಗಳಿಂದ, ಶೇಷನ ಮೇಲೆ ಶ್ರೀ ಭೂ ನೀಲಾ ದೇವಿಯರೊಂದಿಗೆ ಇರುತ್ತಾನೆ.

ಪಾಪಗಳನ್ನು ಕಳೆಯುವಂತಹ ಆತನ ಎಡಗಾಲು ಚಾಚಿರುತ್ತದೆ. ಆತನ ಬಲಗೈ ಸರ್ಪದ ಮೇಲೆಯು, ಎಡ ತೋಳು ಮೊಣಕಾಲಿನ ಮೇಲೂ ಇರುತ್ತವೆ. ಇವೆರಡು ನಿಜಹಸ್ತಗಳು ಮುಂದಿನ ಕೈಗಳು. ಮೇಲಿನ ಬಲಹಸ್ತದಲ್ಲಿ ಮೇಲಿನ ಹಸ್ತದಲ್ಲಿ ಚಕ್ರವನ್ನೂ, ಎಡ ಹಸ್ತದಲ್ಲಿ ಶಂಖವನ್ನು ಧರಿಸಿರುತ್ತಾನೆ.

ಇಂತಹ ರೂಪದಲ್ಲಿರುವ ವೈಕುಂಠನಾಥನು ಲೋಕಗಳಿಗೆಲ್ಲಾ ಸುಖವನ್ನು ಕರುಣಿಸಲಿ.

(ಆ) **ವೈಕುಂಠಂ ತು ಪ್ರವಕ್ಷ್ಯಾಮಿ ಸೋಽಷ್ಟಬಾಹುರ್ಮಹಾಬಲಃ**
**ತಾರ್ಕ್ಷ್ಯಾಸನಶ್ಚ ತುರ್ವಕ್ತ್ರಃ ಕರ್ತವ್ಯ ಶ್ಯಾಂತಿಮಿಚ್ಛತಾ ॥**
**ಗದಾಂ ಖಡ್ಗಂ ಶರಂ ಚಕ್ರಂ ದಕ್ಷಿಣೇಽಸ್ಯ ಚತುಷ್ಟಯಮ್**
**ಶಂಖಂ ಖೇಟಂ ಧನುಃ ಪದ್ಮಂ ವಾಮೇ ದಧ್ಯಾಚ್ಚತುಷ್ಟಯಮ್ ।**
**ಅಗ್ರತಃ ಪುರುಷಾಕಾರಂ ನರಸಿಂಹಂ ಚ ದಕ್ಷಿಣೇ**
**ಅಪರಂ ಸ್ತ್ರೀಮುಖಾಕಾರಂ ವಾರಾಹಾಸ್ಯ ಯಥೋತ್ತರಮ್ ॥**

ವೈಖಾನಸ ಆಗಮದಲ್ಲಿ ವೈಕುಂಠನಾಥ ಅಥವ ವೈಕುಂಠ ಎಂಬ ಹೆಸರಿನಲ್ಲಿ ಪ್ರತ್ಯೇಕ ವಿಧವಾದ ಮೂರ್ತಿಯ ಧ್ಯಾನವಿದೆ. ಅದರ ಪ್ರಕಾರ ಸ್ವಾಮಿಗೆ ನಾಲ್ಕು ಮುಖಗಳು ಎಂಟು ತೋಳುಗಳು. ಗರುಡನ ಮೇಲೆ ಕುಳಿತಿರುವ ಸ್ವಾಮಿಯು ಬಲಪಾರ್ಶ್ವದಲ್ಲಿ ಗದೆ - ಖಡ್ಗ - ಬಾಣ - ಚಕ್ರ ಹಿಡಿದಿರುತ್ತಾನೆ. ಎಡಪಾರ್ಶ್ವದಲ್ಲಿ ಶಂಖ - ಖೇಟಕ - ಧನುಸ್ಸು - ಪದ್ಮ ಹಿಡಿದಿರುತ್ತಾನೆ. ಪೂರ್ವಾಭಿಮುಖವಾಗಿರುವ ಮುಖವು ಮನುಷ್ಯನ ಮುಖ. ದಕ್ಷಿಣದ ಮುಖವು ನರಸಿಂಹನ ಮುಖ. ಪಶ್ಚಿಮದ ಮಖವು ಸ್ತ್ರೀಮುಖ. ಉತ್ತರದ ಮುಖವು ವರಾಹದ ಮುಖ.

## ೩. ಶಯನ ವಿಷ್ಣು (ಜಲಶಾಯಿ ಮೂರ್ತಿ)

**ಜಲಮಧ್ಯಗತಃ ಕಾರ್ಯಶ್ಶೇಷ ಪನ್ನಗ ತಲ್ಪಗಃ**
**ಫಣಾಪುಂಜ ಮಹಾರತ್ನದುರ್ನಿರೀಕ್ಷ್ಯ ಶಿರೋಧರಃ ॥**
**ದೇವ ದೇವಸ್ತು ಕರ್ತವ್ಯಸ್ತತ್ರ ಸುಪ್ತಶ್ಚತುರ್ಭುಜಃ**
**ತಥಾಪರಶ್ಚ ಕರ್ತವ್ಯ ಶ್ಶೇಷ ಭೋಗಾಂಕ ಸಂಸ್ಥಿತಃ ॥**

**ಏಕಪಾದೋಽಸ್ಯ ಕರ್ತವ್ಯೋ ಲಕ್ಷ್ಮ್ಯುತ್ಸಂಗತಃ ಪ್ರಭೋ**
**ತಥಾಪರಶ್ಚ ಕರ್ತವ್ಯ ಸ್ತತ್ರ ಜಾನೌ ಪ್ರಸಾಧಿತಃ ||**
**ಕರ್ತವ್ಯೋ ನಾಭಿದೇಶಸ್ಥಸ್ತಥಾ ತಸ್ಯಾಪರಃ ಕರಃ**
**ತಥೈವಾನ್ಯಃ ಕರಃ ಕಾರ್ಯೋ ದೇವಸ್ಯ ತು ಶಿರೋಧರಃ ||**
**ಸಂತಾನಮಂಜರೀ ಧಾರೀ ತಥೈವಾಸ್ಯಾಪರೋ ಭವೇತ್**
**ನಾಭೀಸರಸೀ ಸಂಭೂತೇ ಕಮಲೇ ತಸ್ಯ ಯಾದವ ||**
**ಸರ್ವ ಪೃಥ್ವೀಮಯೋ ದೇವಃ ಪ್ರಾಗ್ವತ್ಕಾರ್ಯಃ ಪಿತಾಮಹಃ**
**ನಾಲಲಗ್ನೌ ಚ ಕರ್ತವ್ಯೌ ಪದ್ಮಸ್ಯ ಮಧುಕೈಟಭೌ ||**
**ನೃರೂಪಧಾರೀಣಿ ಭುಜಂಗಮಸ್ಯ ಕಾರ್ಯಾಣ್ಯಥಾಸ್ತ್ರಾಣಿ ತಥಾ ಸಮೀಪೇ**
**ಏತತ್ತವಾಗ್ರೇ ಯದುಪುಂಗವೋಕ್ತಂ ದೇವಸ್ಯ ರೂಪಂ ಪರಮಸ್ಯ ತಸ್ಯ ||**

(ವಿಷ್ಣುಧರ್ಮೋತ್ತರ ಪುರಾಣ)

ಮಹಾ ಪ್ರಳಯದ ನಂತರ ವಿಷ್ಣುವು ಆದಿಶೇಷನ ಮೇಲೆ ನೀರಿನ ಮಧ್ಯದಲ್ಲಿ ಮಲಗಿರುವುದನ್ನು ತೋರುವುದೇ ಜಲಶಾಯಿಯ ರೂಪ. ಆದಿಶೇಷನ ತಲೆಯ ಮೇಲಿನ ರತ್ನಾಭರಣಗಳ ಕಾಂತಿಯಿಂದ ವಿಷ್ಣುವಿನ ಮುಖ ಸ್ಪಷ್ಟವಾಗಿ ಕಾಣಿಸುವುದಿಲ್ಲ. ವಿಷ್ಣುವಿನ ಮುಕ್ಕಾಲುಭಾಗದ ದೇಹವು ಶೇಷನ ಸುತ್ತಿನ ಮೇಲೆ ಮಲಗಿರುತ್ತದೆ. ಇನ್ನು ಕಾಲುಭಾಗ ಸ್ವಲ್ಪ ಮೇಲಕ್ಕೆ ಎತ್ತಿರುತ್ತದೆ. ವಿಷ್ಣುವಿನ ಒಂದು ಕಾಲು ಲಕ್ಷ್ಮಿಯ ತೊಡೆಯ ಮೇಲೆ ಇರುತ್ತದೆ. ಒಂದು ಕಾಲು ಸ್ವಲ್ಪ ಬಗ್ಗಿದ್ದು ಇನ್ನೊಂದು ಕಾಲಿನ ಮೇಲೆ ಇಳಿದಿರುತ್ತದೆ. ಒಂದು ತೋಳು ಉದ್ದಕ್ಕೆ ಚಾಚಿದ್ದು ಮೊಣಕಾಲನ್ನು ಸ್ಪರ್ಶಿಸುತ್ತಿರುತ್ತದೆ. ಇನ್ನೊಂದು ತೋಳು ದೇವನ ತಲೆಗೆ ಒತ್ತುಗೆಯಾಗಿರುತ್ತದೆ. ಮತ್ತೊಂದು ಕೈ ಹೊಕ್ಕುಳ ಬಳಿಗೆ ಮಡಚಿಕೊಂಡಿರುತ್ತದೆ.

ಮೇಲಿನ ಕೈ ದೇವನ ತಲೆಯ ಕಡೆಗೆ ಹರಡಿರುತ್ತದೆ ಅಥವ ಈ ಎರಡು ಕೈಗಳು ಸಂತಾನಮಂಜರಿಯನ್ನು ಹಿಡಿದಿರುವಂತೆ ರೂಪಿಸಬಹುದು. ನಾಭಿಯಿಂದ ಹೊರಟಿರುವ ಕಮಲದಲ್ಲಿ ಬ್ರಹ್ಮನು ಕುಳಿತಿರುತ್ತಾನೆ. ಕಮಲದ ನಾಳವನ್ನು ಹಿಡಿದು ಮಧು ಕೈಟಭರು ಹತ್ತುತ್ತಿರುತ್ತಾರೆ. ವಿಷ್ಣುವಿನ ಸುತ್ತಲೂ ಆದಿಶೇಷನ ಮೇಲೆ ವಿಷ್ಣುವಿನ ಆಯುಧಗಳು ಆಯುಧ ಪುರುಷರ ರೂಪದಲ್ಲಿರುತ್ತಾರೆ.

ಮೇಲೆ ವಿಷ್ಣುವಿನ ದಶಾವತಾರಗಳನ್ನು ರೂಪಿಸುವದುಂಟು.

ಈ ರೂಪವನ್ನು ವಟಪತ್ರಶಾಯಿ ರೂಪದೊಂದಿಗೆ ಹೋಲಿಸಬಹುದು. ಅಲ್ಲಿ ಮಹಾಪ್ರಳಯವು ಸೃಷ್ಟಿಯ ಬಾಲ್ಯರೂಪ ಎಂಬುದನ್ನು ಸೂಚಿಸುವಂತೆ ಸ್ವಾಮಿ ಆಲದ ಎಲೆಯ ಮೇಲೆ ಮಲಗಿರುತ್ತಾನೆ. ಇಲ್ಲಿ ಸೃಷ್ಟಿಯ ಪ್ರಕ್ರಿಯೆಯು ಪೂರ್ಣವಿಕಸಿತ ರೂಪದಲ್ಲಿರುತ್ತದೆ.

ಹಯಶೀರ್ಷ ಸಂಹಿತೆಯಲ್ಲಿ (ಆದಿ, ೧೯ : ೧೦ - ೧೨) ಈ ವಿವರಣೆ ಇದೆ :

**ವಾಮ ಪಾರ್ಶ್ವೇಣ ಶಯಿತಂ ಕಾರಯೇಜ್ಜಲ ಶಾಯಿನಮ್ ||**
**ಶೇಷ ಪರ್ಯಂಕಗಂ ದೇವಂ ಚತುರ್ಬಾಹುಂ ಜನಾರ್ದನಮ್**
**ಶ್ರಿಯಾ ಧೃತೈಕಚರಣಂ ಸರ್ವಾಲಂಕಾರ ಭೂಷಿತಮ್ ||**
**ದೇವೀಭಿರ್ವಿಮಲಾದ್ಯಾಭಿಸ್ಸೇವ್ಯ ಮಾನಮಿತಸ್ತತ**

**ನಾಭ್ಯುತ್ಥಪಂಕಜಾರೂಢ ಪಿತಾಮಹಸಮನ್ವಿತಮ್ ||**

ಎಡಮಗ್ಗುಲಾಗಿ ಶೇಷ ತಲ್ಪದಮೇಲೆ ಮಲಗಿರುವಂತೆ ಜಲಶಾಯಿಮೂರ್ತಿಯನ್ನು ರೂಪಿಸಬೇಕು. ಸ್ವಾಮಿಗೆ ನಾಲ್ಕುಭುಜಗಳು ಲಕ್ಷ್ಮೀದೇವಿಯನ್ನು ಚಾಚಿರುವ ಒಂದು ಪಾದವನ್ನು ಹಿಡಿದಿರುತ್ತಾಳೆ. ಸ್ವಾಮಿ ಸರ್ವಾಲಂಕಾರ ಭೂಷಿತನಾಗಿರುತ್ತಾನೆ. ದೇವಿಯಿಂದ ಸೇವಿತನಾಗಿರುವ ಸ್ವಾಮಿಯು ನಾಭಿಯಿಂದ ಕಮಲ ಹೊರಬಂದಿರುತ್ತದೆ. ಅದರಲ್ಲಿ ಬ್ರಹ್ಮನು ಕುಳಿತಿರುತ್ತಾನೆ.

ಈಶ್ವರ ಸಂಹಿತೆ (೨೪ : ೩೫೭ - ೩೫೯) ಯಲ್ಲಿ ಇಂತಿದೆ :

**ಅನಂತ ಶಯನಾರೂಢಂ ಕಲ್ಪಾಂತಹುತಭುಕ್ ಪ್ರಭಮ್**

**ಜ್ವಲ ಜ್ವಾಲಾವಲೀಯುಕ್ತಂ ಜ್ವಲನಾಂಶುವಿಚೇಷ್ಟಿತಮ್ ||**

**ಚಕ್ರಾದ್ಯಾಯುಧ ಬೃಂದೇನ ಮೂರ್ತೇನ ಪರಿವಾರಿತಮ್**

**ಸ್ಥಿತಾSಂಘ್ರಿದೇಶತೋ ಲಕ್ಷ್ಮೀಶ್ಚಿತಾ ದಕ್ಷಿಣತೋ ವಿಭೋಃ ||**

**ಮೂರ್ಧದೇಶಗತಾ ನಿದ್ರಾ ಪುಷ್ಟಿಸ್ತದ್ವಾಮತಃ ಸ್ಥಿತಾ**

**ಪ್ರಧಾನದೇವತಾ ಧ್ಯಾನಮಿದಮುಕ್ತಂ ಸಮಾಸತಃ ||**

ಅನಂತನೆಂದು ಹೆಸರಾಗಿರುವ ಶೇಷನ ಮೇಲೆ ಕಲ್ಪಾಂತದ ಸಂದರ್ಭದಲ್ಲಿ ಮಲಗಿರುವ ಸ್ವಾಮಿಯು ಜಾಜ್ವಲ್ಯಮಾನನಾಗಿರುತ್ತಾನೆ. ಸ್ವಾಮಿಯ ಸುತ್ತಲೂ ಬೆಂಕಿಯ ಕೆನ್ನಾಲಿಗೆಗಳು ಇರುತ್ತವೆ. ಆತನ ಆಯುಧಗಳು ಮತ್ತು ಪರಿವಾರದವರೊಂದಿಗೆ ಆವೃತ್ತನಾಗಿರುತ್ತಾನೆ. ಪಾದಗಳ ಬಳಿ ಲಕ್ಷ್ಮೀದೇವಿಯು ಕುಳಿತಿರುತ್ತಾಳೆ. ಬಲಪಾರ್ಶ್ವದಲ್ಲಿ ಬ್ರಹ್ಮನಿರುತ್ತಾನೆ. ಪುಷ್ಟಿದೇವಿಯು ತಲೆಯ ಬಳಿ ಇರುತ್ತಾಳೆ. ಸ್ವಾಮಿಯು ಯೋಗ ನಿದ್ರೆಯಲ್ಲಿರುತ್ತಾನೆ. ಇತರ ದೇವಮುನಿಗಳು ಸ್ವಾಮಿಯ ಬಳಿ ನಮಸ್ಕಾರ ಮುದ್ರೆಯಲ್ಲಿ ಇರುತ್ತಾರೆ.

ಪರಮ ಸಂಹಿತೆಯಲ್ಲಿ (೧ : ೫೬ - ೫೯) ಈ ಹೆಚ್ಚಿನ ವಿವರಣೆ ದೊರೆಯುತ್ತದೆ :

**ಅಥಾ ಪಶ್ಯತ್ಪರಂ ದೇವಂ ಕ್ಷೀರಸಾಗರಶಾಯಿನಮ್ ||**

**ಅನಂತ ಭೋಗ ಶಯ್ಯಾಯಾಂ ಶಾಯಿತಂ ಪಂಕಜೇಕ್ಷಣಮ್**

**ಶಂಖ ಚಕ್ರಗದಾಪದ್ಮಾನ್ ಧಾರಯಂತಂ ಚತುರ್ಭುಜಮ್ ||**

**ಶ್ರಿಯಾ ಚರಣಯೋರ್ಜುಷ್ಟಂ ಶ್ಯಾಮಲಂ ಪೀತವಾಸಸಮ್**

**ಶ್ರೀವತ್ಸಾಂಕಂ ಪ್ರಸನ್ನಾಭಂ ಕೌಸ್ತುಭೋಜ್ವಲ ವಕ್ಷಸಮ್ ||**

**ಸೇವಿತಂ ವೈನತೇಯೇನ ಸಂನಿವಿಷ್ಟೇನ ಪಾರ್ಶ್ವತಃ**

ಕ್ಷೀರಸಾಗರದಲ್ಲಿ ಶೇಷನ ಮೇಲೆ ಮಲಗಿರುವ ಸ್ವಾಮಿಯು ಭೋಗ ಶಯ್ಯೆಯಲ್ಲಿರುತ್ತಾನೆ. ನಾಲ್ಕು ತೋಳುಗಳಿಂದ ಈ ಸ್ವಾಮಿಯು ಶಂಖ - ಚಕ್ರ - ಗದಾ - ಪದ್ಮಗಳನ್ನು ಧರಿಸಿರುತ್ತಾನೆ. ಲಕ್ಷ್ಮೀದೇವಿ ಚರಣಗಳ ಬಳಿ ಇರುತ್ತಾಳೆ. ಶ್ಯಾಮಲ ವರ್ಣದಲ್ಲಿರುವ ಈ ದೇವನು ಹಳದಿ ವಸ್ತ್ರಗಳನ್ನು ಧರಿಸಿರುತ್ತಾನೆ. ವಕ್ಷಭಾಗದಲ್ಲಿ ಶ್ರೀವತ್ಸ ಮತ್ತು ಕೌಸ್ತುಭಗಳನ್ನು ಧರಿಸಿದ್ದು ಪ್ರಸನ್ನ ವದನನಾಗಿರುತ್ತಾನೆ. ಗರುಡನು ಒಂದು ಪಾರ್ಶ್ವದಲ್ಲಿ ಸ್ವಾಮಿಯ ಸೇವೆಗೆ ಸದಾಸನ್ನದ್ಧನಾಗಿರುವವನಂತೆ ನಿಂತಿರುತ್ತಾನೆ.

ಹೀಗೆ ಅನಂತ ಶಯನನೆಂದು ಹೆಸರಾಗಿರುವ ಶೇಷನ ಮೇಲೆ ಮಲಗಿರುವ ಸ್ವಾಮಿಯ ವರ್ಣನೆ ದೊರೆಯುತ್ತದೆ.



ಚಿತ್ರ ೯೩ : ಶಯನ ಮೂರ್ತಿ

## ೪. ಲಕ್ಷ್ಮೀ ನಾರಾಯಣ

(ಅ) ನಾರಾಯಣಶ್ಚತುರ್ಬಾಹುಃ ಶಂಖಚಕ್ರೀ ತಥೋತ್ತರೇ
ದಕ್ಷಿಣೇ ತು ಗದಾ ಪದ್ಮೀ ನೀಲ ಜೀಮೂತ ಸನ್ನಿಭಃ ॥
ವಾಮೇ ಶ್ರೀರ್ವಲ್ಲಕೀ ಹಸ್ತಾ ಪುಷ್ಟಾ ಪದ್ಮಕರಾ ಪರೇ । (ಭಟ್ಟ ಭಾಸ್ಕರೀಯಂ)

ಶ್ರೀ ಲಕ್ಷ್ಮೀನಾರಾಯಣ ಕಾರ್ಮೋಡದಂತಹ ಮೈಕಾಂತಿಯನ್ನು ಪಡೆದಿದ್ದು ನಾಲ್ಕು ಬಾಹುಗಳೊಂದಿಗೆ ಇರುತ್ತಾನೆ. ಬಲ ಪಾರ್ಶ್ವದ ಕೆಳಹಸ್ತದಲ್ಲಿ ಪದ್ಮ, ಮೇಲಿನ ಹಸ್ತದಲ್ಲಿ ಚಕ್ರವನ್ನು ಧರಿಸಿರುತ್ತಾನೆ. ಎಡಪಾರ್ಶ್ವದಲ್ಲಿ ಕೆಳಗಿನ ಹಸ್ತದಲ್ಲಿ ಗದೆಯನ್ನು ಮೇಲಿನ ಹಸ್ತದಲ್ಲಿ ಶಂಖವನ್ನು ಹಿಡಿದಿರುತ್ತಾನೆ. ಸ್ವಾಮಿಯ ಎಡಭಾಗದಲ್ಲಿ ಲಕ್ಷ್ಮೀ ದೇವಿಯು ಬಲಹಸ್ತದಲ್ಲಿ ಪದ್ಮವನ್ನು ಎಡಹಸ್ತದಲ್ಲಿ ವೀಣೆಯನ್ನು ಧರಿಸಿ ಕುಳಿತಿರುತ್ತಾಳೆ.

ಈ ಸ್ವಾಮಿಯ ವಿವರಣಾತ್ಮಕ ವರ್ಣನೆಯು ಬೇರೆಯ ಮೂಲಗಳಲ್ಲಿ ಈ ರೀತಿ ದೊರೆಯುತ್ತದೆ.

(ಆ) ಲಕ್ಷ್ಮೀನಾರಾಯಣೌ ಕಾರ್ಯೌ ಸಂಯುಕ್ತೌ ದಿವ್ಯರೂಪಿಣೌ
ದಕ್ಷಿಣಸ್ಥಾ ವಿಭೋರ್ಮೂರ್ತಿರ್ಲಕ್ಷ್ಮೀಮೂರ್ತಿಸ್ತು ವಾಮತಃ ॥
ದಕ್ಷಿಣಃ ಕಂಠಲಗ್ನೋಽಸ್ಯ ವಾಮೇ ಹಸ್ತಸ್ಸರೋಜಭೃತ್
ವಿಭೋರ್ವಾಮಕರೋ ಲಕ್ಷ್ಮ್ಯಾಃ ಕುಕ್ಷಿ ಭಾಗಸ್ಥಿತಸ್ಸದಾ ॥
ಸರ್ವಾವಯಂ ಸಂಪೂರ್ಣಾ ಸರ್ವಾಲಂಕಾರ ಭೂಷಿತಾ
ಸ್ನಿಗ್ಧನೇತ್ರ ಕಪೋಲಾಸ್ಯಾ ರೂಪಯೌವನ ಸಂಯುತಾ ॥
ಸಿದ್ಧಿಃ ಕಾರ್ಯಾ ಸಮೀಪಸ್ಥಾ ಚಾಮರ ಗ್ರಾಹಿಣೀ ಶುಭಾ
ಕರ್ತವ್ಯಂ ವಾಹನಂ ಸವ್ಯೇ ದೇವಾಧೋಭಾಗಗಂ ಸದಾ ॥
ಶಂಖ ಚಕ್ರಧರೌ ತಸ್ಯ ದ್ವೌ ಕಾರ್ಯೌ ಪುರುಷೌ ಪುರಃ
ವಾಮನೌ ಹಾರಕೇಯೂರ ಕಿರೀಟ ಮಣಿಭೂಷಣೌ ॥
ಉಪಾಸಕೌ ಸಮೀಪಸ್ಥೌ ಪ್ರಭೋರ್ಬ್ರಹ್ಮಶಿವಾತ್ಮಕೌ
ರಶನಾಂ ಯೋಗಪಟ್ಟಂ ಚ ಶಿಖಾ ಮಂಜಲಿಮಾಸ್ಥಿತೌ ॥

(ವಿಶ್ವಕರ್ಮಶಿಲ್ಪ ಶಾಸ್ತ್ರಂ)

ಲಕ್ಷ್ಮೀದೇವಿಯ ಬಲತೋಳು ನಾರಾಯಣನ ಕೊರಳಸುತ್ತಲೂ ಆವರಿಸಿರಬೇಕು. ನಾರಾಯಣನ ಎಡಹಸ್ತವು ದೇವಿಯ ಕಟಿಪ್ರದೇಶವನ್ನು ಹಿಡಿದಿರಬೇಕು. ಲಕ್ಷ್ಮೀದೇವಿಯ ಎಡ ಹಸ್ತದಲ್ಲಿ ಪದ್ಮವಿರಬೇಕು. ಸುಂದರವಾಗಿದ್ದು ಯವ್ವನದಲ್ಲಿರುವ ಸಿದ್ಧಿಯು ಚಾಮರಧಾರಣೆಯಾಗಿ ಲಕ್ಷ್ಮೀನಾರಾಯಣರ ಬಳಿ ನಿಂತಿರಬೇಕು. ಸ್ವಲ್ಪ ಕೆಳಕ್ಕೆ ಬಲಭಾಗದಲ್ಲಿ ಗರುಡನಿರಬೇಕು. ವಿಷ್ಣುವಿನ ಬಳಿ ಆಯುಧಪುರುಷರಾದ ಶಂಖ, ಚಕ್ರಗಳೂ ನಿಂತಿರಬೇಕು. ಮುಂಭಾಗದಲ್ಲಿ ಉಪಾಸಕರು ಕುಳಿತಿರಬೇಕು. ಅವರಲ್ಲಿ ಅಂಜಲೀಬದ್ಧರಾಗಿ ಶಿವ ಮತ್ತು ಬ್ರಹ್ಮ ಇಬ್ಬರೂ ಇರಬೇಕು. ಇವರಲ್ಲಿ ಬ್ರಹ್ಮನು ತನ್ನ ಸೊಂಟದ ಸುತ್ತಲೂ ಪಟ್ಟವನ್ನು ಧರಿಸಿರಬೇಕು. ಶಿವನು ಕೈಯಲ್ಲಿ ಕಪಾಲವನ್ನು ಹಿಡಿದಿದ್ದು ಯೋಗಪಟ್ಟವನ್ನು ಧರಿಸಿರಬೇಕು.

(ಇ) ಉಭೌ ಚ ದ್ವಿಭುಜೌ ಕುರ್ಯಾಲ್ಲಕ್ಷ್ಮೀಂ ನಾರಾಯಣಾಶ್ರಿತಾಮ್
ದೇವಂ ಶಾಸ್ತ್ರ ಸ್ಸ್ವಕೀಯೈಶ್ಚ ಗರುಡೋಪರಿ ಸಂಸ್ಥಿತಮ್ ॥



ಚಿತ್ರ ೯೪ : ಲಕ್ಷ್ಮೀ ನಾರಾಯಣ

**ದಕ್ಷಿಣಃ ಕಂಠಲಗ್ನೋಽಸ್ಯಾ ವಾಮೋ ಹಸ್ತಸ್ಸರೋಜಧೃಕ್**
**ವಿಭೋರ್ವಾಮಕರೋ ಲಕ್ಷ್ಮ್ಯಾಃ ಕುಕ್ಷಿಭಾಗಸ್ಥಿತಸ್ಸದಾ ||**
**ಸರ್ವೇಷಾಮೇವ ದೇವಾನಾಮೇವಂ ಯುಗ್ಮಂ ವಿಧೀಯತೇ**
**ತೇಷಾಂ ಶಕ್ತಿಃ ಪೃಥಗ್ರೂಪಾ ತದಸ್ತ್ರ ವಾಹನಾಕೃತಿಃ ||**

(ರೂಪಮಂಡನ)

ಲಕ್ಷ್ಮೀ ಮತ್ತು ನಾರಾಯಣ ಇಬ್ಬರೂ ಎರಡೆರಡು ಭುಜಗಳನ್ನು ಹೊಂದಿರುವಂತೆ ಮಾಡಬಹುದು. ಗರುಡನ ಮೇಲೆ ನಾರಾಯಣನ ಎಡ ಪಾರ್ಶ್ವದಲ್ಲಿದೇವಿ ಕುಳಿತಿರುತ್ತಾಳೆ. ಆಕೆಯ ಎಡಹಸ್ತದಲ್ಲಿ ಪದ್ಮವಿರುತ್ತದೆ. ಬಲತೋಳು ನಾರಾಯಣನ ಕಂಠವನ್ನು ಬಳಸಿರುತ್ತದೆ. ಸ್ವಾಮಿಯ ಎಡತೋಳು ದೇವಿಯ ಸೊಂಟವನ್ನು ಬಳಸಿಹಿಡಿದಿರುತ್ತದೆ. ಬಲಹಸ್ತವು ಅಭಯ ಮುದ್ರೆಯಲ್ಲಿರುತ್ತದೆ. ಸದಾ ಪತ್ನೀ ಸಮೇತನಾಗಿರುವ ಈ ದೇವನು ಶಕ್ತಿ ಸ್ವರೂಪವನ್ನು ತನ್ನಲ್ಲಿ ಅಡಗಿಸಿಕೊಂಡಿರುತ್ತಾನೆ. ಆತನ ಅಸ್ತ್ರಗಳು ಪ್ರತ್ಯೇಕವಾಗಿ ಸುತ್ತಲೂ ಆಯುಧ ಪುರುಷರ ರೂಪದಲ್ಲಿರುತ್ತವೆ.

(ಈ) ಪಾದ್ಮ ಸಹಿತೆಯಲ್ಲಿ (ಕ್ರಿ, ೧೮ : ೫೦ - ೫೪) ಅಪರೂಪದ ಮೂರ್ತಿಯ ಧ್ಯಾನ ದೊರೆಯುತ್ತದೆ. ಇದಕ್ಕೆ ಸಂವಾದಿಯಾದ ಶಿವಮೂರ್ತಿಯ ಅರ್ಧನಾರೀಶ್ವರ ಹೆಚ್ಚು ಜನಪ್ರಿಯವಾಗಿದ್ದರೂ ಈ ಮೂರ್ತಿಯು ಪ್ರಚಾರದಲ್ಲಿಲ್ಲ. 'ಇದರ ವಿವರ ಇಂತಿದೆ :

**ಲಕ್ಷ್ಮೀನಾರಾಯಣಂ ಕುರ್ಯಾದ್ಭುಜಾಷ್ಟಕ ಸಮನ್ವಿತಮ್**
**ಯದ್ವಾ ಚತುರ್ಭುಜಂ ಶಂಖ ಚಕ್ರಾದ್ಯಾಯುಧ ಭೂಷಿತಮ್ ||**
**ವಾಮಭಾಗೇ ತು ಹಸ್ತಾಭ್ಯಾಂ ವರದಂ ಪಂಕಜಂ ತು ವಾ**
**ಇತರಾಭ್ಯಾಂ ಚ ಹಸ್ತಾಭ್ಯಾಮಭಯಂ ಚಕ್ರಮೇವ ವಾ ||**
**ವಪುಷೋ ದಕ್ಷಿಣೇ ಭಾಗೇ ವಿಷ್ಣುರ್ವಾಮೇ ಸರೋರುಹ**
**ಪೀನಸ್ತನತಟೋ ವಾಮಃ ಶ್ರೀ ವತ್ಸಾಂಕಸ್ಥತೇತರಃ ||**
**ವಾಮೇ ಹೇಮನಿಭಃ ಶ್ಯಾಮೋ ದಕ್ಷಿಣೋ ಭಾಗ ಇಷ್ಯತೇ**
**ಆಸೀನಂ ವಾ ಶಯನಂ ವಾ ಗರುಡಾರೂಢಮೇವ ವಾ ||**
**ಸ್ಥಿತಂ ವಾ ಕಲ್ಪಯೇದ್ದೇವಂ**

ಲಕ್ಷ್ಮೀನಾರಾಯಣ ಮೂರ್ತಿಯನ್ನು ಎಂಟು ಭುಜಗಳಿರುವಂತೆ ಅಥವ ನಾಲ್ಕು ಭುಜಗಳಿರುವಂತೆ ಕಲ್ಪಿಸಬಹುದು. ಬಲಪಾರ್ಶ್ವದ ದೇಹ ನೀಲಿಯ ವರ್ಣವಾಗಿದ್ದು ಸ್ವಾಮಿಯನ್ನೂ, ಎಡಪಾರ್ಶ್ವದ ದೇಹ ಬಂಗಾರದ ಬಣ್ಣದಲ್ಲಿದ್ದು ಲಕ್ಷ್ಮಿಯನ್ನೂ ಸಂಕೇತಿಸಬೇಕು. ಬಲದಲ್ಲಿ ಶ್ರೀವತ್ಸವಿದ್ದರೆ ಎಡದಲ್ಲಿ ತುಂಬಿದ ಸ್ತನವಿರಬೇಕು. ಈ ಮೂರ್ತಿಯು ನಿಂತಿರುವಂತೆ, ಕುಳಿತಿರುವಂತೆ, ಮಲಗಿರುವಂತೆ ಅಥವ ಗರುಡನ ಮೇಲೆ ಕುಳಿತಿರುವಂತೆಯೂ ರೂಪಿಸಬಹುದು.

ನಾಲ್ಕು ತೋಳುಗಳಿರುವಾಗ ಬಲಪಾರ್ಶ್ವದ ಕೆಳಹಸ್ತದಲ್ಲಿ ಅಭಯ ಮುದ್ರೆ ಮತ್ತು ಮೇಲಿನ ಹಸ್ತದಲ್ಲಿ ಚಕ್ರ, ಎಡ ಪಾರ್ಶ್ವದ ಕೆಳಹಸ್ತದಲ್ಲಿ ವರದ ಮುದ್ರೆ ಮತ್ತು ಮೇಲಿನ ಹಸ್ತದಲ್ಲಿ ಪದ್ಮವನ್ನು ಧರಿಸಿರಬೇಕು.

ಎಂಟು ತೋಳುಗಳನ್ನು ರೂಪಿಸಿದಾಗ ಎಡ ಪಾರ್ಶ್ವದ ಹಸ್ತಗಳಲ್ಲಿ ಕೆಳಗಿನಿಂದ ಮೇಲಕ್ಕೆ ಕ್ರಮವಾಗಿ ವರದಮುದ್ರೆ, ವೀಣೆ, ಶಂಖ, ಪದ್ಮಗಳನ್ನು ಧರಿಸಿರಬೇಕು. ಬಲಪಾರ್ಶ್ವದ ಹಸ್ತಗಳಲ್ಲಿ ಕೆಳಗಿನಿಂದ ಮೇಲಕ್ಕೆ ಕ್ರಮವಾಗಿ ಅಭಯಮುದ್ರೆ, ಧನುಸ್ಸು, ಚಕ್ರ, ಗದೆಗಳನ್ನು ಧರಿಸಿರಬೇಕು.

## ೫. ಶ್ರೀಯಃ ಪತಿ

ಶ್ರೀಃಪತಿ ಎಂದರೆ ಲಕ್ಷ್ಮಿಯ ಪತಿ ಎಂದು. ಈ ಮೂರ್ತಿಯ ವಿವರಗಳು ಈಶ್ವರ ಸಂಹಿತೆಯಲ್ಲಿ ದೀರ್ಘವಾಗಿದ್ದು ವಿಷ್ಣುವಿನ ಈ ಬಗೆಯ ಹಲವುರೂಪಗಳನ್ನು ವಿವರಿಸುತ್ತದೆ. ಇವುಗಳೆಲ್ಲಾ ಲಕ್ಷ್ಮೀದೇವಿಯು ಸ್ವಾಮಿಯೊಂದಿಗೆ ಇರುತ್ತಾಳೆ. ಲಕ್ಷ್ಮೀದೇವಿಯು ತ್ರೈಲೋಕ್ಯವಿಸ್ಮಯಕಾರಕ ಸುಂದರಿಯಾಗಿರುತ್ತಾಳೆ. ದೇವನು ಆಕೆಯೊಂದಿಗೆ ಇರುತ್ತಾನೆ.

(ಅ) ನೀಲ ನೀರದ ವರ್ಣಾಭಂ ಪದ್ಮ ಪತ್ರ ನಿಭೇಕ್ಷಣಮ್
ಮಧ್ಯಾಹ್ನ ಭಾಸ್ಕರಾಕಾರಂ ದ್ವಾದಶಾರಕರೋದ್ಯತಮ್ ॥
ಶ್ರೋಣೀತಟ ನಿವಿಷ್ಟೇನ ವಾಮಹಸ್ತೇನ ಲೀಲಯಾ
ಧ್ರಿಯಮಾಣಂ ಗದಾಂ ಗುರ್ವೀಂ ನಿಷಣ್ಣಾಂ ಧರಣೀತಲೇ ॥

(ಈಶ್ವರ ಸಂಹಿತೆ, ೨೪ : ೨೮೩ - ೨೮೪)

ನೀಲವರ್ಣದ ದೇಹಿಯಾಗಿದ್ದು ಮಧ್ಯಾಹ್ನದ ಸೂರ್ಯನಂತೆ ತೇಜೋವಂತನಾಗಿರುವ ಈ ಸ್ವಾಮಿಯು ಗದಾ ಚಕ್ರಗಳನ್ನು ಧರಿಸಿರುತ್ತಾನೆ. ಈತನ ಉಳಿದ ಎರಡು ಹಸ್ತಗಳು ದೇವಿಯ ಶ್ರೋಣಿ ಭಾಗವನ್ನು ಹಿಡಿದಿರುತ್ತವೆ.

ಹನ್ನೆರಡು ತೋಳುಗಳ ಸೂಚನೆ ಇದ್ದರೂ ಅದರ ವಿವರಗಳು ತಿಳಿಸಿಲ್ಲ.

(ಆ) ದಿವ್ಯಮಾಲ್ಯಾಂಬರಧರಂ ದಿವ್ಯಾಭರಣಭೂಷಿತಮ್
ಚತುವಕ್ತ್ರಂ ಸುನಯನಂ ವಾಮೋತ್ಸಂಗಾರ್ಪಿತ ಪ್ರಿಯಮ್ ॥
ಖಡ್ಗಂ ಚಕ್ರ ಗದಾಬಾಣಂ ಮುಸಲಂ ಚ ತರೂತ್ತಮಮ್
ಷಟ್ಸು ದಕ್ಷಿಣಹಸ್ತೇಷು ಶಂಖ ಮಂಕುಶ ಕಾರ್ಮುಕಮ್ ॥
ಛತ್ರಂ ಚ ಫಣಭೃತ್ಪಾಶಂ ವಿಭೋರ್ವಾಮ ಭುಜೇಷ್ವಮೀ
ಷಷ್ಠೇ ನಾಲಿಂಗಿತಾ ದೇವೀ ಸಾರವಿಂದೇನ ಬಾಹುನಾ ॥
ತದಂ ಸಂಲಗ್ನ ಕರಯಾ ದೇವ್ಯಾ ತಚ್ಚಿಂತಯಾನಿಶಮ್
ಸಂವೀಜ್ಯಮಾನಂ ವಿನಯಾಚ್ಚಾಮರೇಣ ಸಿತೇನ ತಮ್ ॥
ಲೋಕನಾಥಂ ವಿಶಾಲಾಕ್ಷಂ ಸರ್ವದೇವ ನಮಸ್ಕೃತಮ್
ವರಸಿಂಹಾಸನಾರೂಢಂ ಧ್ಯಾನೋನ್ಮೀಲಿತ ಲೋಚನಮ್ ॥
ಪದ್ಮಾಸನೇನೋಪವಿಷ್ಟಂ ಪದ್ಮಗರ್ಭೋಪಮದ್ಯುತಿಮ್
ಕರುಣಾವಿಷ್ಟಬುದ್ಧಿಂ ಚ ಶಂಖಪದ್ಮ ಕರಾಂಕಿತಮ್ ॥

(ಈಶ್ವರಸಂಹಿತೆ, ೨೪ : ೨೯೬ - ೩೦೧)

ವನಮಾಲಾದಿ ದಿವ್ಯಮಾಲೆಗಳನ್ನು, ಕೌಸ್ತುಭಾದಿ ದಿವ್ಯಾಭರಣಗಳನ್ನು, ಪೀತಾಂಬರಾದಿ ದಿವ್ಯಾಂಬರಗಳನ್ನು ಧರಿಸಿಕೊಂಡು ನಾಲ್ಕು ಮುಖಗಳೊಂದಿಗೆ ಸುಂದರವಾದ ನೇತ್ರಗಳೊಂದಿಗೆ

ಎಡಪಾರ್ಶ್ವದಲ್ಲಿ ತನ್ನ ಮಡಿಲಿನಲ್ಲಿ ಲಕ್ಷ್ಮೀದೇವಿಯನ್ನು ಕೂರಿಸಿಕೊಂಡಿರುವ ಸ್ವಾಮಿ ನಯನ ಮನೋಹರವಾಗಿರುತ್ತಾನೆ. ಸಿಂಹಾಸನದಮೇಲೆ ಪದ್ಮಾಸನದಲ್ಲಿ ಕುಳಿತಿದ್ದು ಧ್ಯಾನಾಮಗ್ನ ನಾಗಿರುತ್ತಾನೆ. ಸ್ವಾಮಿಯು ಮಹಾಕರುಣಾಳುವಾಗಿದ್ದು ಎಲ್ಲಾ ಇತರ ದೇವ ಮೂರ್ತಿಗಳಿಂದಲೂ ಅರ್ಚಿಸಲ್ಪಡುತ್ತಾನೆ.

ಈ ಸ್ವಾಮಿಗೆ ಹನ್ನೆರಡು ತೋಳುಗಳು. ಆರು ಬಲಪಾರ್ಶ್ವದಲ್ಲಿಯೂ ಉಳಿದ ಆರು ಎಡ ಪಾರ್ಶ್ವದಲ್ಲಿಯೂ ಇರುತ್ತವೆ. ಬಲಪಾರ್ಶ್ವದಲ್ಲಿ ಕೆಳಗಿನಿಂದ ಕ್ರಮವಾಗಿ ತರು, ಗದೆ, ಖಡ್ಗ, ಮುಸಲ, ಬಿಲ್ಲು, ಚಕ್ರಗಳಿರುತ್ತವೆ. ತರು ಎಂದರೆ ಕಲ್ಪವೃಕ್ಷ ಅಥವ ಪಾರಿಜಾತ ವೃಕ್ಷ ಎಡಪಾರ್ಶ್ವದಲ್ಲಿ ಎಡತೊಡೆಯ ಮೇಲೆ ಕುಳಿತಿರುವ ದೇವಿಯನ್ನು ಸೊಂಟದ ಮೇಲಿಂದ ಒಂದು ತೋಳು ಆವರಿಸಿಕೊಂಡಿರುತ್ತದೆ. ಉಳಿದ ಐದು ಹಸ್ತಗಳಲ್ಲಿ ಕೆಳಗಿನಿಂದ ಕ್ರಮವಾಗಿ ಛತ್ರಿ, ಪಾಶ, ಅಂಕುಶ, ಬಾಣ, ಶಂಖ ಇರುತ್ತವೆ.

ಈ ಸ್ವಾಮಿಯ ಮುಂದೆ ವಿನಯದಿಂದ ಕೈಜೋಡಿಸಿಕೊಂಡು ದೇವ ದೇವತೆಯರು ನಿಂತಿರುತ್ತಾರೆ.

## ೬. ವಟಪತ್ರಶಾಯಿ

**ಸ ಏವ ದ್ವಿಭುಜೋ ಧ್ಯೇಯೋ ದಂಡದರ್ಭಾಕ್ಷಸೂತ್ರಧೃಕ್**
**ದಂತ ಜ್ಯೋತ್ಸ್ನಾಜಿತಾಬ್ಜಾನಂ ನ್ಯಗ್ರೋಧಶಯನಂ ವಿಭುಮ್ ॥**
**ನಿಷಣ್ಣಮೀಷದುತ್ತಾನಂ ದ್ವಿಭುಜಂ ಶಿಶುರೂಪಿಣಮ್**
**ಏವ ಮೇವ ನಿರಸ್ತಾಸ್ತ್ರಂ ಶಾಂತನಿದ್ರಾರಸ ಸ್ಥಿತಮ್ ॥**
**ಅನು ಜ್ಜಿತ ಸ್ವಭಾವಂ ಚ ಯೋಗ ಮಾಯಾಬಲೇನ ಚ**
**ತ್ಯಜಂತಮಾಹರಂತಂ ಚ ಶ್ವಾಸೋಚ್ಛ್ವಾಸದ್ವಯೇನ ತು ॥**

(ಈಶ್ವರ ಸಂಹಿತೆ, ೨೪ : ೩೦೯ - ೩೧೧)

ಮಹಾಯೋಗಮೂರ್ತಿಯಾಗಿರುವ ವಿಷ್ಣುಮೂರ್ತಿಯು ಆಲದ ಎಲೆಯ ಮೇಲೆ ಶಿಶು ರೂಪದಲ್ಲಿ ಎರಡು ಬಾಹುಗಳೊಂದಿಗೆ ಎಲೆಯಿಂದ ಎದ್ದು ಹೊರಡಲು ಸಿದ್ಧವಾಗುತ್ತಿರುವಂತೆ ಅಥವ ಸ್ವಲ್ಪ ಎದ್ದಿರುವಂತೆ ಮಲಗಿರುತ್ತಾನೆ. ಯಾವುದೇ ಅಸ್ತ್ರವನ್ನು ಹೊಂದಿರುವುದಿಲ್ಲ. ಶಾಂತ ಭಾವದಲ್ಲಿದ್ದು ಎಲ್ಲವನ್ನು ಈಕ್ಷಿಸುತ್ತಾ ಸ್ವಲ್ಪವಾಗಿ ಹಲ್ಲುಗಳು ಕಾಣಿಸುವಂತಹ ಮುಗುಳಿನಿಂದ ಸಕಲವನ್ನು ತಿಳಿದಿರುವನೆಂಬುದರ ಸುಳಿವನ್ನುಕೊಡುವಂತೆ ಇರುತ್ತಾನೆ. ಯೋಗ ಮಾಯೆಯಿಂದಲೇ (ತನ್ನ ನಿಶ್ವಾಸ - ಉಚ್ಛ್ವಾಸಗಳಿಂದಲೇ) ಸೃಷ್ಟಿ - ಸಂಹಾರಗಳನ್ನು ನಿರ್ವಹಿಸುತ್ತಾ, ಸಕಲಕ್ಕೂ ಕಾರಣಭೂತನಾಗಿರುವ ಈ ಸ್ವಾಮಿಯನ್ನು ಧ್ಯಾನಿಸೋಣ.

## ೭. ಹಯಗ್ರೀವ

ಹಯಗ್ರೀವ ಎಂಬ ರಾಕ್ಷಸನು ಹಿರಣ್ಯಕಶಿಪುವಿನಂತೆ ದೇವ, ಮನುಷ್ಯಪ್ರಾಣಿಗಳಿಂದ ಪ್ರಾಣಕಳೆದುಕೊಳ್ಳಬಾರದೆಂಬ ವರವನ್ನು ಪಡೆದುಕೊಂಡು ದೇವತೆಗಳಿಗೆ ಉಪಟಳ ಕೊಡತೊಡಗಿದ. ದೇವತೆಗಳು ದೇವಿಯ ಮೊರೆಹೊಕ್ಕರು. ದೇವಿಯು ಅವರನ್ನು ವಿಷ್ಣುವಿನ ಬಳಿಗೆ ಕಳುಹಿಸಿ, ವಿಷ್ಣುಭೂಮಿಯಲ್ಲಿ ಕುದುರೆಯ ಮುಖದೊಂದಿಗೆ ಜನಿಸುವಂತೆ ಸೂಚಿಸಿದಳು. ದೇವತೆಗಳ ಪ್ರಾರ್ಥನೆಯಂತೆ ವಿಷ್ಣು ಹಯಗ್ರೀವನಾಗಿ ಜನ್ಮಿಸಿದ. ನಂತರ

ಹಯಗ್ರೀವ ರಾಕ್ಷಸನನ್ನು ಕೊಂದ. ಇದು ದೇವೀ ಭಾಗವತದಲ್ಲಿರುವ ಕಥೆ.

ಮಧು ಕೈಟಭರೆಂಬ ದಾನವ ಸೋದರರರು ವಿಷ್ಣುವಿನ ವಿರುದ್ಧವಾಗಿ ತಮ್ಮ ಚತುರ್ಬಲಗಳೊಂದಿಗೆ ಸಂಗ್ರಾಮವನ್ನು ಪ್ರಾರಂಭಿಸಿದರು. ಆಗ ವಿಷ್ಣು ಘೋರ ಯುದ್ಧವನ್ನು ನಡೆಸಿ ಆಯಾಸಗೊಂಡು ತನ್ನ ಧನುಸ್ಸನ್ನೇ ಆಶ್ರಯವನ್ನಾಗಿ ಮಾಡಿಕೊಂಡು ಅದರ ಮೇಲೆ ತಲೆ ಇರಿಸಿಕೊಂಡು ನಿದ್ರಿಸಿದನು.

ಆ ಸಮಯದಲ್ಲಿ ದೇವತೆಗಳೆಲ್ಲರೂ ಭಯದಿಂದ ಇನ್ನೇನು ಪ್ರಳಯವೇ ಸಂಭವಿಸುತ್ತದೆ ಎಂದುಕೊಂಡು ಮುಂದಿನ ಮಾರ್ಗವನ್ನು ಕೇಳಲು ಬ್ರಹ್ಮದೇವನ ಬಳಿಗೆ ಓಡಿ ಇಂತು ಅರಿಕೆ ಮಾಡಿಕೊಂಡರು :

' ಸ್ವಾಮಿ, ಮಹಾವಿಷ್ಣು ನಿದ್ರಿಸುತ್ತಿದ್ದಾರೆ. ಯುದ್ಧ ಮಧ್ಯದಲ್ಲಿ ಈ ರೀತಿಯ ನಿದ್ರೆ ಸೂಕ್ತವಲ್ಲ. ಇದರಿಂದ ನಮಗೆ ಘೋರ ಸೋಲೇ ಆಗಬಹುದು. ಈ ಸಮಯದಲ್ಲಿ ಮಹಾವಿಷ್ಣು ಎಚ್ಚರಗೊಂಡಿರ ಬೇಕಾದುದು ಬಹುಮುಖ್ಯ. ಆದ್ದರಿಂದ ಮಹಾವಿಷ್ಣುವನ್ನು ಎಚ್ಚರಿಸಲೇ ಬೇಕು. ಈಗ ಧನುಸ್ಸಿನ ಸೂತ್ರವನ್ನು ಕತ್ತರಿಸುತ್ತಲೇ ಅವರಿಗೆ ಎಚ್ಚರವಾಗುತ್ತದೆ. ಅದಕ್ಕಾಗಿ ಒಂದು ಕ್ರಿಮಿಯನ್ನು ಸೃಷ್ಟಿಸಬೇಕಾಗಿದೆ. ಆ ಕ್ರಿಮಿ ಧನುಸ್ಸಿನ ಸೂತ್ರವನ್ನು ಕತ್ತರಿಸುತ್ತಲೇ ಮಹಾವಿಷ್ಣು ಎಚ್ಚರವಾಗುತ್ತಾರೆ '

ಈ ಬೇಡಿಕೆಯ ಅನುಸಾರ ಬ್ರಹ್ಮನು ಒಂದು ಕ್ರಿಮಿಯನ್ನು ಸೃಷ್ಟಿಸಿದ. ವಿಷ್ಣುವಿನ ಧನುಸ್ಸಿನ ಹುರಿಯನ್ನು ಕತ್ತರಿಸುವಂತೆ ಅದಕ್ಕೆ ಅಪ್ಪಣೆಮಾಡಿದ.

ಆ ಕ್ರಿಮಿಯು ' ಸ್ವಾಮಿ, ಶ್ರೀ ಮಹಾವಿಷ್ಣು ನಿದ್ರಿಸುತ್ತಿದ್ದರೆ ಅದಕ್ಕೆ ಭಂಗವನ್ನು ಸೃಷ್ಟಿಸುವಂತಹ ಪಾಪದ ಕೆಲಸವನ್ನು ನನಗೇಕೆ ಹೇಳುತ್ತಿದ್ದೀರಿ ?' ಎಂದು ಕೇಳಿದಾಗ ಬ್ರಹ್ಮನು ' ದೇವತೆಗಳ ರಕ್ಷಣಾರ್ಥ ಈ ಕೆಲಸ ನಡೆಯಬೇಕಾಗಿದೆ. ನಿನಗೆ ದೇವತೆಗಳು ಹವಿರ್ಭಾಗವನ್ನು ಕೊಡುವುದಾಗಿ ಹೇಳಿದ್ದಾರೆ ' ಎಂದು ಹೇಳಿದ.

ಕ್ರಿಮಿಯು ಧನುಸ್ಸಿನ ಹುರಿಯನ್ನು ಕಚ್ಚಿತು. ಹೆದೆ ಏರಿಸಿದ್ದ ಧನುಸ್ಸು ಭೀಕರವಾದ ಝೇಂಕಾರದಿಂದ ಚಿಮ್ಮುತ್ತಾ ವಿಷ್ಣುವಿನ ತಲೆಯನ್ನು ಕತ್ತರಿಸಿತು.

ಈ ಘಟನೆಯಿಂದ ಎಲ್ಲಾ ದೇವತೆಗಳು ದಿಗ್ಭ್ರಮೆಗೊಂಡರು. ಶಿರಸ್ಸು ವೇಗವಾಗಿ ಹಾರುತ್ತಾ ಆಕಾಶದಲ್ಲಿ ಸುತ್ತುತ್ತಾ ಸೂರ್ಯಗೋಳದಂತೆ ಕಾಂತಿಯುತವಾಯಿತು. ಈ ನೋಟವನ್ನು ಕಂಡ ಲಕ್ಷ್ಮೀದೇವಿಯ ಕಣ್ಣುಗಳು ಕಂಬನಿಯಿಂದ ತುಂಬಿದವು. ಆಕೆ ಆದಿಶಕ್ತಿಯನ್ನು ಪ್ರಾರ್ಥಿಸಿದಳು. ಇತರ ದೇವತೆಗಳು ಆಕೆಯ ಪ್ರಾರ್ಥನೆಯೊಂದಿಗೆ ಧ್ವನಿಕೂಡಿಸಿದರು. ಆದಿಶಕ್ತಿಯು ಪ್ರತ್ಯಕ್ಷಳಾಗಿ 'ನಿಮ್ಮ ಬಯಕೆ ತಿಳಿದಿದೆ. ನಾನೇ ಏನು ಮಾಡಬೇಕೆಂದು ಯೋಚಿಸುತ್ತಿದ್ದೇನೆ. ಕತ್ತರಿಸಿ ಹೋದ ವಿಷ್ಣುವಿನ ಶಿರಸ್ಸು ಸೂರ್ಯನಾಗಿ ಆಕಾಶದಲ್ಲಿ ಬೆಳಗುತ್ತಿದೆ. ಆದ್ದರಿಂದ ನಾವೆಲ್ಲರೂ ಸೇರಿ ಶ್ರೀ ವಿಶ್ವಕರ್ಮಪರಮೇಶ್ವರನನ್ನು ಪ್ರಾರ್ಥಿಸೋಣ' ಎಂದು ಹೇಳಿದಳು.

ಎಲ್ಲರೂ ಸೇರಿ ವಿಶ್ವಕರ್ಮನನ್ನು ಪ್ರಾರ್ಥಿಸಿದರು. ದೇವನು ಪ್ರತ್ಯಕ್ಷನಾದಾಗ 'ಸ್ವಾಮಿ ವಿಷ್ಣುವಿಗೆ ತಲೆಯನ್ನು ಕೊಟ್ಟು ವಿಷ್ಣುಯುದ್ಧದಲ್ಲಿ ಜಯಿಸುವಂತೆ ಮಾಡಿ' ಎಂದು ಪ್ರಾರ್ಥಿಸಿದರು.

ವಿಶ್ವಕರ್ಮನು ಸ್ವಲ್ಪ ಕಾಲ ಯೋಚಿಸಿ ಕುದುರೆಯ ಮುಖವುಳ್ಳ ಗಂಧರ್ವನ ಶಿರವನ್ನು

ಕತ್ತರಿಸಿ ವಿಷ್ಣುವಿನ ಮುಂಡಕ್ಕೆ ಸೇರಿಸಿದ. ನಂತರ ಪಂಚಪ್ರಾಣಗಳನ್ನು ಪ್ರತಿಷ್ಠಾಪಿಸಿದ. ಕೂಡಲೇ ವಿಷ್ಣುವು ನಿದ್ರೆಯಿಂದ ಎಚ್ಚೆತ್ತವನಂತೆ ಎದ್ದು ಕುಳಿತು ಮಾತನಾಡತೊಡಗಿದ.

ಹಯಗ್ರೀವನಾಗಿದ್ದ ಈತನು ನಿಜವಾಗಿಯೂ ವಿಷ್ಣುವೇ ಎಂಬ ಅನುಮಾನದಿಂದ ಹಲವು ಪ್ರಶ್ನೆಗಳನ್ನು ಕೇಳಿ ವಿಷ್ಣುವೇ ಎಂದು ಖಚಿತಗೊಳಿಸಿಕೊಂಡ ನಂತರ ಬ್ರಹ್ಮ, ವಿಷ್ಣು, ಮಹೇಶ್ವರ, ಇಂದ್ರ, ಸೂರ್ಯಾದಿಗಳು ಸೃಷ್ಟಿ ಸ್ಥಿತಿ ಲಯ ತಿರೋಧಾನ ಅನುಗ್ರಹ ಕರ್ತನೂ ಸಕಲ ಜಗನ್ನಿಯಾರ್ಮನೂ ಆದ ವಿಶ್ವಕರ್ಮ ಪರಬ್ರಹ್ಮನನ್ನು ಭಕ್ತಿಯಿಂದ ಪೂಜಿಸಿದರು.

ಇದು ವಿಶ್ವಕರ್ಮಸಂಹಿತೆ (ಸೃಷ್ಟಿಖಂಡ, ಅಧ್ಯಾಯ ೩) ಯಲ್ಲಿರುವ ಆಖ್ಯಾಯಿಕೆ. ವಿಷ್ಣುವು ಹಯಗ್ರೀವನಾದ ಬಗೆಯನ್ನು ಹೀಗೆ ವಿವರಿಸಿದೆ. ಈ ಘಟನೆ ಶತಪಥ ಬ್ರಾಹ್ಮಣದಲ್ಲೂ (೧೪ : ೧ : ೧ : ೧೦) ಉಲ್ಲೇಖಿತವಾಗಿದೆ.

ಆದರೆ ಹಯಗ್ರೀವನು ವಿದ್ಯಾಧಿದೇವತೆ ಎಂದು ಈಗ ಎಲ್ಲರಿಂದಲೂ ಪ್ರಾರ್ಥಿಸಲ್ಪಡುತ್ತಾನೆ -

**ಜ್ಞಾನಾನಂದ ಮಯಂ ದೇವಂ ನಿರ್ಮಲಸ್ಫಟಿಕಾ ಕೃತಿಂ**
**ಆಧಾರಂ ಸರ್ವವಿದ್ಯಾನಾಂ ಹಯಗ್ರೀವಂ ಉಪಾಸ್ಮಹೇ ||**

(ಅ) ವಿಷ್ಣುಧರ್ಮೋತ್ತರ ಪುರಾಣದಲ್ಲಿ ಹಯಗ್ರೀವ ಧ್ಯಾನ ಇಂತಿದೆ :

**ಮೂರ್ತಿಮಾನ್ಪೃಥಿವೀ ಹಸ್ತನ್ಯಸ್ತಪಾದಸ್ಸಿತ ಚ್ಛವಿಃ**
**ನೀಲಾಂಬರಧರಃ ಕಾರ್ಯೋ ದೇವೋ ಹಯಶಿರೋಧರಃ ||**
**ವಿದ್ಯಾಸ್ಸಂಕರ್ಷಣಾಂಶೇನ ದೇವೋ ಹಯಶಿರೋಧರಃ**
**ಕರ್ತವ್ಯೋಽಷ್ಟಭುಜೋ ದೇವಸ್ತತ್ಕರೇಷು ಚತುರ್ಷ್ವಥ ||**
**ಶಂಖಂ ಚಕ್ರಂ ಗದಾಂ ಪದ್ಮಂ ಸ್ವಾಕಾರಾಂ ಕಾರಯೇದ್ಬುಧಃ**
**ಚತ್ವಾರಶ್ಚ ಕರಾಃ ಕಾರ್ಯಾ ವೇದಾನಾಂ ದೇಹಧಾರಿಣಾಮ್ ||**
**ದೇವೇನ ಮೂರ್ಧ್ನಿ ವಿನ್ಯಸ್ತಾಸ್ಸರ್ವಾಭರಣಧಾರಿಣಃ**

ಎಂಟು ತೋಳುಗಳ ಈ ದೇವನ ಹಸ್ತಗಳಲ್ಲಿ ಶಂಖ ಚಕ್ರ ಗದೆ ಪದ್ಮಗಳು ಯಥಾರೀತಿಯಲ್ಲಿದ್ದು ಉಳಿದ ನಾಲ್ಕು ಹಸ್ತಗಳು ನಾಲ್ಕು ವೇದಗಳ ಮೇಲೆ ಇರಬೇಕು. ವೇದಗಳು ಪುರುಷ ರೂಪದಲ್ಲಿರಬೇಕು. ಸ್ವಾಮಿಯ ಪಾದಗಳೆರಡೂ ಭೂದೇವಿಯ ಚಾಚಿರುವ ಅಂಗೈಗಳ ಮೇಲೆ ಇರಬೇಕು. ಹಯಗ್ರೀವನು ಶ್ವೇತ ವರ್ಣದಲ್ಲಿದ್ದು ಆತನ ವಸ್ತ್ರಗಳು ನೀಲವರ್ಣದಲ್ಲಿರ ಬೇಕು. ವಿಷ್ಣು ಧರಿಸುವ ಸಕಲ ಅಲಂಕಾರಗಳೂ ಈ ಮೂರ್ತಿಗೆ ಇರಬೇಕು. ಈ ಸ್ವಾಮಿಯು ಸಂಕರ್ಷಣನಿಗೆ ಸೇರಿದ್ದು ಶಕ್ತಿಮಯವ್ಯೂಹಕ್ಕೆ ಸೇರಿದ್ದಾನೆ ಎಂದು ಹೇಳುತ್ತಾರೆ.

ಈ ಸ್ವಾಮಿಯ ಎಂಟು ಹಸ್ತಗಳಲ್ಲೂ ಆಯುಧಗಳನ್ನು ಧರಿಸಿರುವುದೂ ಉಂಟು. ಆಗ ಪ್ರದಕ್ಷಿಣ ಕ್ರಮದಲ್ಲಿ ಬಲ ಕೆಳಗಿನ ಕೈಯಿಂದ ಮೇಲಕ್ಕೆ ಈ ರೀತಿ ಆಯುಧಗಳಿರುತ್ತವೆ- ಗದೆ, ಬಾಣ, ಚಕ್ರ, ಖಡ್ಗ, ಶಂಖ, ಖೇಟಕ, ಧನುಸ್ಸು ಮತ್ತು ಪದ್ಮ.

ಈ ಸ್ವಾಮಿಯನ್ನು ಎರಡು, ನಾಲ್ಕು, ಎಂಟು ಅಥವ ಹನ್ನೆರಡು ತೋಳುಗಳಿರುವಂತೆಯೂ ರೂಪಿಸಬಹುದು.ಆಗ ಪೂರ್ವೋಕ್ತ ಎಂಟು ಆಯುಧಗಳೊಂದಿಗೆ ಪುಸ್ತಕ,

ಅಕ್ಷಮಾಲೆ, ಅಭಯ, ವರದ ಮುದ್ರೆಗಳನ್ನೂ ಸೇರಿಸುತ್ತಾರೆ. ನಾಲ್ಕು ತೋಳುಗಳಿರುವಾಗ ಸ್ವಾಮಿಯನ್ನು ವೇದಧಾರಿಯನ್ನಾಗಿ ರೂಪಿಸಬೇಕು. ಸಕಲಾಭರಣ, ಅಲಂಕರಣಗಳಿಂದಲೂ ದೇವನು ಅಲಂಕೃತನಾಗಿರುತ್ತಾನೆ.

(ಆ) ಹಯಗ್ರೀವಂ ಚತುರ್ಬಾಹುಂ ಶುದ್ಧ ಸ್ಫಟಿಕ ಸನ್ನಿಭಮ್
ಅಶ್ವವಕ್ತ್ರಂ ಮಕುಟಿನಂ ಧೌತವಸ್ತ್ರೋತ್ತರೀಯಕಮ್ ||
ಮುಖ್ಯೇನೈಕೇನ ವರದಂ ದಕ್ಷಿಣೇನೇತರೇಣ ತು
ವಿಜ್ಞಾನ ಪುಸ್ತಕಧರಂ ಜಘನ್ಯೇ ಚ ಕರದ್ವಯೇ ||
ಅಕ್ಷಸೂತ್ರಂ ಚ ಶಂಖಂ ಚ ಬಿಭ್ರಾಣಂ ಸುಪರಿಷ್ಕೃತಮ್
ಕಲ್ಪಯೇತ್ಪುರುಷಾಕಾರಮನಂತಂ ಚ ಕಿರೀಟಿನಮ್ ||
ಭೋಗಿಭೋಗೇ ಸುಖಾಸೀನಂ ಪೃಷ್ಠತಃ ಫಣ ಮಂಡಲೈಃ
ಉನ್ನಮದ್ಭಿಃ ಕೃತಚ್ಛಾಯಂ ಚತುರ್ಹಸ್ತಂ ಸಿತಪ್ರಭಮ್ ||
ಯದ್ವಾ ತು ಶ್ಯಾಮಲೋ ವರ್ಣ ಅನಂತಸ್ಯ ಪ್ರಕೀರ್ತ್ಯತೇ
ಪ್ರಕಲ್ಪಯೇನ್ಮುಖ್ಯಹಸ್ತಂ ವರದಂ ವಾಮಹಸ್ತಕಮ್ ||
ಗದಾಧರಂ ಕಟೀದೇಶಮವಲಂಬ್ಯಾಥವಾ ಸ್ಥಿತಮ್
ಜಘನ್ಯಾಭ್ಯಾಂ ಚ ಹಸ್ತಾಭ್ಯಾಂ ಶಂಖ ಚಕ್ರಧರೋ ಭವೇತ್ ||

(ಪಾದ್ಮಸಂಹಿತೆ, ಕ್ರಿ ೧೨ : ೨ - ೭)

ಕುದುರೆಯ ಮುಖವುಳ್ಳ ನಾಲ್ಕು ತೋಳುಗಳುಳ್ಳ ಹಯಗ್ರೀವ ಸ್ವಾಮಿಯು ಸ್ಫಟಿಕಬಣ್ಣದಂತಹ ದೇಹವನ್ನು ಪಡೆದಿದ್ದು, ಬಿಳಿಯ ಅಥವ ಕೆಂಪು ವಸ್ತ್ರವನ್ನು ಧರಿಸಿರುತ್ತಾನೆ. ಮುಂದಿನ ಬಲ ಹಸ್ತದಲ್ಲಿ ವರದ ಮುದ್ರೆ, ಎಡ ಹಸ್ತದಲ್ಲಿ ಪುಸ್ತಕವನ್ನು ಧರಿಸಿರುತ್ತಾನೆ. ಮೇಲಿನ ಬಲಹಸ್ತದಲ್ಲಿ ಅಕ್ಷಮಾಲೆಯನ್ನು, ಎಡಹಸ್ತದಲ್ಲಿ ಶಂಖವನ್ನು ಧರಿಸಿರುತ್ತಾನೆ. ಉಳಿದ ದೇಹವೆಲ್ಲವೂ ಪುರುಷಾಕಾರದಲ್ಲಿದ್ದು ಸುಖಾಸನದಲ್ಲಿ ಮಂಡಿಸಿರುತ್ತಾನೆ. ಹಿಂಭಾಗದಲ್ಲಿ ತನ್ನ ಫಣಿ ಮಂಡಲದಿಂದ ಅನಂತನು ಸ್ವಾಮಿಗೆ ನೆರಳನ್ನು ಒದಗಿಸುತ್ತಿರುತ್ತಾನೆ. ಅವನ ವರ್ಣ ಕಪ್ಪು.

ಈ ಮೂರ್ತಿಯು ಮಂದಿನ ಬಲಹಸ್ತದಲ್ಲಿ ವರದ ಮುದ್ರೆಯನ್ನು, ಎಡಹಸ್ತದಲ್ಲಿ ಗದೆಯನ್ನು ಹಿಡಿದಿರುವಂತೆ ಅಥವ ಸೊಂಟದ ಬಳಿಇರಿಸಿಕೊಂಡಿರುವಂತೆಯೂ ರೂಪಿಸ ಬಹುದು. ಮೇಲಿನ ಹಸ್ತಗಳಲ್ಲಿ ಬಲದಲ್ಲಿ ಚಕ್ರ, ಎಡದಲ್ಲಿ ಶಂಖ ಧರಿಸಿರಬೇಕು. ಹೀಗೂ ಸ್ವಾಮಿಯನ್ನೂ ರೂಪಿಸಬಹುದು.

(ಇ) ವಂದೇ ತುರಂಗ ವದನಂ ಶಶಿಬಿಂಬಸಂಸ್ಥಂ
ಚಂದ್ರಾವದಾತ ಮಮೃತಾತ್ಮಕರೈ ಸ್ವಮಂತಾತ್ |
ಅಂಡಾಂತರಂ ಬಹಿ ರಪಿ ಪ್ರತಿಭಾಸಯಂತ
ಶಂಖಾಕ್ಷಪುಸ್ತಕಸುಬೋಧಯುತಾಬ್ಜ ಬಾಹುಮ್ ||

(ಪಾಂಚರಾತ್ರಾಗಮ)



ಚಿತ್ರ ೯೫ : ಹಯಗ್ರೀವ - ೧

ಚಂದ್ರನಂತೆ ಸ್ವಚ್ಛ ಮೈಕಾಂತಿಯಲ್ಲಿ ನಾಲ್ಕು ಬಾಹುಗಳೊಂದಿಗೆ ಚಂದ್ರ ಬಿಂಬದಲ್ಲಿ ಕುದುರೆಯ ಮುಖದ ಈ ಸ್ವಾಮಿಯು ನಿವಸಿಸುತ್ತಾನೆ. ಬ್ರಹ್ಮಾಂಡದ ಒಳಗೆ ಹೊರಗೆ ಅಮೃತಮಯವಾದ ತನ್ನ ಕಿರಣಗಳಿಂದ ಪ್ರಕಾಶಗೊಳಿಸುತ್ತಾನೆ. ಬಲಗಡೆಯ ಮುಂದಿನ ಹಸ್ತದಲ್ಲಿ ವ್ಯಾಖ್ಯಾನಮುದ್ರೆಯನ್ನು, ಮೇಲಿನ ಹಸ್ತದಲ್ಲಿ ಅಕ್ಷಮಾಲೆಯನ್ನೂ, ಎಡಗಡೆಯ ಮುಂದಿನ ಹಸ್ತದಲ್ಲಿ ಪುಸ್ತಕವನ್ನು, ಮೇಲಿನ ಹಸ್ತದಲ್ಲಿ ಶಂಖವನ್ನು ಧರಿಸಿರುತ್ತಾನೆ.

(ಈ) **ವ್ಯಾಖ್ಯಾಮುದ್ರಾಂ ಕರಸರಸಿಜೈ: ಪುಸ್ತಕಂ ಶಂಖಚಕ್ರೇ**
**ಬಿಭ್ರದ್ಭಿನ್ನ ಸ್ಫಟಿಕರುಚಿರೇ ಪುಂಡರೀಕೇ ನಿಷಣ್ಣ: ।**
**ಅಮ್ಲಾನಶ್ರೀರಮೃತ ವಿಶದೈ ರಂಶುಭಿ: ಪ್ಲಾವಯನ್ಮಾ**
**ಮಾವಿರ್ಭೂಯಾ ದನಘಮಹಿಮಾ ಮಾನಸೇ ವಾಗಧೀಶ: ॥**

(ವೇದಾಂತ ದೇಶಿಕರ 'ಹಯಗ್ರೀವಸ್ತುತಿ' )

ವಿದ್ಯೆಗಳಿಗೆಲ್ಲಾ ಅಧಿದೇವತೆಯಾಗಿರುವ ಹಯಗ್ರೀವ ಸ್ವಾಮಿಯು ಬಿಳಿಯ ಮೈಕಾಂತಿಯಿಂದ ಕಂಗೊಳಿಸುತ್ತಿರುತ್ತಾನೆ. ಈತನಿಗೆ ನಾಲ್ಕು ತೋಳುಗಳು. ಪೂರ್ಣವಾಗಿ ಅರಳಿದ ತಾವರೆಯಲ್ಲಿ ಸ್ಫಟಿಕಮಣಿಯಂತೆ ತೇಜೋವಂತನಾಗಿ ಕುಳಿತಿರುತ್ತಾನೆ.

ಸ್ವಾಮಿಯ ಬಲಪಾರ್ಶ್ವದಲ್ಲಿ ಕೆಳಹಸ್ತದಲ್ಲಿ ವ್ಯಾಖ್ಯಾನಮುದ್ರೆ, ಮೇಲಿನ ಹಸ್ತದಲ್ಲಿ ಚಕ್ರ ಧರಿಸಿರುತ್ತಾನೆ. ಎಡಪಾರ್ಶ್ವದಲ್ಲಿ ಕೆಳಹಸ್ತದಲ್ಲಿ ಪುಸ್ತಕವನ್ನು, ಮೇಲಿನ ಹಸ್ತದಲ್ಲಿ ಶಂಖವನ್ನು ಧರಿಸಿರುತ್ತಾನೆ.

ಪಾಪವನ್ನೇ ಅರಿಯದೆ ತನ್ನ ಸ್ವಮಹಿಮೆಯಿಂದ ಪ್ರಸಿದ್ಧನಾಗಿರುವ ವಾಗೀಶ್ವರನಾದ ಶ್ರೀ ಹಯಗ್ರೀವಸ್ವಾಮಿ ಅಮೃತದಂತೆ ತಂಪಾಗಿ, ಬಿಳುಪಾಗಿ ತನ್ನ ಆಹ್ಲಾದಕರ ಕಿರಣಗಳಿಂದ ನನ್ನನ್ನು ತೊಯ್ಯುತ್ತಾ ನನ್ನ ಮನದಲ್ಲಿ ಪ್ರತ್ಯಕ್ಷವಾಗಲಿ.

## ೮. ಯಜ್ಞಮೂರ್ತಿ

ಯಜ್ಞ ಮೂರ್ತಿ ಅಥವ ಯಜ್ಞೇಶ ಯಜ್ಞದೊಂದಿಗೆ ಸಂಬಂಧಹೊಂದಿರುವ ದೇವನಾದ್ದರಿಂದ ವೈಷ್ಣವ ಸಾಹಿತ್ಯದಲ್ಲಿ ಮುಖ್ಯ ಅವತಾರವಾಗಿ ಪರಿಗಣಿಸಲ್ಪಡುತ್ತಾನೆ. ಭಾಗವತದಲ್ಲಿ ಈ ಸ್ವಾಮಿಯ ಉಲ್ಲೇಖವಿದೆ. ವೈಖಾನಸ ಆಗಮದಲ್ಲಿ ಆವರಣ ದೇವನಾಗಿ ಪರಿಗಣಿಸಿ ಮೊದಲ ಆವರಣದ ನೈಋತ್ಯ ದಿಕ್ಕಿನಲ್ಲಿ ಈ ಮೂರ್ತಿಯನ್ನು ಪಶ್ಚಿಮಾಭಿಮುಖ ವಾಗಿ ಸ್ಥಾಪಿಸಬೇಕೆಂದು ಹೇಳಿದೆ. ಈ ಮೂರ್ತಿಯು ಯಜ್ಞವರಾಹ ಮೂರ್ತಿಗಿಂತಲೂ ಭಿನ್ನವಾದವನು. ಈ ಅಂಶವನ್ನು ಮುಖ್ಯವಾಗಿ ನೆನಪಿನಲ್ಲಿ ಇರಿಸಿಕೊಳ್ಳಬೇಕು.

**.....ಯಜ್ಞಮೂರ್ತಿ ಮತ: ಶೃಣು**
**ದ್ವಿಶೀರ್ಷಂ ಚ ತ್ರಿಪಾದಂ ಚ ಚತು:ಶೃಂಗಂ ಚತುರ್ಮುಖ ॥**
**ಸಪ್ತಹಸ್ತಂ ಜಪಾತುಲ್ಯಂ ವನಮಾಲಾ ವಿಭೂಷಿತಮ್**
**ಅಭೀತಿದೋ ಮುಖ್ಯಹಸ್ತೋ ದಕ್ಷಿಣೋSನ್ಯೇ ವರಪ್ರದ: ॥**
**ಪಂಚೇತರ ಕರಾಶ್ಚ ಸ್ರುಕ್ಸ್ರುವಾದ್ಯಾಯುಧ ವಿಭೂಷಿತಾ:**

(ಪಾದ್ಮ ಸಂಹಿತೆ, ಕ್ರಿ, ೧೮ : ೫೪ - ೫೭)

ಯಜ್ಞೇಶನಿಗೆ ಎರಡು ತಲೆ, ಮೂರು ಕಾಲುಗಳು, ನಾಲ್ಕು ಕೊಂಬುಗಳು , ಏಳು ತೋಳುಗಳು ಇರುತ್ತವೆ. ಕರಗಿದ ಚಿನ್ನದ ಬಣ್ಣದ ಮೈಕಾಂತಿಯಲ್ಲಿರುವ ಈ ದೇವ ಮುಂಭಾಗದ ಹಸ್ತಗಳು ಅಭಯ - ವರದ ಮುದ್ರೆಯಲ್ಲಿದ್ದು ಉಳಿದ ಐದು ಹಸ್ತಗಳಲ್ಲಿ ಸ್ರುಕ್ - ಸ್ರುವ

- ಚಕ್ರ - ಶಂಖ - ಆಜ್ಯಪಾತ್ರ - ಜುಹು (ಯಜ್ಞದಲ್ಲಿ ತುಪ್ಪಸುರಿಯುವ ಸೌಟು) ಇರುತ್ತವೆ. ವನಮಾಲೆ, ಇತರ ಆಭರಣಗಳಿಂದ ಸ್ವಾಮಿಯನ್ನು ಅಲಂಕರಿಸಬೇಕು. ಈ ಸ್ವಾಮಿಯ ಎರಡು ಪಾರ್ಶ್ವದಲ್ಲಿ ಸ್ವಾಹಾ ಮತ್ತು ಸ್ವಧಾ ದೇವಿಯರು ಇರುತ್ತಾರೆ.

ಈ ರೂಪಕ್ಕೆ ಮೂಲವು ಈ ವೇದ ಮಂತ್ರ -

**ಚತ್ವಾರಿ ಶೃಂಗಾ ತ್ರಯೋ ಅಸ್ಯ ಪಾದಾ ದ್ವೇ ಶೀರ್ಷೇ ಸಪ್ತ ಹಸ್ತಾಸೋ ಅಸ್ಯ ।**

**ತ್ರಿಧಾ ಬದ್ಧೋ ವೃಷಭೋ ರೋರವೀತಿ ಮಹೋ ದೇವೋ ಮರ್ತ್ಯಾ ಆವಿವೇಶ ॥**

(ಋ ೪ : ೫೮ : ೩, ತೈ, ಆ. ೧೦ : ೧೦ : ೨)

ನಾಲ್ಕು ಕೊಂಬುಗಳು, ಮೂರು ಪಾದಗಳು, ಎರಡು ತಲೆಗಳು, ಏಳು ಹಸ್ತಗಳು ಇರುವ ಗೂಳಿ ಎಂದು ಋಗ್ವೇದದಲ್ಲಿ ಅಗ್ನಿಯನ್ನು ವರ್ಣಿಸಲಾಗಿದೆ. ಇದನ್ನು ನಿರುಕ್ತಕಾರರು ಹೀಗೆ ವಿವರಿಸಿದ್ದಾರೆ : ಪ್ರಾತಃ ಸವನ, ಮಾಧ್ಯಂದಿನ ಸವನ ಮತ್ತು ತೃತೀಯ ಸವನಗಳೆಂಬ ಮೂರು ಸವನಗಳನ್ನು ಮೂರು ಪಾದಗಳೆಂದು, ಪ್ರಾಯನೀಯ ಇಷ್ಟಿ ಮತ್ತು ಉದಯನೀಯ ಇಷ್ಟಿಗಳೆಂಬ ಎರಡು ಸವನಗಳೇ ಎರಡು ಶಿರಸ್ಸುಗಳೆಂದು, ಏಳು ಛಂದಸ್ಸುಗಳು (ಮಂತ್ರಗಳು) ಏಳು ಹಸ್ತಗಳೆಂದು ಹೇಳಲಾಗುತ್ತದೆ. ಈ ರೀತಿಯ ವೃಷಭವು ಮೂರು ಬಗೆಯಾಗಿ ಬಂಧಿತವಾಗಿದ್ದು ಅರಚುತ್ತಿದೆ. ಈ ವೃಷಭವು ಮನುಷ್ಯರ ದೇಹವನ್ನು ಪ್ರವೇಶಿಸುವುದಾಗಿಯೂ ಹೇಳಲಾಗಿದೆ. ವೃಷಭವನ್ನು ಬಂಧಿಸಿರುವ ಮೂರು ಬಗೆಯ ಬಂಧನಗಳೆಂದರೆ ಮಂತ್ರಗಳು, ಬ್ರಾಹ್ಮಣಗಳು ಮತ್ತು ಕಲ್ಪಸೂತ್ರಗಳು ಎಂದು ನಿರುಕ್ತಕಾರರು ಎಂದು ವಿವರಿಸುತ್ತಾರೆ. ವೃಷಭ ಅರಚುವುದು ಎಂದರೆ ಯಜ್ಞದಲ್ಲಿಯ ಋಗ್ - ಶಂಸನ, ಯಜುರ್ - ಯಜನ, ಸಾಮ - ಸ್ತವನ ಮಂತ್ರಗಳನ್ನೇ ಹಾಗೆ ಹೇಳಲಾಗಿದೆ ಎನ್ನುತ್ತಾರೆ. ಯಜ್ಞನು ಮನುಷ್ಯರ ದೇಹವನ್ನು ಪ್ರವೇಶಿಸಿ ಅವರು ಯಜ್ಞಗಳನ್ನು ಮಾಡುವುದಕ್ಕೆ, ಹವಿಸ್ಸು ಅರ್ಪಿಸುವುದಕ್ಕೆ ಪ್ರೇರಿಸುತ್ತಾನೆ. ಈ ಮಂತ್ರವನ್ನು ಬೆಳಗ್ಗೆ ಮತ್ತು ಸಂಜೆಗಳಲ್ಲಿ ಯಜ್ಞಗಳನ್ನು ಮಾಡುವಾಗ ಪಠಿಸಲೇ ಬೇಕು.

ಈ ಸಾಂಕೇತಿಕ ವಿವರಗಳನ್ನೆಲ್ಲಾ ಯಜ್ಞಮೂರ್ತಿಯ ರೂಪಕಲ್ಪನೆಯಲ್ಲಿ ವಿವರವಾಗಿ ಕಲ್ಪಿಸಲಾಗಿದೆ.

ಪರಾಶರ ಸಂಹಿತೆಯಲ್ಲಿ (೫ : ೧೫) ಈ ಮೂರ್ತಿಯನ್ನು ಅಗ್ನಿಮಂಡಲದ ಮಧ್ಯೆ ಇರುವಂತೆ ಚಿತ್ರಿಸಿ ಹೇಳಲಾಗಿದೆ (**ಚಕ್ರಶಂಖಧರಂ ದೇವಂ ಕಿರೀಟಾದಿ ವಿಭೂಷಿತಮ್। ಅಗ್ನಿಮಂಡಲ ಮಧ್ಯಸ್ಥಂ ಧ್ಯಾಯೇದ್ಯಜ್ಞಪತಿಂ ಹರಿಮ್ ॥**) ಇದನ್ನೇ ವಿಷ್ವಕ್ಸೇನ ಸಂಹಿತೆಯು (೧೫ : ೮೮ - ೯೦) ಇನ್ನೂ ವಿವರವಾಗಿ ಹೀಗೆ ವಿವರಿಸಿದೆ :

**ದೇವಂ ಶ್ವೇತಾದ್ರಿ ಸಂಕಾಶಂ ತ್ರಿಪಾದಂ ಸಪ್ತಬಾಹುಕಮ್ ॥**

**ವೇದಶೃಂಗ ದ್ವಿವದನಂ ಪೀತಾಂಬರಧರ ಹರಿಮ್**

**ಶಂಖಚಕ್ರಗದಾ ಪಾಣಿಂ ಸಪ್ತಜಿಹ್ವಾ ಸುಭೂಷಣಮ್ ॥**

**ಸೌಮ್ಯಂ ಚ ಸರ್ವಾಭರಣೈಃ ದಿವ್ಯೈಃ ಪರಿವೃತಂ ಬುಧೈಃ**

**ಆಗ್ನೌ ವಹ್ನಿಸ್ವರೂಪೇಣ ಸ್ಥಿತ ಮರ್ಚಾಮುಖಂ ಸ್ಮರೇತ್ ॥**

ಬಿಳಿಯ ಬೆಟ್ಟದಂತೆ ಇರುವ ದೇವನು ಮೂರುಪಾದಗಳನ್ನು ಏಳುತೋಳುಗಳನ್ನು ಹೊಂದಿರುತ್ತಾನೆ. ನಾಲ್ಕು ಕೊಂಬುಗಳು, ಎರಡು ಮುಖಗಳು ಇರುವ ಈತನು

ಪೀತಾಂಬರಗಳನ್ನು ಧರಿಸಿರುತ್ತಾನೆ. ಏಳು ನಾಲಿಗೆಗಳಿರುವ ಈ ದೇವನು ಶಂಖ, ಚಕ್ರ, ಗದೆಗಳನ್ನು ಹಿಡಿದಿರುತ್ತಾನೆ. ಇನ್ನು ನಾಲ್ಕು ಹಸ್ತಗಳಲ್ಲಿರಬೇಕಾದ ಆಯುಧಗಳು ವಿವರಿತವಾಗಿಲ್ಲ. ಸೌಮ್ಯಮೂರ್ತಿಯಾದ ಈ ದೇವನು ಸಕಲಾಭರಣಗಳಿಂದ ಅಲಂಕೃತನಾಗಿರುತ್ತಾನೆ. ಮುನಿಗಳಿಂದಲೂ, ವಿದ್ವಾಂಸರಿಂದಲೂ ಈ ಮೂರ್ತಿ ಸುತ್ತುವರೆದಿರುತ್ತಾನೆ. ಅರ್ಚನಾಕಾಲದಲ್ಲಿ ಆಗ್ನೇಯ ದಿಕ್ಕಿನಲ್ಲಿ ಅಗ್ನಿರೂಪದಲ್ಲಿ ಸ್ಮರಿಸಿ ಅರ್ಚಿಸಬಹುದು.

ವೈಖಾನಸ ಆಗಮದಲ್ಲಿ ಈ ದೇವನನ್ನು ಆವರಣದೇವತೆಯಾಗಿ ಹೇಳಿ ಮೊದಲ ಆವರಣದ ನೈಋತ್ಯ ದಿಕ್ಕಿನಲ್ಲಿ ಸ್ಥಾಪಿಸಬೇಕೆಂದು ತಿಳಿಸಿದೆ. ಅಲ್ಲಿ ಈ ವಿವರಗಳನ್ನು ಹೇಳಲಾಗಿದೆ :

**ನೈಋತ್ಯಾಂ ಪಶ್ಚಿಮಮುಖಸ್ತಪ್ತಚಾಮೀಕರಾಭಶ್ಚತುಶ್ಶೃಂಗೋ ದ್ವಿಶೀರ್ಷಸ್ಸಪ್ತ ಹಸ್ತಶ್ಶಂಖ ಚಕ್ರಾ ದರ್ವೀ ಸ್ರುಕ್ಸ್ರುವ ಜುಹೂಪಧರಸ್ತ್ರಿಪಾದೋ ರಕ್ತವಸ್ತ್ರಸ್ಸರ್ವಾಭರಣ ಭೂಷಿತೋ ದಕ್ಷಿಣ ವಾಮಯೋಸ್ಸ್ವಾಹಾ ಸ್ವಧಾಯುಕ್ತೋ ಯಜ್ಞೋ, ಯಜ್ಞೇಶಂ ಸರ್ವದೇವಮಯಂ ಪುಣ್ಯಂ ಸರ್ವಕ್ರತುವರಮಿತಿ ।**

ಮೊದಲ ಆವರಣದ ನೈಋತ್ಯದಿಕ್ಕಿನಲ್ಲಿ ಈ ಮೂರ್ತಿಯು ಪೂರ್ವಾಭಿಮುಖವಾಗಿ ಪ್ರತಿಷ್ಠಿಸಬೇಕು. ಯಜ್ಞೇಶನಿಗೆ ಎರಡು ತಲೆ, ಏಳು ಬಾಹುಗಳು, ನಾಲ್ಕುಕೊಂಬುಗಳು ಇದ್ದು ಮೈಬಣ್ಣವು ಕರಗಿಸಿದ ಚಿನ್ನದಂತೆ ಇರುತ್ತದೆ. ಈ ಸ್ವಾಮಿ ಶಂಖ, ಚಕ್ರ, ಆಜ್ಯಪಾತ್ರೆ, ಸ್ರುಕ್, ಸ್ರುವ ಮತ್ತು ಜುಹು ಹಿಡಿದಿರುತ್ತಾನೆ ಸ್ರುಕ್, ಸ್ರುವ ಮತ್ತು ಜುಹು ಯಜ್ಞಗಳಲ್ಲಿ ತುಪ್ಪವನ್ನು ಸುರಿಯಲು ಬಳಸುವ ಬಗೆಬಗೆಯ ಸೌಟುಗಳು. ಯಜ್ಞೇಶನಿಗೆ ಮೂರು ಪಾದಗಳು. ಈತನು ಸಕಲ ಆಭರಣಗಳಿಂದಲೂ ಅಲಂಕರಿಸಲ್ಪಟ್ಟಿರುತ್ತಾನೆ. ಎಡ ಮತ್ತು ಬಲ ಪಾರ್ಶ್ವಗಳಲ್ಲಿ ಸ್ವಾಹಾ ಮತ್ತು ಸ್ವಧಾ ದೇವಿಯರು ನಿಂತಿರುತ್ತಾರೆ.

## ೯. ಕಪಿಲ / ಜಗನ್ನಾಥ

ಪ್ರದ್ಯುಮ್ನನು ಪ್ರಾಪಂಚಿಕ ಬಂಧನಗಳಿಂದ ಮುಕ್ತನಾದ ನಂತರ ಕಪಿಲನ ರೂಪವನ್ನು ಪಡೆದುಕೊಂಡ ಎನ್ನುತ್ತಾರೆ. ಕಪಿಲ ಮೂರ್ತಿಗೆ ಗಡ್ಡ ಇರಬೇಕು. ಪದ್ಮಾಸನದಲ್ಲಿ ಕುಳಿತಿದ್ದು ಬಳಿಯಲ್ಲಿ ಕಮಂಡಲುವಿರಬೇಕು. ಧ್ಯಾನದಲ್ಲಿರುವಂತೆ ಕಣ್ಮುಚ್ಚಿರಬೇಕು. ಜಟಾಮಂಡಲವು ಶಿರದ ಸುತ್ತಲೂ ಹರಡಿರಬೇಕು. ಭುಜಗಳು ಎತ್ತರದಲ್ಲಿದ್ದು ಪ್ರಾಣಾಯಾಮದಲ್ಲಿ ಬಹುವಾದ ಸಾಧನೆಯನ್ನು ಕಪಿಲ ಮಾಡಿದ್ದನ್ನು ತೋರುವಂತಿರಬೇಕು. ಕಪಿಲನ ಪಾದಗಳು ಪದ್ಮಗಳಂತೆ ಭಾಸವಾಗಬೇಕು. ಜಿಂಕೆಯ ಚರ್ಮದ ಉಡುಗೆ ಧರಿಸಿದ್ದು ಯಜ್ಞೋಪವೀತ ಧರಿಸಿರಬೇಕು. ಒಂದು ಹಸ್ತವನ್ನು ಮೊಣಕಾಲಿನ ಮೇಲೆ ಇರಿಸಿಕೊಂಡಿರಬೇಕು. ಈತನು ಸಾಂಖ್ಯಶಾಸ್ತ್ರದ ಉಪದೇಶಕನಾದ ಕಪಿಲನೇ ಎಂದು ಗುರ್ತಿಸುತ್ತಾರೆ.

ವೈಖಾನಸ ಆಗಮದಲ್ಲಿ ಬೇರೆಯ ತೆರನಾದ ವಿವರಣೆ ದೊರೆಯುತ್ತದೆ.

**ಆಗ್ನೇಯಾಂ ಕಪಿಲಂ ಪ್ರಾಙ್ಮುಖಂ ಶ್ವೇತಾಭೋಽಷ್ಟಹಸ್ತೋ ದಕ್ಷಿಣೇ ನೈಕಮಭಯ ಮನ್ಯಚ್ಚಕ್ರಾಸಿಹಲಧರೋ ವಾಮೇನೈಕಂ ಕಟ್ಯಾವಲಂಬಿತಮನ್ಯಚ್ಛಂಖ ಪಾಶದಂಡಧರೋ ರಕ್ತವಾಸಾಸ್ಸಾವಿತ್ರೀಯುಕ್ತಂ ಕಪಿಲಂ ಮುನಿವರಂ ಶುದ್ಧಂ ವೇದರೂಪಿಣಮಿತಿ ।**

ಕಪಿಲನು ಆವರಣ ದೇವತೆ. ಮೊದಲ ಆವರಣದ ಆಗ್ನೇಯ ಮೂಲೆಯಲ್ಲಿ ಈತನಿರುತ್ತಾನೆ. ಈತನು ವೇದಗಳ ಸಾಕಾರ ರೂಪು ಎಂದು ಹೇಳಿ, ಪೂರ್ವಕ್ಕೆ ಮುಖಮಾಡಿಕೊಂಡಿರಬೇಕೆಂಬ ನಿಯಮ ಹೇಳುತ್ತಾರೆ. ಈತನಿಗೆ ಎಂಟು ತೋಳುಗಳು. ಬಲ ನಾಲ್ಕು ತೋಳುಗಳಲ್ಲಿ ಕೆಳಗಿನಿಂದ ಮೇಲಕ್ಕೆ ಕ್ರಮವಾಗಿ ಅಭಯಮುದ್ರೆ, ಚಕ್ರ, ಖಡ್ಗ, ಹಲ ಇರುತ್ತವೆ. ಎಡ ನಾಲ್ಕು ತೋಳುಗಳಲ್ಲಿ ಕೆಳಗಿನಿಂದ ಮೇಲಕ್ಕೆ ಕ್ರಮವಾಗಿ ವರದ ಮುದ್ರೆ, ಶಂಖ, ಚಕ್ರ, ಪಾಶ, ದಂಡ ಧರಿಸಿರುತ್ತಾನೆ. ಈತನು ಕೆಂಪು ವಸ್ತ್ರ ಧರಿಸಿರುತ್ತಾನೆ. ಗಾಯತ್ರೀ ಮತ್ತು ಸಾವಿತ್ರಿಯರು ಈ ಸ್ವಾಮಿಯ ಇಕ್ಕೆಲಗಳಲ್ಲೂ ಇರುತ್ತಾರೆ.

ಸಾತ್ವತ ಸಂಹಿತೆಯಲ್ಲಿ (೧೨ : ೨೫ - ೨೭) ಈ ರೀತಿಯ ಧ್ಯಾನ ಶ್ಲೋಕವೊಂದಿದೆ

**ಫುಲ್ಲರಕ್ತಾಬ್ಜವಿಭವಂ ದೇವತಾಧ್ಯಾತ್ಮ ಸೂತ್ರಕಮ್**
**ಧ್ಯಾಯೇದಭಯ ಪಾಣಿಂ ತಂ ಕಪಿಲಂ ತೇಜಸಾಂ ನಿಧಿಮ್ ||**
**ಯೋಽಸೌ ಸರ್ವೇಶ್ವರೋ ದೇವಃ ಸಾಕ್ಷಿಭೂತೋ ವ್ಯವಸ್ಥಿತಃ**
**ಸ್ಫಟಿಕೋಪಲವದ್ಭಾವಾನ್ ಸ್ವಶಕ್ತ್ಯುತ್ಥಾನ್ ಬಿಭರ್ತಿ ಚ ||**
**ಅವಿದ್ಯಾವಿಷ್ಟಚೇತಾನಾಂ ತು ಭಕ್ತಾನಾಂ ಸಪ್ತ (ಂಪ) ದಾಪ್ತಯೇ**
**ತಮಸಾದಿಂ ಜಗನ್ನಾಥಂ ಬಹಿ ಸ್ಥೂಲತರಾತ್ಮನಾಮ್ ||**

ಕೆಂದಾವರೆಯ ಮೈಕಾಂತಿಯುಳ್ಳವನೂ, ಎಲ್ಲಾ ದೇವತೆಗಳನ್ನು ಆಧ್ಯಾತ್ಮ ತತ್ವದಿಂದ ಪೋಣಿಸಲು ಸಾಧ್ಯವಾಗುವಂತಹ ಸೂತ್ರಪ್ರಾಯನೂ, ಸಕಲ ಜೀವಿಗಳಿಗೂ ಅಭಯವನ್ನು ನೀಡಲು ಸದಾ ಸಿದ್ಧವಾಗಿರುವ ಅಭಯ ಹಸ್ತ ಉಳ್ಳವನೂ, ತೇಜಸ್ಸಿನ ನಿಧಿಯೂ ಆಗಿರುವ ಕಪಿಲ ದೇವನು ಸಕಲರ ಅಂತರಂಗದಲ್ಲಿ ಹುದುಗಿದ್ದಾನೆ. ಸಾಕ್ಷೀ ಭೂತಚೇತಸನಾಗಿರುವ ಈ ಸ್ವಾಮಿಯು ಭಕ್ತರಿಗೆ ಸಂಪತ್ತನ್ನು ಕರುಣಿಸಿ ಅಜ್ಞಾನವನ್ನು ಹೊಡೆದೋಡಿಸಿ, ಜನರನ್ನು ಧಾರ್ಮಿಕ ಪಥದಲ್ಲಿ ನಡೆಸುವನಾದುದರಿಂದ ಈತನೇ ಜಗನ್ನಾಥ .

ಇದರಿಂದ ಕಪಿಲನಿಗೇ ಜಗನ್ನಾಥ ಎಂಬ ಹೆಸರೂ ಇದೆ ಎಂಬುದು ಸ್ಪಷ್ಟವಾಗಿ ಗೊತ್ತಾಗುತ್ತದೆ.

ಈಶ್ವರ ಸಂಹಿತೆ (೨೪ : ೩೪೭ - ೩೫೧) ಯಲ್ಲಿ ಜಗನ್ನಾಥನೇ ಪ್ರಥಮ ವೇದಾರ್ಥರಹಸ್ಯೋಪದೇಶಕನಾಗಿಯೂ ಮತ್ತು ವೇದಗಳನ್ನು ನಾಲ್ಕಾಗಿ ವಿಭಜಿಸಿದ ಆದ್ಯನಾಗಿಯೂ ಹೇಳಲಾಗಿದೆ :

**ವಹನ್ಸ್ವೆ ವಾಮಹಸ್ತೇನ ಸರ್ವ ಶಾಸ್ತ್ರಾರ್ಥ ಪುಸ್ತಕಮ್**
**ದಕ್ಷಿಣೇನ ತು ಶಾಸ್ತ್ರಾರ್ಥ ಮಾದಿಶಂಶ್ಚ ಯಥಾ ಸ್ಥಿತಮ್ ||**
**ಯುಗಾನುಸಾರಿ ಭೇದಾನಾಮಭೇದಜನನಾಯ ಚ**
**ವಿಭಜಂಸ್ತು ಚತುರ್ಧಾ ವೈ ವೇದಮೇಕಂ ತ್ರಿಕಾಲವಿತ್ ||**
**ದಾನಧರ್ಮರತಾನಾಂ ಚ ಯಾಗಯಜ್ಞಾನು ಯಾಜಿನಾಮ್**
**ತಪಸ್ಸ್ವಾಧ್ಯಾಯಾಯಸಕ್ತಾನಾಂ ಮುಕ್ತಾನಾಮ ಪುನರ್ಭವಾತ್ ||**
**ಸಂರಕ್ಷಣಾಯ ಯೋಗ್ಯತ್ವ ವಿಜ್ಞಾನವ್ಯಕ್ತಿಯೋಽಪಿ ಚ**
**ಸಮುದೇತಿ ಜಗನ್ನಾಥಸ್ತೇಷಾಂ ಹೃತ್ಕಮಲಾವನೇಃ ||**

**ಮನೋವಾಜಿನಮಾತ್ರಮ್ಯ ತ್ವಾದಾಯಾತ್ಮಗುಣಾಯುಧಾನ್**

**ನೂನಮುತ್ಪಾಟಯತ್ಯಾಶು ಜನ್ಮಾಂತರ ಶತೋತ್ಥಿತಮ್ ॥**

ಎಡ ಹಸ್ತದಲ್ಲಿ ಎಲ್ಲಾ ಶಾಸ್ತ್ರಗಳ ಮಥಿತಾರ್ಥವಾದ ಗ್ರಂಥವನ್ನು ಇರಿಸಿಕೊಂಡು, ಬಲಹಸ್ತವನ್ನು ಉಪದೇಶ ಮುದ್ರೆಯಲ್ಲಿರಿಸಿಕೊಂಡು ಸದಾ ಇತರರ ಉನ್ನತಿಗಾಗಿಯೇ ಉಪದೇಶವನ್ನು ನಿರ್ವಹಿಸುತ್ತಿರುವ ಈ ಸ್ವಾಮಿಯು ತ್ರಿಕಾಲಗಳಿಗೂ ಒಂದೇ ಆಗಿದ್ದ ವೇದವನ್ನು ಯುಗಾನುಸಾರ ಅಂತರವನ್ನು ಜನರ ಸ್ತರಕ್ಕೆ, ಸಾಮರ್ಥ್ಯಕ್ಕೆ ಅನುಕೂಲವಾಗಿ ನಾಲ್ಕಾಗಿ ವಿಭಜಿಸಿ, ಯುಗಕ್ಕೆ ಸೂಕ್ತವಾಗುವಂತೆ ಅವುಗಳ ಬಳಕೆಯನ್ನು ರೂಪಿಸಿ, ದಾನ ಧರ್ಮಗಳು, ಯಜ್ಞಯಾಗಾದಿಗಳು ಸಕ್ರಮವಾಗಿ ನಡೆಯುವಂತೆ, ಋತ್ವಿಕರು, ತಪಸ್ಸು, ಸ್ವಾಧ್ಯಾಯ ಸಂಪನ್ನರಾದವರಿಗೆ ನಿಯಮಪಾಲನೆ ಸುಲಭವಾಗುವಂತೆ ರೂಪಿಸಿದ. ಈ ರೀತಿಯಾಗಿ ಜನರೆಲ್ಲರ ಸಂರಕ್ಷಣೆ, ಅವರ ಸಾಮರ್ಥ್ಯಕ್ಕೆ ಅನುಗುಣವಾಗುವ ಸಿದ್ಧತೆ ಮಾಡಿದ್ದರಿಂದ ಈತನು ಜಗನ್ನಾಥ. ಇದರಿಂದ ಮನುಷ್ಯರಾದವರು ನೂರಾರು ಜನ್ಮಗಳ ಪುಣ್ಯಫಲವನ್ನು ಒಮ್ಮೆಲೆಗೇ ಗಳಿಸಿದಂತಾಯಿತು.

ಇದು ಜಗನ್ನಾಥ ಅಥವ ಕಪಿಲನ ಮೂರ್ತಿ ರೂಪ ಕಲ್ಪನೆಗಳು.

ಪರಾಶರ ಸಂಹಿತೆ (೧೩ : ೧ - ೪)ರಲ್ಲಿ ಜಗನ್ನಾಥನನ್ನು ಅರ್ಧ ಬಲರಾಮ ಅರ್ಧ ಸುಭದ್ರೆಯ ಸ್ವರೂಪವೆಂದು (**ಜಗನ್ನಾಥೋ ವಾಮಾಂಗಂ ಬಲರಾಮಾರ್ಧರೂಪಿಣಮ್ । ಸುಭದ್ರಾಖ್ಯ ಮಹಾಲಕ್ಷ್ಮೀ ರೂಪ ಸಾರ್ಧಾಂಗವೇಷಿಣಮ್ ॥**) ವಿವರಿಸಿರುವುದೂ ಉಂಟು. ಈ ಬಗ್ಗೆ ಜಿಜ್ಞಾಸೆಯನ್ನು ಇಲ್ಲಿಗೇ ಬಿಟ್ಟು ಕಪಿಲ ಮತ್ತು ಜಗನ್ನಾಥ ಪ್ರತ್ಯೇಕ ಮೂರ್ತಿಗಳೆಂಬ ಭಾವನೆಯಿಂದ ಈ ವಿವರಣೆ ಇಲ್ಲಿಗೇ ನಿಲ್ಲಿಸುತ್ತೇವೆ.

## ೧೦. ತ್ರೈಲೋಕ್ಯಮೋಹನ

(ಅ) ಹಯಶೀರ್ಷ ಸಂಹಿತೆಯಲ್ಲಿ (ಆದಿ ೨೨ : ೧ - ೩) ಈ ರೀತಿಯ ಧ್ಯಾನವಿದೆ

**ಅಷ್ಟಬಾಹುಂ ಬುಧಃ ಕುರ್ಯಾತ್ ದೇವಂ ತ್ರೈಲೋಕ್ಯಮೋಹನಮ್ ॥**

**ಗರುಡಾಸನಗಂ ದೇವಂ ಪ್ರಥಮೇ ವಯಸಿ ಸ್ಥಿತಮ್**

**ಚಕ್ರಂ ಖಡ್ಗಂ ಚ ಮುಸಲಂ ಸಾಂಕುಶಂ ದಕ್ಷಿಣೇ ನ್ಯಸೇತ್ ॥**

**ಶಂಖಂ ಶಾರ್ಙ್ಗಂ ಗದಾಂ ಪಾಶಂ ವಾಮಹಸ್ತೇ ತು ವಿನ್ಯಸೇತ್**

**ಲಕ್ಷ್ಮೀಃ ಸರಸ್ವತೀ ಕಾರ್ಯೇ ಪದ್ಮ ವೀಣಾಸಮನ್ವಿತೇ ॥**

ಎಂಟು ತೋಳುಗಳಿದ್ದು ಗರುಡನ ಮೇಲೆ ಕುಳಿತಿರುವ ಈ ಸ್ವಾಮಿಗೆ ಒಂದೇ ಮುಖ, ಬಲಪಾರ್ಶ್ವದಲ್ಲಿ ಚಕ್ರ, ಖಡ್ಗ, ಮುಸಲ ಒನಕೆ, ಅಂಕುಶಗಳು ಎಡಪಾರ್ಶ್ವದಲ್ಲಿ ಶಂಖ, ಶಾರ್ಙ್ಗ, ಗದೆ, ಪಾಶ ಇವನ್ನು ಹಸ್ತಗಳಲ್ಲಿ ಧರಿಸಿರುತ್ತಾನೆ. ಲಕ್ಷ್ಮೀ - ಸರಸ್ವತಿಯರು ಪದ್ಮ ಮತ್ತು ವೀಣೆಗಳನ್ನು ಹಿಡಿದು ಸ್ವಾಮಿಯ ಇಕ್ಕೆಲಗಳಲ್ಲೂ ಕುಳಿತಿರುತ್ತಾರೆ.

(ಆ) ವಿಷ್ಣುಧರ್ಮೋತ್ತರ ಪುರಾಣದಲ್ಲಿ ವಿವರಿಸಿರುವ ಮೂರ್ತಿಯು ವೈಕುಂಠನಾಥ ಮೂರ್ತಿಗೆ ಹೋಲುವಂತಿದೆ. ಅಲ್ಲಿಯ ಧ್ಯಾನವು ಇಂತಿದೆ :

**ಮುಖಾನಿ ಪೂರ್ವವತ್ತಸ್ಯಾಪ್ಯಥ ತ್ರೈಲೋಕ್ಯಮೋಹನಃ**

**ಸ ಷೋಡಶಭುಜಸ್ತಾರ್ಕ್ಷ್ಯಾರೂಢಃ ಪ್ರಾಗ್ವಚ್ಚತುರ್ಭುಜಾ ॥**

**ಗದಾ ಚಕ್ರಾಂಕುಶೌ ಬಾಣಂ ಶಕ್ತಿಶ್ಚಕ್ರಂ ವರಂ ಕ್ರಮಾತ್**

**ದಕ್ಷೇಷು ಮುದ್ಗರಃ ಪಾಶಶ್ಶಾರ್ಙ್ಗ ಶಂಖಾಬ್ಜ ಕುಂಡಿಕಾ**

**ಶೃಂಗೀ ವಾಮೇಷು ಹಸ್ತೇಷು ಯೋಗಮುದ್ರಾಕರದ್ವಯಮ್**

**ನರಂ ಚ ನಾರಸಿಂಹ ಚ ಸೂಕರಂ ಕಪಿಲಾನನಮ್**

ಸ್ವಾಮಿಗೆ ನಾಲ್ಕು ಮುಖಗಳು. ತೋಳುಗಳು ಹದಿನಾರು. ಎಂಟು ಬಲಪಾರ್ಶ್ವದ ಹಸ್ತಗಳಲ್ಲಿ ಮೇಲಿನಿಂದ ಕೆಳಕ್ಕೆ ಗದೆ, ಚಕ್ರ, ಅಂಕುಶ, ಬಾಣ, ಶಕ್ತಿ, ಅಕ್ಷಮಾಲೆ ಏಳನೆಯ ಹಸ್ತವು ಅಭಯ ಹಸ್ತವಾಗಿರುತ್ತದೆ. ಏಳು ಎಡಹಸ್ತಗಳಲ್ಲಿ ಅದೇ ಕ್ರಮದಲ್ಲಿಯೇ ಮುದ್ಗರ, ಪಾಶ, ಧನುಸ್ಸು, ಶಂಖ, ಪದ್ಮ, ಕಮಂಡಲ ಮತ್ತು ಶೃಂಗ (ಕೊಂಬು) ಉಳಿದ ಎಡ ಮತ್ತು ಬಲ ಹಸ್ತಗಳಲ್ಲಿ ಯೋಗಮುದ್ರೆಯಲ್ಲಿರಬೇಕು. ಮುಖಗಳು ಮನುಷ್ಯ, ನರಸಿಂಹ, ವರಾಹ ಮತ್ತು ಕಪಿಲರದಾಗಿರಬೇಕು. ಇದು ಇನ್ನೊಂದು ಬಗೆಯ ತ್ರೈಲೋಕ್ಯಮೋಹನ ಮೂರ್ತಿ.

## ೧೧. ಅನಂತ

(ಅ) ಈ ಮೂರ್ತಿಯನ್ನು ವಿಷ್ಣುವಿನ ಹಾಸಾಗಿರುವ ಶೇಷ ಅನಂತನೊಂದಿಗೆ ತಪ್ಪಾಗಿ ತಿಳಿಯಬಾರದು. ಇದು ವಿಷ್ಣುವಿನ ರೂಪಗಳಲ್ಲಿ ಒಂದು.

ವಿಷ್ಣುಧರ್ಮೋತ್ತರ ಪುರಾಣದಲ್ಲಿ ಈ ರೀತಿಯ ಧ್ಯಾನ ದೊರೆಯತ್ತದೆ :

**ಅನಂತೋಽನಂತರೂಪಸ್ತು ಹಸ್ತೈ ರ್ದ್ವಾದಶಭಿರ್ಯುತಃ**

**ಅನಂತ ಶಕ್ತಿಸಂವೀತೋ ಗರುಡಸ್ಥಶ್ಚತುರ್ಮುಖಃ ॥**

**ಗದಾಖಡ್ಗಬಾಣಚಕ್ರಾಢ್ಯೋ ವಜ್ರಾಂಕುಶವರಾನ್ವಿತಃ**

**ಶಂಖ ಖೇಟಂ ಧನುಃ ಪದ್ಮಂ ದಂಡಪಾಶೌ ಚ ವಾಮತಃ ॥**

ದೈವೀಕವಾದ ಸಕಲ ಶಕ್ತಿಗಳನ್ನೂ ಪಡೆದುಕೊಂಡಿರುವ ಈ ಮೂರ್ತಿಗೆ ಹಲವು ರೂಪಗಳುಂಟು. ಗರುಡನ ಮೇಲೆ ಆಸೀನನಾಗಿರುವ ಈ ಮೂರ್ತಿಗೆ ನಾಲ್ಕು ಮುಖಗಳು, ಹನ್ನೆರಡು ತೋಳುಗಳುಂಟು. ಬಲ ಪಾರ್ಶ್ವದಲ್ಲಿ ಇರಬೇಕಾಗಿರುವ ಆಯುಧಗಳು ಇವು: ವರದ, ಗದೆ, ಖಡ್ಗ, ಚಕ್ರ, ವಜ್ರ, ಅಂಕುಶ ಮತ್ತು ಎಡಹಸ್ತದಲ್ಲಿರಬೇಕಾಗಿರುವ ಆಯುಧಗಳು ಇವು : ಧನುಸ್ಸು, ಪದ್ಮ, ಖೇಟಕ, ಶಂಖ, ದಂಡ, ಪಾಶ. ಅನಂತ ಶಕ್ತಿ ಇರುವ ವಿಷ್ಣುಮೂರ್ತಿ ಈತನು ಎಂದು ನಂಬಲಾಗುತ್ತದೆ.

(ಆ) ಭವಿಷ್ಯೋತ್ತರ ಪುರಾಣದ ಅನಂತ ಕಲ್ಪದಲ್ಲಿ ಈ ಧ್ಯಾನ ದೊರೆಯುತ್ತದೆ -

**ನವಾಮ್ರ ಪಲ್ಲವಾಭಾಸಂ ಪಿಂಗ ಭ್ರೂಶ್ಮಶ್ರುಲೋಚನಮ್**

**ದಕ್ಷಿಣೋರ್ಧ್ವಕರೇ ಪದ್ಮಂ ಶಂಖಂ ತಸ್ಯಾಪ್ಯಧಃ ಕರೇ ॥**

**ಚಕ್ರ ಮೂರ್ಧ್ವ ಕರೇ ವಾಮೇ ಗದಾಂ ತಸ್ಯಾಪ್ಯಧಃ ಕರೇ**

**ಬಿಭ್ರತಂ ಪುಂಡರೀಕಾಕ್ಷಂ ಫಣಸಪ್ತಾನ್ವಿತಂ ಭಜೇ ॥**

ಮಾವಿನ ಚಿಗುರಿನಂತಹ ತೆಳುವಾದ ಹಳದಿಯ ಮೈಬಣ್ಣದ ಶರೀರಚ್ಛಾಯೆಯಲ್ಲಿ ಅದೇ ಬಣ್ಣದಲ್ಲಿಯೇ ಇರುವ ಗಡ್ಡ, ಮೀಸೆ, ಹುಬ್ಬುಗಳೊಂದಿಗೆ ಕಣ್ಣುಗಳನ್ನು ಪಡೆದಿದ್ದು, ತಾವರೆಯ ಹೂವಿನಂತೆ ಅರಳಿದ ವಿಶಾಲವಾದ ಕಣ್ಣುಗಳೊಂದಿಗೆ ಏಳು ಫಣೆಗಳ ನೆರಳಿನಲ್ಲಿ ಅನಂತಮೂರ್ತಿಯು ಕುಳಿತಿರುತ್ತಾನೆ. ಆತನು ಕೆಳಬಲಹಸ್ತದಲ್ಲಿ ಶಂಖವನ್ನು, ಮೇಲಿನ ಬಲ ಹಸ್ತದಲ್ಲಿ ಪದ್ಮವನ್ನು ಅದೇ ರೀತಿಯಾಗಿ ಎಡ ಕೆಳಹಸ್ತದಲ್ಲಿ ಗದೆಯನ್ನು, ಮೇಲಿನ ಹಸ್ತದಲ್ಲಿ ಚಕ್ರವನ್ನು ಧರಿಸಿರುತ್ತಾನೆ.

ಇಂಥಾ ಚತುರ್ಭುಜ ಅನಂತ ಮೂರ್ತಿಯನ್ನು ನಾನು ಸದಾ ಭಜಿಸುತ್ತೇನೆ.

ಈ ಸ್ವರೂಪವು ಶೇಷ ಅನಂತನದು ವಿಷ್ಣುವಿನದಲ್ಲ ಎಂಬುದಾಗಿ ಕೆಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

## ೧೨. ವಿಶ್ವರೂಪ

(ಅ) ಹಲವು ಬಗೆಯ ರೂಪಗಳಲ್ಲಿ ಈ ದೇವನನ್ನು ಧ್ಯಾನಿಸಲಾಗಿದೆ. ಒಂದು ಕೊರಳು ನಾಲ್ಕು ಮುಖಗಳೊಂದಿಗೆ ಇರುವ ಈ ರೂಪದ ವರ್ಣನೆ ವಿಷ್ಣುತಿಲಕದಲ್ಲಿ (೬ : ४೨೮ - ४೩೫) ಲಭಿಸುತ್ತದೆ :

**ದ್ವಿಹಸ್ತಮೇಕ ಕಂಠಂ ಚ ಚತುರ್ದಿಕ್ಷು ಚತುರ್ಮುಖ ||**
**ವಾಸುದೇವಾದಿವದನಂ ಪ್ರಾಗಾದಿಷು ಯಥಾಕ್ರಮಮ್**
**ವಾಸುದೇವನನಾದೂರ್ಧ್ವಂ ದೇವಾನಾಂ ವದನಾನ್ಯಪಿ ||**
**ಋಷೀಣಾಂ ವದನಾನಿ ಸ್ಯುಃ ಸಂಕರ್ಷಣ ಮುಖೋಪರಿ**
**ಪ್ರದ್ಯುಮ್ನ ವದನಾ ದೂರ್ಧ್ವಂ ದೈತ್ಯರಕ್ಷೋ ಮುಖಾನ್ಯಪಿ ||**
**ಅನಿರುದ್ಧ ಮುಖಾದೂರ್ಧ್ವಂ ನಾಗಗಂಧರ್ವ ಕಿನ್ನರಾಃ**
**ತತ್ತನ್ಮುಖಾ ನಾಮುಪರಿ ವಿವಿಧಾನ್ಯಾನನಾನ್ಯಪಿ ||**
**ಪಿಶಾ ಚಾಜಗರ ವ್ಯಾಘ್ರ ನರ ಪಕ್ಷಿಮುಖಾನ್ಯಪಿ**
**ಕ್ರಮೇಣ ಕಲ್ಪನೀಯಾನಿ ತತ್ತದೂರ್ಧ್ವಂ ಪುನಃ ಪುನಃ ||**
**ಕಂಠೋಧೋ ದೇಶ ಮಾರಭ್ಯ ಪಾದಾಂತಂ ಪುರುಷಃ ಸ್ಥಿತಃ**
**ವಿಶ್ವಮೂರ್ತಿರಿಯಂ ಬ್ರಹ್ಮನ್ ಕಥಿತ ಕಮಲಾಪತೇಃ ||**
**ಪ್ರಕಾರಮಿಹ ವಕ್ಷ್ಯಾಮಿ ಸ್ವತಂತ್ರ ಪರತಂತ್ರಯೋಃ**
**ಕರ್ಷಣಾದಿಕ್ರಿಯಾಪೂರ್ವಂ ವಿಮಾನೇ ಗರ್ಭಮಂದಿರೇ ||**
**ಸರ್ವಾವರಣಭೂಯಿಷ್ಠೇ ಬಲಿಪೀಠಾದಿ ಸಂಯುತೇ**
**ಪ್ರತಿಷ್ಠಿತ ಸ್ವತಂತ್ರಃ ಸ್ಯಾಪ್ತರಿವಾರಸಮೇಧಿತಃ ||**

ಒಂದೇ ಕಂಠ ಎರಡು ಬಾಹು ಒಂದು ಶರೀರದ ಈ ಸ್ವಾಮಿಗೆ ನಾಲ್ಕು ದಿಕ್ಕುಗಳಿಗೂ ನಾಲ್ಕು ಮುಖಗಳಿರುತ್ತವೆ. ಅವು ಕ್ರಮವಾಗಿ ವಾಸುದೇವ, ಸಂಕರ್ಷಣ, ಅನಿರುದ್ಧ, ಪ್ರದ್ಯುಮ್ನರ ಮುಖಗಳಾಗಿರುತ್ತವೆ. ವಾಸುದೇವನ ಮುಖದ ಮೇಲೆ ಎಲ್ಲಾ ದೇವತೆಗಳ ಮುಖಗಳು ಒಂದರ ಮೇಲೆ ಒಂದರಂತೆ ಇರುತ್ತವೆ. ಸಂಕರ್ಷಣನ ಮುಖದ ಮೇಲೆ ಒಂದರ ಮೇಲೆ ಒಂದರಂತೆ ಋಷಿಗಳ ಮುಖಗಳು ಇರುತ್ತವೆ. ಪ್ರದ್ಯುಮ್ನನ ಮುಖದ ಮೇಲೆ ದೈತ್ಯರು ಮತ್ತು ರಾಕ್ಷಸರ ಮುಖಗಳಿರುತ್ತವೆ. ಅನಿರುದ್ಧನ ಮುಖದ ಮೇಲೆ ಪಿಶಾಚಿ, ಅಜಗರ, ವ್ಯಾಘ್ರ, ನರ, ಪಕ್ಷಿ ಮುಂತಾದುವುಗಳ ಮುಖಗಳನ್ನು ಕಲ್ಪಿಸಬೇಕು. ಕಂಠದಿಂದ ಕೆಳಕ್ಕೆ ಪುರುಷ ರೂಪವಿರಬೇಕು. ಈ ಸ್ವಾಮಿಯನ್ನು ವಿಶ್ವರೂಪ ಎಂದು ಕರೆಯುತ್ತಾರೆ. ಈ ಸ್ವಾಮಿಗೆ ಸ್ವತಂತ್ರವಾಗಿ ಆಗಲಿ ಅಥವ ಇನ್ನೊಂದು ವೈಷ್ಣವಾಲಯದಲ್ಲಿ ಪರತಂತ್ರ ದೇವನಾಗಿ ಆಗಲಿ ಆಲಯವನ್ನು ನಿರ್ಮಿಸಿ ಪ್ರತಿಷ್ಠಿಸಬಹುದು. ಈ ಸ್ವಾಮಿಯನ್ನು ಸ್ವತಂತ್ರ ದೇವನಾಗಿ ನಿರ್ಮಿಸುವಾಗ ಯಥಾ ಪ್ರಕಾರ ಭೂಶುದ್ಧಿಯನ್ನು ನಿರ್ವಹಿಸಿ ಗರ್ಭಮಂದಿರ ಮತ್ತು ವಿಮಾನವನ್ನು ನಿರ್ಮಿಸಬೇಕು.

ಸ್ವಾಮಿಯನ್ನು ಯಾವ ಆವರಣದಲ್ಲಿಯಾದರೂ ನಿರ್ಮಿಸಬಹುದು. ಬಲಿಪೀಠಾದಿಗಳನ್ನು ಪರಿವಾರದೇವತೆಗಳನ್ನು ಕ್ರಮವಾಗಿ ರೂಪಿಸಬೇಕು.

(ಆ) ಹಯಶೀರ್ಷ ಸಂಹಿತೆಯಲ್ಲಿ (ಆದಿ ೨೨ : ೫ - ೯) ಇಪ್ಪತ್ತು ತೋಳುಗಳಿರುವ ವಿಶ್ವರೂಪಮೂರ್ತಿಯ ಧ್ಯಾನವು ಹೀಗೆ ದೊರೆಯುತ್ತದೆ :

**ವಿಂಶಬಾಹುಂ ವಿಶ್ವರೂಪಂ ಕುರ್ಯಾತ್ತಲ್ಲಕ್ಷಣಂ ಶೃಣು**
**ಚಕ್ರಂ ಖಡ್ಗಂ ಚ ಮುಸಲಂ ಅಂಕುಶಂ ಪಟ್ಟಿಶಂ ತಥಾ ||**
**ಮುದ್ಗರಂ ಚ ತಥಾಂಕುಶಂ ಶಕ್ತಿಂ ಶೂಲಂ ಶರಂ ತಥಾ**
**ದಕ್ಷಿಣೇ ತು ಪ್ರದದ್ಯಾದ್ವೈ ವಾಮೇ ತು ಶೃಣು ಸಾಂಪ್ರತಮ್ ||**
**ಶಂಖಂ ಶಾರ್ಙ್ಗಂ ಗದಾಂ ಪಾಶಂ ತೋಮರಂ ಲಾಂಗಲಂ ತಥಾ**
**ಪರಶುಂ ಛುರಿಕಾಂ ದಂಡಂ ಚರ್ಮಪ್ರಕ್ಷೇಪಣಂ ತಥಾ ||**
**ನೃಸಿಂಹೋಕ್ತಂ ಪರಂ ಮಾನಂ ವಿಶ್ವರೂಪಸ್ಯಕೀರ್ತಿತಮ್**
**ಚತುರ್ಮುಖಂ ದಕ್ಷಿಣೋऽಸ್ಯ ತ್ರಿಣೇತ್ರಂ ವಾಮತೋ ನ್ಯಸೇತ್ ||**
**ಸ್ತುನ್ವಂತೋ ಮುನಯಃ ಕಾರ್ಯಾ ವಿದ್ರವಂತೋ ನಿಶಾಚರಃ**

ನಾಲ್ಕು ಮುಖಗಳಿರುವ ಈ ಸ್ವಾಮಿಯು ಇಪ್ಪತ್ತು ತೋಳುಗಳನ್ನು ಪಡೆದುಕೊಂಡಿರುತ್ತಾನೆ. ಬಲಪಾರ್ಶ್ವದ ತೋಳುಗಳಲ್ಲಿ ಈ ರೀತಿಯಾಗಿ ಆಯುಧಗಳನ್ನು ಹಿಡಿದಿರುತ್ತಾನೆ - ಚಕ್ರ, ಖಡ್ಗ, ಮುಸಲ, ಅಂಕುಶ, ಯೋಗ (ಪಟ್ಟಿ) ಮುದ್ರೆ, ಮುದ್ಗರ, ಅಂಕುಶ, ಶಕ್ತಿ, ಶೂಲ, ಬಾಣ. ಎಡಪಾರ್ಶ್ವದ ತೋಳುಗಳಲ್ಲಿ ಶಂಖ, ಶಾರ್ಙ್ಗ, ಗದೆ, ಪಾಶ, ತೋಮರ, ನೇಗಿಲು, ಪರಶು, ಕತ್ತಿ (ಛುರಿಕಾ), ದಂಡ, ಗುರಾಣಿ ಹಿಡಿದಿರುತ್ತಾನೆ. ನರಸಿಂಹ ದೇವರ ನಿರ್ಮಾಣದಲ್ಲಿ ಅನುಸರಿಸುವ ಕ್ರಮದಲ್ಲಿಯೇ ಈ ಸ್ವಾಮಿಯನ್ನೂ ರೂಪಿಸಬೇಕು. ಈ ಸ್ವಾಮಿಯನ್ನು ಮುನಿಗಳು, ನಿಶಾಚರರ ಕಾಟದಿಂದ ಬಳಲಿದವರು ಪೂಜಿಸಬಹುದು.

(ಇ) ಇದೇ ಸ್ವಾಮಿಯನ್ನು ರೂಪಮಂಡನದಲ್ಲಿ ವಿವರಿಸಿದ್ದರೂ ಅಲ್ಲಿಯ ಆಯುಧ ವಿನ್ಯಾಸವು ಬದಲಾಗಿರುತ್ತದೆ. ಅಲ್ಲಿಯ ಧ್ಯಾನವು ಇಂತಿದೆ :

**ವಿಂಶತ್ಯಾ ಹಸ್ತಕೈರ್ಯುಕ್ತೋ ವಿಶ್ವರೂಪಶ್ಚತುರ್ಮುಖಃ**
**ಪತಾಕಾ ಹಲಶಂಖೌ ಚ ವಜ್ರಾಂಕುಶರಾಸ್ತಥಾ ||**
**ಚಕ್ರಂ ಚ ಬೀಜಪೂರಂ ಚ ವರೋ ದಕ್ಷಿಣ ಬಾಹುಷು**
**ಪತಾಕಾ ದಂಡಪಾಶೌ ಚ ಗದಾಖಡ್ಗೋ ತ್ಪಲಾನಿ ಚ ||**
**ಶೃಂಗೀ ಮುಸಲಮಕ್ಷಂ ಚ ಕ್ರಮಾತ್ಸ್ಯುರ್ವಾಮಬಾಹುಷು**
**ಹಸ್ತದ್ವಯೇ ಯೋಗಮುದ್ರಾ ಚೈವ ಗರುಡೋಪರಿಸ್ಥಿತಃ ||**
**ಕ್ರಮಾನ್ನರನೃಸಿಂಹ ಸ್ತ್ರೀ ವರಾಹ ಮುಖವನ್ಮುಖೈಃ**

ಈ ಮೂರ್ತಿ ವೈಕುಂಠನಾಥನಂತೆ ಗರುಡನ ಮೇಲೆ ಕುಳಿತಿದ್ದು ನಾಲ್ಕು ಮುಖಗಳನ್ನು, ಇಪ್ಪತ್ತು ಬಾಹುಗಳನ್ನು ಹೊಂದಿರುತ್ತಾನೆ. ಒಂದು ಬಲಹಸ್ತ ಮತ್ತು ಅದಕ್ಕೆ ಸಮನಾದ ಎಡಹಸ್ತ ಚಾಚಿ ಪತಾಕ ಹಸ್ತಮುದ್ರೆಯಲ್ಲಿರಬೇಕು. ಇನ್ನೊಂದು ಎಡ ಮತ್ತು ಅದಕ್ಕೆ ಸಮನಾದ ಬಲಹಸ್ತ ಚಾಚಿ ಯೋಗಮುದ್ರೆಯಲ್ಲಿರ ಬೇಕು. ಇನ್ನುಳಿದ ಬಲ ಹಸ್ತಗಳಲ್ಲಿ ಆಯುಧಗಳು ಈ ರೀತಿಯಾಗಿ ಇರಬೇಕು ಹಲ, ಶಂಖ, ವಜ್ರ, ಅಂಕುಶ, ಬಾಣ, ಚಕ್ರ, ನಿಂಬೆಹಣ್ಣು, ವರದಮುದ್ರೆ. ಎಡಹಸ್ತಗಳಲ್ಲಿ ದಂಡ, ಪಾಶ, ಗದೆ, ಖಡ್ಗ, ಪದ್ಮ, ಶೃಂಗ, ಮುಸಲ ಮತ್ತು ಅಕ್ಷಮಾಲೆ.

(ಈ) ಪಾದ್ಮ ಸಂಹಿತೆಯಲ್ಲಿ (ಕ್ರಿ ೧೬ : ೧೭ - ೨೮) ರಲ್ಲಿ ವಿಶ್ವರೂಪವು ಭೂಮಿಯಿಂದ ಆಕಾಶದ ತನಕ ಇರುವ ಸ್ಥಳವನ್ನೆಲ್ಲಾ ಆಕ್ರಮಿಸಿರುವ ರೂಪ. ಆದ್ದರಿಂದ ಅಗಣಿತ ಮುಖಗಳು, ಅಗಣಿತ ಹಸ್ತಗಳು ಇರುವ ಈ ಮೂರ್ತಿಗೆ ಆರಾಧನೆಯ ನಿಮಿತ್ತವಾಗಿ ಮೂವ್ವತ್ತೊಮ್ಮರು ಮುಖಗಳು, ನಾಲ್ಕರಿಂದ ನಲವತ್ತರ ಒಳಗಾಗಿ ಹಸ್ತಗಳೂ ರೂಪಿಸಿ ತೋರಬೇಕೆಂದು ಸೂಚಿಸಿದೆ.

(ಉ) ವಿಷ್ವಕ್ಸೇನ ಸಂಹಿತೆಯಲ್ಲಿ (೧೧ : ೨೩೬ - ೨೫೪) ಮೂರು ಕಣ್ಣುಗಳು, ಮೂರು ಕಾಲು, ೧೫೦೦ ತೋಳು, ೧೦೮ ತೋಳು, ೮ ಅಥವ ೭ ತೋಳು ಇರಬಹುದು ಎಂದು ಹೇಳಲಾಗಿದೆ.

ಈಶ್ವರ ಸಂಹಿತೆಯಲ್ಲಿ (೨೪ : ೩೩೭ - ೩೪೪) ರಲ್ಲಿ ಈ ಸ್ವಾಮಿ ಶ್ಯಾಮಲ ವರ್ಣದಲ್ಲಿದ್ದು ಕೇವಲ ಎರಡು ತೋಳುಗಳನ್ನು ಪಡೆದಿರುವಂತೆ ವಿವರಿಸಲಾಗಿದೆ.

ವಿಶ್ವರೂಪಮೂರ್ತಿಗೆ ದೇವಾಲಯವನ್ನು ನಿರ್ಮಿಸುವ ಬಗ್ಗೆ ಕಪಿಂಜಲ ಸಂಹಿತೆಯಲ್ಲಿ (೯ : ३८ - ३೯) ಈ ರೀತಿ ಹೇಳಿದೆ :

**ವಿಶ್ವರೂಪಂ ನೃಸಿಂಹಂ ಚ ವಟಶಾಯಿನಮೇವ ಚ**
**ಜಾಮದಗ್ನ್ಯಮಿತಿ ಜ್ಞೇಯಮುಗ್ರಕರ್ಮ ದ್ವಿಜೋತ್ತಮ ||**
**ನ ಜನಾಭಿಮುಖಂ ಕುರ್ಯಾನ್ನದೀತೀರೇಷು ಮಂದಿರಮ್**
**ಪರ್ವತಾಭಿಮುಖಂ ಶ್ರೇಷ್ಠಂ ಪ್ರಾಸಾದಂ ಕುರುತೇ ಸದಾ ||**

ವಿಶ್ವರೂಪ, ನೃಸಿಂಹ, ವಟಪತ್ರಶಾಯಿ, ಪರಶುರಾಮ ಮುಂತಾದವರಿಗಾಗಿ ನಿರ್ಮಿಸುವ ಆಲಯಗಳು ಜನರು ವಿರಳವಾಗಿ ಓಡಾಡುವ ಸ್ಥಳಗಳಲ್ಲಿ ಪರ್ವತಾಭಿಮುಖವಾಗಿ ನಿರ್ಮಿಸುವುದು ಶ್ರೇಷ್ಠ. ಏಕೆಂದರೆ ಈ ಮೂರ್ತಿಗಳ ಪೂಜೆಯನ್ನು ಶಾಸ್ತ್ರವು ಉಗ್ರಕರ್ಮ ಎಂದು ಪರಿಗಣಿಸುತ್ತದೆ.

## ೧೩. ಹಂಸಮೂರ್ತಿ

(ಅ) ಪರಾಶರ ಸಂಹಿತೆಯಲ್ಲಿ ಈ ಮೂರ್ತಿಯನ್ನು 'ಹಂಸಗ್ರೀವಂ ಹರಿಂ' ಎಂದೇ ವರ್ಣಿಸಲಾಗಿದೆ. ಈ ಸ್ವಾಮಿಯು, ಶ್ರೀದೇವಿ - ಭೂದೇವಿ ಸಹಿತವಾಗಿದ್ದು ನಾಲ್ಕು, ಎಂಟು ಹತ್ತು ಅಥವ ಹನ್ನೆರಡು ಆಯುಧಗಳನ್ನು ಧರಿಸಿರಬಹುದೆಂಬ ವಿವರಣೆ ದೊರೆಯುತ್ತದೆ.

**ಚಕ್ರ ಶಂಖ ಗದಾ ಪದ್ಮ ಶಾರ್ಙ್ಗ ಬಾಣಾಸಿಧಾರಿಣಮ್**
**ವರಹಸ್ತಧರಂ ಶಾಂತಂ ಸರ್ವಾಭರಣ ಭೂಷಿತಮ್ ||**
**ಶ್ರೀಭೂಮಿ ಸಹಿತಂ ದೇವಂ ಶ್ರೀವತ್ಸಾದ್ಯಾದಿ ಧಾರಣಮ್**
**ಪರಾತ್ಪರಮಜಂ ಸತ್ವಂ ಹಂಸಗ್ರೀವಮಹಂ ಭಜೇ ||**

ಎಂಟು ತೋಳುಗಳಿದ್ದು ಚಕ್ರ ಶಂಖ ಗದೆ ಪದ್ಮ ಶಾರ್ಙ್ಗ ಬಾಣ ಕತ್ತಿ ಮತ್ತು ವರದಮುದ್ರೆ ಹಸ್ತಗಳಲ್ಲಿ ಧರಿಸಿರುತ್ತಾನೆ. ಶ್ರೀದೇವಿ, ಭೂದೇವಿಗಳೊಂದಿಗೆ ಇದ್ದು ಸಕಲಾಭರಣಗಳಿಂದ ಅಲಂಕೃತವಾಗಿರುತ್ತಾನೆ. ಸ್ವಾಮಿಗೆ ಹಂಸದ ಮುಖವಿದ್ದು ನರದೇಹವಿರುತ್ತದೆ. ಶ್ರೀವತ್ಸ ಮುಂತಾದುವನ್ನು ಧರಿಸಿರುತ್ತಾನೆ. ಇಂತಹ ಹಂಸ ಮೂರ್ತಿಯನ್ನು ನಾನು ಭಜಿಸುತ್ತೇನೆ.

(ಆ) ಎರಡೇ ತೋಳುಗಳಿದ್ದು ಶಂಖ - ಚಕ್ರ ಧಾರಿಯಾಗಿರಬಹುದೆಂದು ಪರಾಶರ ಸಂಹಿತೆ (೧೫ : ೭) ಹೇಳುತ್ತದೆ **ಚಕ್ರ ಶಂಖ ಧರಂ ದೇವಂ ಸರ್ವಾಲಂಕಾರ ಸಂಯುತಮ್। ಶ್ರೀ ಭೂಮಿ ಸಹಿತಂ ದೇವಂ ಹಂಸರೂಪಂ ಹರಿಂ ಭಜೇ: ||**

(ಇ) ಚಕ್ರ ಪದ್ಮಗದಾ ಶಂಖ ಚಾಪ ಖಡ್ಗಾದಿ ಧಾರಿಣಮ್
ವಜ್ರಾದಿ ಹಲ ಶೂಲೇಷು ಪಾಶ ಖೇಟಧರಂ ವಿಭುಮ್ ॥
ಶಕ್ತಿಕುಂತಧರಂ ದೇವಂ ಸರ್ವಾಭರಣ ಭೂಷಿತಮ್
ಜ್ಞಾನಾನಂದ ಮಯಂ ಶಾಂತಂ ಭಜೇ ಹಂಸಹರಿಂ ಸದಾ ॥

(ಪರಾಶರ ಸಂಹಿತೆ ೨೪ : ೫೭ - ೫೮)

ಚಕ್ರ, ಪದ್ಮ, ಗದೆ, ಶಂಖ, ಬಿಲ್ಲು, ಖಡ್ಗ, ವಜ್ರ, ನೇಗಿಲು, ಶೂಲ, ಪಾಶ, ಖೇಟಕ, ಶಕ್ತಿ, ಕುಂತ, ಅಭಯಮುದ್ರೆ ಧರಿಸಿರುವ ಈ ಹಂಸ ಮೂರ್ತಿಯು ಶಾಂತ ಸ್ವರೂಪನಾಗಿದ್ದು ಜ್ಞಾನಾನಂದ ಮಯನಾಗಿರುತ್ತಾನೆ.

(ಉ) ಈ ಮೂರ್ತಿಯು ಹಂಸರೂಪದಲ್ಲಿಯೇ ಇರುತ್ತಾನೆ ಎಂದು ಈಶ್ವರಸಂಹಿತೆಯಲ್ಲಿ (೨೪ : ೨೩೧ - ೨೩೫) ಮತ್ತು ಸಾತ್ವತ ಸಂಹಿತೆ (೧೨ : ೪೦ - ೩) ಧ್ಯಾನಿಸಲಾಗಿದೆ.

ಭಾಸಯಂತಂ ಜಗನ್ನಾಥಂ ಸ್ಮರೇತ್ ಹೃತ್ಕಮಲಾದಿಷು
ಹಂಸಮೂರ್ತಿಮಥಾತ್ಮಾನಂ ಜ್ಞಾನಯಜ್ಞಭುಜಂ ಸ್ಮರೇತ್ ॥
ಕುಂದೇಂದು ಸ್ನಿಗ್ಧಕಾಂತಿಂ ಚ ಹೇಮಕುಂಡಂ ಮಹಾತನುಮ್
ರಜಸ್ತಮೋಂಘ್ರಿಂ ಸತ್ಸತ್ತ್ವ ವಿಗ್ರಹಂ ಪರಮೇಶ್ವರಮ್ ॥
ಧರ್ಮಾಧರ್ಮೇಕ್ಷಣಂ ಧ್ಯಾಯೇದಗ್ನೀಷೋಮಾತ್ಮಕೇನ ತು
ದಕ್ಷಿಣೋತ್ತರ ಸಂಸ್ಥೇನ ಪಕ್ಷಯುಗ್ಮೇನ ರಾಜಿತಮ್ ॥
ಬಹಿಸ್ತಮೇವೋದಕಸ್ಥಂ ತುಹಿನಾಚಲ ಸನ್ನಿಭಮ್
ಧ್ಯಾತ್ವಾರ್ಚಯೇತ್ತು ವಿಧಿವದ್ಧಂ ಸವಿಗ್ರಹ ಮಚ್ಯುತಮ್ ॥

ಜ್ಞಾನ ಯಜ್ಞ ಸಂಕೇತನಾಗಿ ಸ್ವಾಮಿಯು ಹಂಸಾಕಾರದಲ್ಲಿರುತ್ತಾನೆ. ಮಲ್ಲಿಗೆಯಂತೆ ಬಿಳುಪಾಗಿ ಅಥವ ಯಜ್ಞಕುಂಡದಂತೆ ಚಿನ್ನದ ಬಣ್ಣದ ಮೈಕಾಂತಿಯಲ್ಲಿ ಮಹಾಕಾಯ ನಾಗಿದ್ದು ಸತ್‌ಸತ್ವದ ಮೂರ್ತಿಯಾಗಿದ್ದು ಧರ್ಮಾಧರ್ಮಗಳ ಸಾಕ್ಷೀ ರೂಪನಾಗಿ, ಎರಡು ರೆಕ್ಕೆಗಳೊಂದಿಗೆ ದಕ್ಷಿಣೋತ್ತರವಾಗಿ ನಿಂತಿರುವ ಈ ಸ್ವಾಮಿಯು ನೀರಿನಲ್ಲಿ ಹಿಮಾಲಯದಂತೆ ಶುಭ್ರನಾಗಿರುತ್ತಾನೆ. ಅಚ್ಯುತನನ್ನು ಈ ರೀತಿಯ ಹಂಸರೂಪದಲ್ಲಿ ವಿಧಿವತ್ತಾಗಿ ಮನಸಾ ಧ್ಯಾನಿಸಿ, ಅರ್ಚಿಸುತ್ತೇನೆ.

(ಊ) ಪಾಂಚರಾತ್ರ ಮಂತ್ರಸಾರದಲ್ಲಿ ಈ ಸ್ವಾಮಿಯು ನರರೂಪದಲ್ಲಿರುವಂತೆ ಧ್ಯಾನಿಸಿರುವ ಈ ರೂಪವನ್ನು ನೋಡಿ :

ಧ್ಯಾಯೇದ್ರವೀಂದು ಕರ ಮಿಂದು ಸಹಸ್ರ ಲಕ್ಷ
ಕಾಂತಿಂ ಪ್ರಿಯಾಸಹಿತಮಾಸ್ಥಿತ ಮಿಂದು ಬಿಂಬೇ ।
ಶಂಖಾರಿ ದೋರ್ದ್ವಯ ಮುದರ್ಕಮಹೇಂದು ಬಿಂಬಾ
ತ್ಸಂಸಿಚ್ಯಮಾನ ಮಮೃತೇನ ರಮಾಧಿನಾಥಮ್ ॥

ಶ್ರೀ ಹಂಸಮೂರ್ತಿಯು ಕೋಟ್ಯಾಂತರ ಚಂದ್ರರ ಸಮಾನಕಾಂತಿಯ ಶರೀರ ಛಾಯೆಯಿಂದ ತನ್ನ ಪ್ರೇಯಸಿಯಾದ ಶ್ರೀದೇವಿಯೊಂದಿಗೆ ಚಂದ್ರಬಿಂಬದಲ್ಲಿರುತ್ತಾನೆ. ಈ ಸ್ವಾಮಿಗೆ ನಾಲ್ಕು ತೋಳುಗಳು, ಬಲಭಾಗದ ಕೆಳಹಸ್ತದಲ್ಲಿ ಚಕ್ರ, ಮೇಲಿನ ಹಸ್ತದಲ್ಲಿ ಸೂರ್ಯನನ್ನು ಧರಿಸಿರುತ್ತಾನೆ. ಎಡಭಾಗದ ಕೆಳಹಸ್ತದಲ್ಲಿ ಶಂಖವನ್ನ ಮೇಲಿನ ಹಸ್ತದಲ್ಲಿ ಚಂದ್ರನನ್ನು ಧರಿಸಿರುತ್ತಾನೆ.





ಚಿತ್ರ ೯೮ : ಹಂಸ ಮೂರ್ತಿ - ೧

ಈತನು ಚಂದ್ರಬಿಂಬದಲ್ಲಿದ್ದು ಅಲ್ಲಿಂದ ಅಮೃತವನ್ನು ಭಕ್ತಸಮೂಹದ ಮೇಲೆ ಸುರಿಸುತ್ತಿರುತ್ತಾನೆ. ಈ ರೂಪದಲ್ಲಿರುವ ರಮಾನಾಥನಾದ ಶ್ರೀ ಹಂಸಸ್ವಾಮಿಯನ್ನು ಧ್ಯಾನಿಸಬೇಕು. ಈ ಸ್ವಾಮಿಯು ಸೂರ್ಯ ಚಂದ್ರರನ್ನು ಧರಿಸಿದಂತೆ ಅಲ್ಲದೆ ಕೇವಲ ಎರಡು ತೋಳುಗಳೊಂದಿಗೆ ರೂಪಿಸುವುದೇ ವಾಡಿಕೆಯಲ್ಲಿದೆ.

## ೧೪. ನಾಮತ್ರಯದೇವ

**ಅಚ್ಯುತಾನಂತ ಗೋವಿಂದರೂಪಿಣಂ ವಿಭುಮವ್ಯಯಮ್**
**ಭಜೇऽಹಂ ವಾಸುದೇವಂ ತಂ ಶ್ರೀ ಭೂನೀಳಾದಿ ಸಂಯುತಮ್ ॥**
**ಕಿರೀಟಾದಿ ವಿಭೂಷಾಂಗಂ ಬ್ರಹ್ಮರುದ್ರಾದಿ ಸೇವಿತಮ್**
**ಚಕ್ರಾಬ್ಜ ಶಂಖಾಸಿಗದಾಧನುರ್ಬಾಣ ಸಮನ್ವಿತಮ್ ॥**

(ಪರಾಶರ ಸಂಹಿತೆ, ೨೩)

ಚಕ್ರ, ಪದ್ಮ, ಶಂಖ, ಖಡ್ಗ, ಗದೆ, ಧನುಸ್ಸು, ಬಾಣ ಮತ್ತು ಅಭಯ ಮುದ್ರೆ ಇವನ್ನು ಹಸ್ತಗಳಲ್ಲಿ ಧರಿಸಿರುವ ಶ್ರೀದೇವಿ, ಭೂದೇವಿ, ನೀಳಾದೇವಿಯರೊಂದಿಗೆ, ಕಿರೀಟಾದಿ ನಾನಾ ಆಭೂಷಣಗಳ ಅಲಂಕಾರದೊಂದಿಗೆ ಇರುವ ಈ ಸ್ವಾಮಿಯನ್ನು ಬ್ರಹ್ಮ ರುದ್ರರು ಸೇವಿಸಿ ಪೂಜಿಸುತ್ತಿರುತ್ತಾರೆ. ಈ ಸ್ವಾಮಿಯು ಅಚ್ಯುತ - ಅನಂತ - ಗೋವಿಂದರ ಸಂಯುಕ್ತ ಸ್ವರೂಪವಾದುದರಿಂದ ನಾಮತ್ರಯದೇವನೆಂದು ಕರೆಯುತ್ತಾರೆ.

## ೧೫. ಶಿಂಶುಮಾರ ಮೂರ್ತಿ

**ಶಿಂಶುಮಾರಃ ಸ್ಫುರಂತ್ತಾರಾನಿಭಕಾಂತಿ ಶ್ಚತುರ್ಭುಜಃ**
**ಶಂಖಚಕ್ರ ವರಾಭೀತಿಲ ಸತ್ಪಾಣಿ ಸ್ತ್ರಯೀಮಯಃ ॥**
**ಜ್ಯೋತಿಶ್ಚಕ್ರಾಧಾರ ಪುಚ್ಛಶ್ರಿತ ದೇವಗಣೋಜ್ವಲಃ**
**ಕಾಲರೂಪೀ ಸದಾಧ್ಯೇಯೋ ಭಕ್ತಾಭೀಷ್ಟಪ್ರದೋ ಹರಿಃ ॥**

(ಮಯೂಖದಾನ ಖಂಡ)

ಶಿಂಶುಮಾರಮೂರ್ತಿಯಾದ ವಿಷ್ಣುವು ನಕ್ಷತ್ರದಂತೆ ಪ್ರಕಾಶಿಸುತ್ತಿರುವ ಬಿಳುಪಾದ ಮೈಕಾಂತಿಯಿಂದ, ಋಗ್‌ಯಜುಸ್ ಸಾಮಗಳನ್ನು ಮೂರು ವೇದಗಳ ರೂಪವಾಗಿ, ಆಕಾಶದಲ್ಲಿ ನಕ್ಷತ್ರ ಪುಂಜಗಳು ಗೋಳಾಕಾರವಾಗಿ ಪ್ರದಕ್ಷಿಣೆ ನಡೆಸಲು ಪಕ್ಷಿಗಳಿಗೆ ಬಾಲದಂತೆ ಆಧಾರವಾಗಿ ದೇವತಾ ಸಮೂಹದಿಂದ ಸೇವಿಸಲ್ಪಡುತ್ತಿರುತ್ತನೆ. ನಾಲ್ಕು ತೋಳುಗಳನ್ನು ಪಡೆದಿರುವ ಈ ಸ್ವಾಮಿಯು ಕಾಲರೂಪನಾಗಿದ್ದಾನೆ. ಬಲ ಭಾಗದ ಕೆಳಹಸ್ತದಲ್ಲಿ ಅಭಯ ಮುದ್ರೆಯನ್ನು ಮೇಲಿನ ಹಸ್ತದಲ್ಲಿ ಚಕ್ರವನ್ನು, ಎಡ ಭಾಗದ ಕೆಳಹಸ್ತದಲ್ಲಿ ವರದ ಮುದ್ರೆಯನ್ನು , ಮೇಲಿನ ಹಸ್ತದಲ್ಲಿ ಶಂಖವನ್ನು ಧರಿಸಿರುತ್ತಾನೆ.

ಇಂತಹ ರೂಪದಲ್ಲಿ ಭಕ್ತರ ಇಷ್ಟಾರ್ಥಗಳನ್ನು ಪೂರೈಸುವ ಶಿಂಶುಮಾರಮೂರ್ತಿ ರೂಪದ ವಿಷ್ಣುವನ್ನು ಧ್ಯಾನಿಸುತ್ತೇನೆ.

## ೧೬. ಮನ್ಮಥ

(ಅ) ಪ್ರದ್ಯುಮ್ನನ ಇನ್ನೊಂದು ಹೆಸರೇ ಮನ್ಮಥ. ಪ್ರದ್ಯುಮ್ನನು ಶಕ್ತಿಮಯವ್ಯೂಹದ ಅಧಿಪತಿ ಎಂಬುದನ್ನು ಈಗಾಗಲೇ ತಿಳಿದ್ದೇವೆ. ಶಿಲ್ಪರತ್ನಂನಲ್ಲಿ ಈ ರೀತಿಯ ವಿವರ ದೊರೆಯುತ್ತದೆ



ಚಿತ್ರ ೯೯ : ಹಂಸಮೂರ್ತಿ - ೨

ವಕ್ಷ್ಯೇ ಮನಸಿಜಂ ದೇವಮಿಕ್ಷು ಚಾಪಧರಂ ಸದಾ
ಪಂಚಪುಷ್ಪಮಯಾಂ ಬಾಣಾಂ ಬಿಭ್ರಾಣಂ ದಕ್ಷಿಣೇ ಕರೇ ||
ಹರಿತಂ ಲೋಹಿತಂ ವಾಪಿ ದಿವ್ಯಾಭರಣ ಭೂಷಿತಮ್
ಕಿಂಚಿಜ್ಜಟಿಲ ಸಂಸ್ಥಾನ ಪುಷ್ಪಮಾಲಾಭಿರಂಚಿತಮ್ ||
ಪೀತವಸ್ತ್ರಂ ವಸನಂ ಚ ವಸಂತೇನ ಸಮನ್ವಿತಮ್
ನಾನಾ ಕುಸುಮ ಭೂಷೇಣ ಕಂಕೇಲೀಪತ್ರವಾಸಸಾ ||
ದಾಡಿಮೀ ಕರ್ಣಪೂರೇಣ ಕಂಠೇ ವಕುಳಮಾಲಿನಾ
ಪರೇಕ ಸ್ವರ್ಣ ಸಂಕಾಶೈಃ ಕೃತಶೇಖರ ಶೋಭಿನಾ ||
ಪಾರ್ಶ್ವೇ ಚಾಶ್ವಮುಖಾಃ ಕಾರ್ಯೋ ಮಕರಧ್ವಜಧಾರಕಃ
ಪ್ರೀತಿರ್ದಕ್ಷಿಣ ಭಾಗೇಸ್ಯ ಭೋಜನೋಪಸ್ಕರಾನ್ವಿತಾ ||
ವಾಮಭಾಗೇ ರತಿಃ ಕಾರ್ಯಾ ರಂತುಕಾಮ ನಿರಂತರಮ್
ಶಯ್ಯಾ ತು ಸಾರಸ್ಯೆಯುಕ್ತಾ ವಾಟಿಕಾ ನಂದನಂ ವನಮ್ ||

ಕಬ್ಬಿನ ಜಲ್ಲೆಯ ಬಿಲ್ಲನ್ನು ಎಡಹಸ್ತದಲ್ಲಿ ಹಿಡಿದು ಐದು ಪುಷ್ಪಬಾಣಗಳನ್ನು ಬಲಹಸ್ತದಲ್ಲಿ ಹಿಡಿದಿರುವ ಮನ್ಮಥನು ಹಸಿರಾದ ಅಥವ ಕೆಂಪಾದ ಮೈಕಾಂತಿಯಿಂದ ಪ್ರಕಾಶವಂತನಾಗಿರುತ್ತಾನೆ. ಬಗೆಬಗೆಯ ಆಭರಣಗಳಿಂದ ಸಿಂಗರಿಸಿಕೊಂಡಿದ್ದು ಸುಂದರವಾದ ಹೂಮಾಲೆಯನ್ನು ಧರಿಸಿರುತ್ತಾನೆ. ವಸಂತ ಋತುವಿನ ಮೂರ್ತಿರೂಪವಾದ ವಸಂತನು ಮನ್ಮಥನ ಸ್ನೇಹಿತ. ಅವನು ಈತನ ಒಂದು ಬದಿಗೆ ನಿಂತಿರುತ್ತಾನೆ. ವಸಂತನು ಬಗೆಬಗೆಯ ಹೂ ಎಲೆಗಳಿಂದ ಅಲಂಕೃತನಾಗಿರುತ್ತಾನೆ. ಅಶೋಕ ವೃಕ್ಷದ ಎಲೆಗಳು ಇವನ ಉಡುಗೆ. ಕೇಸರ ಹೂಗಳ ಮಾಲೆಯು ಕೊರಳಲ್ಲಿರಬೇಕು. ಕಿವಿಯಲ್ಲಿ ದಾಳಿಂಬೆ ಹೂಗಳೆರಡು ಕರ್ಣಾಭರಣಗಳಾಗಿ ತೂಗಾಡುತ್ತಿರುತ್ತವೆ. ಇನ್ನೊಂದು ಬದಿಗೆ ಕುದುರೆಯ ಮುಖದವನು ಮನ್ಮಥನ ಮಕರ ಧ್ವಜವನ್ನು ಹಿಡಿದು ನಿಂತಿರಬೇಕು. ಜನರಲ್ಲಿ ಕಾಮವನ್ನು ಉದ್ರೇಕಿಸುವುದು ಈ ಮಕರಧ್ವಜ ವಾಹಕನ ಕೆಲಸ. ಮನ್ಮಥನ ಇಕ್ಕೆಲಗಳಲ್ಲಿ ಪ್ರೀತಿ ಮತ್ತು ರತಿ ದೇವಿಯರು ಇರುತ್ತಾರೆ. ಬಲಪಾರ್ಶ್ವದಲ್ಲಿರುವ ಪ್ರೀತಿಯ ಬಳಿ ಭೋಜನ ವ್ಯಂಜನಗಳು ಇದ್ದರೆ, ಎಡಪಾರ್ಶ್ವದಲ್ಲಿರುವ ರತಿಯು ನಾಥನನ್ನು ತನ್ನತ್ತ ಆಕರ್ಷಿಸಿ ಅವನಿಗಾಗಿ ಕಾಯುತ್ತಿರುವಂತಿರುತ್ತಾಳೆ. ಮನ್ಮಥನ ಬಳಿಯೇ ಶಯ್ಯಾತಲ್ಪವಿದ್ದು ಸಾರಸ ಹಕ್ಕಿಗಳು ನಂದನವನದಲ್ಲಿ ಹಾರಾಡುತ್ತಿರುವಂತೆ ಇರಬೇಕು.

(ಆ) ವಿಷ್ಣುಧರ್ಮೋತ್ತರ ಪುರಾಣದಲ್ಲಿ ಬೇರೊಂದು ತೆರನಾದ ಧ್ಯಾನವಿದೆ :

ಕಾಮದೇವಸ್ತು ಕರ್ತವ್ಯೋ ರೂಪೇಣ ಪ್ರತಿಮೋ ಭುವಿ
ಅಷ್ಟಬಾಹುಃ ಪ್ರಕರ್ತವ್ಯ ಶ್ಯಂಖ ಪದ್ಮ ವಿಭೂಷಣಃ ||
ಚಾಪಬಾಣ ಕರಶ್ಚೈವ ಮದೋದಂಚಿತ ಲೋಚನಃ
ರತಿಃ ಪ್ರೀತಿ ಸ್ತಥಾ ಶಕ್ತಿರ್ಮದಶಕ್ತಿ ಸ್ತಥೋಜ್ಜ್ವಲಾ ||
ಚತಸ್ರಸ್ತಸ್ಯ ಕರ್ತವ್ಯಾಃ ಪತ್ನ್ಯೋ ರೂಪಮನೋಹರಾಃ
ಚತ್ವಾ ರಶ್ಚ ಕರಾಸ್ತಸ್ಯ ಕಾರ್ಯಾ ಭಾರ್ಯಾಸ್ತನೋಪಗಾಃ ||

**ಕೇತುಶ್ಚ ಮಕರಃ ಕಾರ್ಯಃ ಪಂಚಬಾಣ ಮುಖೋ ಮಹಾನ್**

ಕಾಮದೇವನು ಎಂಟು ಬಾಹುಗಳನ್ನು ಪಡೆದಿದ್ದು ನಾಲ್ಕರಲ್ಲಿ ಶಂಖ, ಚಕ್ರ, ಧನುಸ್ಸು, ಬಾಣಗಳನ್ನು ಹಿಡಿದಿರಬೇಕು. ಇನ್ನು ಉಳಿದ ನಾಲ್ಕು ಕೈಗಳನ್ನು ಅಪರೂಪ ಸೌಂದರ್ಯವತಿಯರಾದ ಅವನ ನಾಲ್ಕು ಮಂದಿ ಪತ್ನಿಯರಾದ ರತಿ, ಪ್ರೀತಿ, ಶಕ್ತಿ ಮತ್ತು ಮದಶಕ್ತಿ ಇವರ ಸ್ತನಗಳ ಮೇಲಿರಬೇಕು. ಅವನ ಕಣ್ಣಲ್ಲಿ ಪ್ರೇಮ ಕಾಣಿಸುತ್ತಿರಬೇಕು. ಅವನ ಧ್ವಜದಲ್ಲಿರುವ ಮಕರ (ಮೊಸಳೆ) ಐದು ಪುಷ್ಪ ಬಾಣಗಳನ್ನು ಹಿಡಿದಿರುವಂತೆ ಚಿತ್ರಿಸಬೇಕು.

## ೧೭. ವ್ಯಾಸ

ಸಾತ್ವತ ಸಂಹಿತೆ (೧೨ : ೧೫೪ - ೧೫೭) ಮತ್ತು ಪೌಷ್ಕರ ಸಂಹಿತೆ (೩೪ : ೭೩)ಗಳಲ್ಲಿ ವೇದವ್ಯಾಸರು ವಿಷ್ಣುವಿನ ಅವತಾರವೆಂದು ಹೇಳಲಾಗದೆ. ಯೋಗಪಟ್ಟದೊಂದಿಗೆ ಕುಳಿತಿದ್ದು ಎರಡು ಭುಜಗಳನ್ನು ಹೊಂದಿರುತ್ತಾರೆ. ಬಲ ಹಸ್ತದಲ್ಲಿ ಶಾಸ್ತ್ರೋಪದೇಶದ ಮುದ್ರೆ ಇರುತ್ತದೆ **ದಕ್ಷಿಣೇನ ಶಾಸ್ತ್ರಾರ್ಥಂ ಆದಿಶನ್**. ಎಡಹಸ್ತದಲ್ಲಿ ಪುಸ್ತಕ ಇರುತ್ತದೆ **ವಹನ್ ವಾಮಹಸ್ತೇನ ಸರ್ವಶಾಸ್ತ್ರಾರ್ಥ ಪುಸ್ತಕಮ್**. ವ್ಯಾಸರ ಮೈಬಣ್ಣ ಅಗಸೇ ಹೂವಿನಂತೆ **ಅತಸೀ ಕುಸುಮದಂತೆ** ಇರುತ್ತದೆ.

ವಿಷ್ಣುಧರ್ಮೋತ್ತರ ಪುರಾಣದಲ್ಲಿ ವ್ಯಾಸರ ರೂಪವಿವರಣೆ ಇಂತು ದೊರೆಯುತ್ತದೆ

**ಕೃಶಃ ಕೃಷ್ಣತನುರ್ವ್ಯಾಸಃ ಪಿಂಗಲೋಕಿತಿ ಜಟಾಧರಃ**

**ಸುಮಂತು ರ್ಜೈಮಿನಿಃ ಪೈಲೋ ವೈಶಂಪಾಯನ ಏವ ಚ ॥**

**ತಸ್ಯ ಶಿಷ್ಯಾಶ್ಚ ಕರ್ತವ್ಯಾಶ್ಚತ್ವಾರಃ ಪಾರಿಪಾರ್ಶ್ವಕಾಃ**

ತೆಳುವಾದ ಮೈಯ್ಯ ಕಪ್ಪುಕಾಂತಿಯ ದಟ್ಟಕಂದು ಬಣ್ಣದ ಜಟೆಗಳನ್ನು ಧರಿಸಿದ್ದು ಸ್ವಾಮಿಯ ಇಕ್ಕೆಲಗಳಲ್ಲಿ ಪ್ರಖ್ಯಾತ ಶಿಷ್ಯರಾದ ಸುಮಂತು, ಜೈಮಿನಿ, ಪೈಲ ಮತ್ತು ವೈಶಂಪಾಯನರು ಇರುತ್ತಾರೆ.

## ೧೮. ದಧಿವಾಮನ ಮೂರ್ತಿ

**ಧ್ಯಾಯೇತ್ಸು ಶುಕ್ಲ ಮರವಿಂದ ದಳಾಯತಾಕ್ಷಂ**
**ಸೌವರ್ಣ ಪಾತ್ರ ದಧಿಭೋಜ್ಯ ಮಥಾಮೃತಂ ಚ ।**
**ದೋರ್ಭ್ಯಾಂ ದಧಾನ ಮಖಿಲೈಶ್ಚ ಸುರೈ ಸ್ಸಮೇತಂ**
**ಶೀತಾಂಶು ಮಂಡಲಗತಂ ರಮಯಾ ಸಮೇತಮ್ ॥**

(ಪಾಂಚರಾತ್ರಾಗಮ)

ಬಿಳುಪಾದ ಮೈಕಾಂತಿಯ, ತಾವರೆಯ ದಳಗಳಂತೆ ನೀಳವಾದ ಕಣ್ಣುಗಳೊಂದಿಗೆ ತನ್ನನ್ನು ಸೇವಿಸುತ್ತಿರುವ ಸಕಲ ದೇವತೆಗಳೊಂದಿಗೆ ತನ್ನ ಪ್ರೇಯಸಿ ರಮಾದೇವಿಯೊಂದಿಗೆ ಚಂದ್ರಮಂಡಲದಲ್ಲಿ ಇರುವ ಈ ದೇವನಿಗೆ ಎರಡು ತೋಳುಗಳು ಮಾತ್ರವೇ ಇರುತ್ತವೆ. ಈ ಸ್ವಾಮಿ ತನ್ನ ಎರಡು ಹಸ್ತಗಳಲ್ಲೂ ಬಂಗಾರದ ಪಾತ್ರೆಗಳನ್ನು ಹಿಡಿದಿರುತ್ತಾನೆ. ಅವುಗಳಲ್ಲಿ ಬಲಹಸ್ತದಲ್ಲಿ ಮೊಸರನ್ನು (ದಧ್ಯನ್ನ), ಎಡಹಸ್ತದಲ್ಲಿ ಅಮೃತವಿರುತ್ತದೆ.

ಭಕ್ತರಿಗೆ ದಧ್ಯನ್ನ - ಅಮೃತಗಳನ್ನು ಅನುಗ್ರಹಿಸುತ್ತಿರುವ ಶ್ರೀದಧಿವಾಮನ ಮೂರ್ತಿಯನ್ನು ಈ ರೂಪದಲ್ಲಿ ಫಲಸಿದ್ಧಿಗಳಿಗಾಗಿ ಧ್ಯಾನಿಸಬೇಕು.



ಚಿತ್ರ ೧೦೧ : ದಧಿವಾಮನ ಮೂರ್ತಿ

## ೧೯. ಅಶ್ವತ್ಥನಾರಾಯಣಮೂರ್ತಿ

ಶ್ವೇತವರ್ಣಂ ಸಲಕ್ಷ್ಮೀಕಂ ಭುಜಾಷ್ಟಕ ವಿಭೂಷಿತಮ್
ಶಂಖಚಕ್ರಧರಂ ದೇವಂ ಪೀತವಾಸಸ ಮಚ್ಯುತಮ್ ॥
ಅಭಯಂ ವರದಂ ಶಾಂತಂ ಖಡ್ಗ ಖೇಟಕ ಧಾರಿಣಮ್
ಧನುರ್ಬಾಣ ಸಮಾಯುಕ್ತಂ ಚಿಂತಯೇ ತ್ಪುರುಷೋತ್ತಮಮ್ ॥

(ಬ್ರಹ್ಮಾಂಡ ಪುರಾಣ)

ಶ್ರೀ ಅಶ್ವತ್ಥನಾರಾಯಣಸ್ವಾಮಿಯು ಬಿಳುಪಾದ ಮೈಕಾಂತಿಯಿಂದ, ಎಂಟು ತೋಳುಗಳಿಂದ, ಲಕ್ಷ್ಮೀದೇವಿಯೊಂದಿಗೆ ಹಳದಿಬಣ್ಣದ ಬಂಗಾರದ ವಸ್ತ್ರಗಳೊಂದಿಗೆ ಇರುತ್ತಾನೆ. ಈತನ ಬಲಪಾರ್ಶ್ವದ ಕೆಳಹಸ್ತದಿಂದ ಮೊದಲುಗೊಂಡು ಮೇಲಿನ ಹಸ್ತದವರೆವಿಗೆ ಕ್ರಮವಾಗಿ ಅಭಯಮುದ್ರೆ, ಖಡ್ಗ, ಬಾಣ, ಚಕ್ರಗಳಿರುತ್ತವೆ. ಇದೇ ರೀತಿಯಾಗಿ ಎಡಪಾರ್ಶ್ವದಲ್ಲಿ ಕೆಳಹಸ್ತದಿಂದ ಪ್ರಾರಂಭವಾಗಿ ವರದಮುದ್ರೆ, ಖೇಟಕ, ಧನುಸ್ಸು, ಶಂಖಗಳಿರುತ್ತವೆ. ಈ ರೂಪದಲ್ಲಿರುವ ನಾರಾಯಣನಾದ ಪುರುಷೋತ್ತಮನನ್ನು ಧ್ಯಾನಿಸೋಣ.

## ೨೦. ಹರಿಶಂಕರ (ಹರಿಹರ) ಮೂರ್ತಿ

ರುದ್ರಾರ್ಧ ದೇಹಂ ವಾ ಕುರ್ಯಾತ್ ಚತುರ್ಬಾಹುಂ ಜನಾರ್ದನಮ್
ಈಶಾನಂ ದಕ್ಷಿಣೇ ಪಾರ್ಶ್ವೇ ಕುರ್ಯಾತ್ ಚೂಲಾಷ್ಟ ಧಾರಿಣಮ್ ॥
ಗದಾ ಚಕ್ರಧರಂ ಚಾನ್ಯಂ ಮುಕುಟೇನ ವಿಭೂಷಿತಮ್
ಜಟಾಚಂದ್ರಧರಂ ರೌದ್ರಂ ವೈಷ್ಣವಂ ರತ್ನ ಮಂಡಿತಮ್ ॥
ಕುಂಡಲೋದ್ಯೋತಿತಂ ಚೈಕಂ ಅಪರಂ ನಾಗ ಕುಂಡಲಮ್
ವ್ಯಾಘ್ರ ಚರ್ಮಪರೀಧಾನಂ ಅಪರಂ ವಸ್ತ್ರಭೂಷಿತಮ್ ॥
ಬ್ರಹ್ಮಸೂತ್ರಧರಂ ಚೈಕಂ ಅನ್ಯಾನ್ನಾಗೋಪವೀತಿಕಮ್
ಗೌರೀ ಚೈಕೇನ ಪಾರ್ಶ್ವೇನ ಲಕ್ಷ್ಮೀಶ್ಚೈಕೇನ ಸಂಸ್ಥಿತಾ ॥
ಏವಂ ಲಕ್ಷಣ ಸಂಯುಕ್ತಂ ಕಾರಯೇತ್ ಹರಿಶಂಕರಮ್

(ಹಯಶೀರ್ಷ ಸಂಹಿತೆ, ಆದಿ ೨೨ : ೧೨ - ೧೬)

ನಾಲ್ಕು ತೋಳುಗಳ ಈ ಸ್ವಾಮಿಯನ್ನು ಬಲಪಾರ್ಶ್ವದಲ್ಲಿ ಶಿವನು ಎಡಪಾರ್ಶ್ವದಲ್ಲಿ ಜನಾರ್ದನು ಇರುವಂತೆ ಒಂದೇ ದೇಹದಲ್ಲಿ ರೂಪಿಸಬೇಕು. ಬಲಭಾಗದ ಎರಡು ಹಸ್ತಗಳಲ್ಲಿ ಅಭಯಮುದ್ರೆ ಮತ್ತು ತ್ರಿಶೂಲವನ್ನು ರೂಪಿಸ ಬೇಕು. ಎಡಪಾರ್ಶ್ವದಲ್ಲಿ ಗದೆ ಮತ್ತು ಚಕ್ರ ಧರಿಸಿರಬೇಕು. ಬಲದ ಅರ್ಧಭಾಗ ಜಟಾಮಕುಟವಾಗಿಯೂ, ಚಂದ್ರಧಾರಿಯಾಗಿ ರೌದ್ರವಾಗಿದ್ದರೆ, ಎಡಭಾಗವು ರತ್ನಖಚಿತ ಕಿರೀಟವಿದ್ದು ಶಾಂತವಾಗಿರಬೇಕು. ಬಲಭಾಗದಲ್ಲಿ ನಾಗ ಕುಂಡಲವಿದ್ದರೆ ಎಡಭಾಗ ರತ್ನಕುಂಡಲವಿರಬೇಕು. ಶಿವಭಾಗದಲ್ಲಿ ವ್ಯಾಘ್ರ ಚರ್ಮಧರಿಸಿದ್ದರೆ ವಿಷ್ಣುಭಾಗವು ಪೀತಾಂಬರ ಧರಿಸಿರುತ್ತದೆ. ಅದೇ ರೀತಿಯಾಗಿ ವಿಷ್ಣು ಭಾಗದಲ್ಲಿ ಯಜ್ಞೋಪವೀತವಿದ್ದರೆ, ಶಿವಭಾಗದಲ್ಲಿ ನಾಗಯಜ್ಞೋಪವೀತವಿರುತ್ತದೆ. ಶಿವ ಪಾರ್ಶ್ವದಲ್ಲಿ (ಬಲಕ್ಕೆ) ಗೌರಿಯೂ, ವಿಷ್ಣುಪಾರ್ಶ್ವದಲ್ಲಿ (ಎಡಕ್ಕೆ) ಲಕ್ಷ್ಮೀಯು ನಿಂತಿರುತ್ತಾರೆ. ಹರಿಶಂಕರ ಮೂರ್ತಿಯನ್ನು ಈ ಲಕ್ಷಣಗಳಿರುವಂತೆ ರೂಪಿಸಬೇಕು.



ಚಿತ್ರ ೧೦೨ : ಅಶ್ವತ್ಥ ನಾರಾಯಣಮೂರ್ತಿ

## ೨೧. ಪ್ರತಾಪರಾಮಮೂರ್ತಿ

**ದೋರ್ಭಿಃ ಖಡ್ಗಂ ತ್ರಿಶೂಲಂ ಡಮರುಮುಸಿಧನುರ್ದಂಡ ಬಾಣಂ ಕುಠಾರಂ**
**ಶಂಖಂ ಚಕ್ರಂ ಕೃಪಾಣಂ ಹಲ ಮುಸಲ ಗದಾ ಭಿಂಡಿವಾಲಂ ಚ ಪಾಶಮ್ ।**
**ಉದ್ಯದ್ವಾಪುಂ ಚ ಮುಷ್ಟಿಂ ಹ್ಯಭಯ ವರಕರಂ ಭಿಭ್ರತಂ ಶುಕ್ಲವರ್ಣಂ**
**ವಂದೇ ರಾಮಂ ತ್ರಿನೇತ್ರಂ ತ್ವಮರರಿಪುಕುಲಂ ಮರ್ದಯಂತಂ ಪ್ರತಾಪೈಃ ॥**

(ಮಂತ್ರಸಾರ)

ಶ್ರೀ ಪ್ರತಾಪರಾಮಮೂರ್ತಿ ಬಿಳುಪಾದ ಮೈಬಣ್ಣದೊಂದಿಗೆ ಮೂರುಕಣ್ಣುಗಳೊಂದಿಗೆ ಒಂದು ಮುಖಹೊಂದಿದ್ದು ಇಪ್ಪತ್ತು ತೋಳುಗಳನ್ನು ಪಡೆದಿರುತ್ತಾನೆ. ಬಲಪಾರ್ಶ್ವದಲ್ಲಿ ಕೆಳಗಿನಿಂದ ಮೇಲಕ್ಕೆ ಕ್ರಮವಾಗಿ ಈ ಆಯುಧಗಳಿರುತ್ತವೆ: ಅಭಯ ಮುದ್ರೆ, ನೇಗಿಲು, ಭಿಂಡಿವಾಲ, ಗದೆ, ಖಡ್ಗ, ಬಾಣ, ಕಠಾರಿ, ಡಮರುಗ, ತ್ರಿಶೂಲ, ಚಕ್ರ. ಇದೇ ವಿಧವಾಗಿ ಎಡಭಾಗದಲ್ಲಿ ಕೆಳಗಿನಿಂದ ಮೇಲಕ್ಕೆ ಕ್ರಮವಾಗಿ ವರದ ಮುದ್ರೆ, ಮುಸಲ (ಒನಕೆ), ಮುಷ್ಟಿ, ಎತ್ತಿದ ಕೈ, ನೇಗಿಲು (ಅಥವ ದಂಡ), ಬಿಲ್ಲು, ಭರ್ಜಿ, ಪಾಶ, ಕೊಡಲಿ (ಪರಶು), ಶಂಖ. ತನ್ನ ಪರಾಕ್ರಮದಿಂದ ದಾನವಕುಲವನ್ನು ಮರ್ದಿಸುತ್ತಿರುವ ಪ್ರತಾಪರಾಮನಿಗೆ ನಮಸ್ಕರವನ್ನು ಅರ್ಪಿಸುತ್ತೇನೆ.

## ೨೨. ಗೋಪಾಲಕೃಷ್ಣಮೂರ್ತಿ

**ನೌ ಮೀಢ್ಯತೇಽಭ್ರವಪುಷೇ ತಟಿದಂಬರಾಯ**
**ಗುಂಜಾವತಂಸ ಶಿಖಿಪಿಚ್ಛಲಸನ್ಮುಖಾಯ ।**
**ವನ್ಯಸ್ರಜೇ ಕಬಲವೇ ತ್ರವಿಷಾಣ ವೇಣು**
**ಲಕ್ಷ್ಮಶ್ರಿಯೇ ಮೃದುಪದೇ ಪಶುಪಾಂಗಜಾಯ ॥**

(ಭಾಗವತಂ)

ಗೋಪಾಲಕೃಷ್ಣಮೂರ್ತಿಯು ಮೇಘದಂತೆ ನೀಲವರ್ಣದಲ್ಲಿದ್ದು, ಮಿಂಚಿನ ಬಳ್ಳಿ ಬಂಗಾರದ ಬಳ್ಳಿಗಳಂತಹ ವಸ್ತ್ರಗಳನ್ನು ತೊಟ್ಟು, ಗುಲಗಂಜಿಗಳಿಂದ, ನವಿಲಿನ ಗರಿಗಳಿಂದ ಅಲಂಕೃತನಾಗಿ ತೇಜೋವಂತವಾದ ಮುಖದೊಂದಿಗೆ, ಕಾಡುಹೂಗಳ ಮಾಲೆಗಳಿಂದ ಅಲಂಕರಿಸಿ ಕೊಂಡಿರುತ್ತಾನೆ. ಈತನಿಗೆ ನಾಲ್ಕು ತೋಳುಗಳು.

ಬಲಪಾರ್ಶ್ವದಲ್ಲಿ ಕೆಳಹಸ್ತದಲ್ಲಿ ಕೊಳಲನ್ನು, ಮೇಲಿನ ಹಸ್ತದಲ್ಲಿ ಕೊಂಬನ್ನು, ಎಡಪಾರ್ಶ್ವದಲ್ಲಿ ಕೆಳಹಸ್ತದಲ್ಲಿ ಬೆಣ್ಣೆಯ ಮುದ್ದೆಯನ್ನು, ಮೇಲಿನ ಹಸ್ತದಲ್ಲಿ ಗೋವಳನ ದಂಡವನ್ನು ಹಿಡಿದಿರುತ್ತಾನೆ.

ಮೃದುವಾದ ಪಾದಗಳುಳ್ಳ ನಂದ ಪುತ್ರನಾದ ಎಲ್ಲೆಸ್ವಾಮಿಯೇ ನಿನಗೆ ನಮಸ್ಕಾರ

## ೨೩. ಮದನ ಗೋಪಾಲ ಮೂರ್ತಿ

**ರಕ್ತವರ್ಣೋ ದಶಭುಜಃ ಸರ್ವಾಲಂಕಾರ ಭೂಷಿತಃ**
**ಶಂಖ ಚಕ್ರ ಗದಾ ಪದ್ಮ ಪಾಂಶಾಂಕುಶ ಸುಮಾಶುಗಾನ್ ॥**
**ಇಕ್ಷುಕೋದಂಡ ಮನ್ಯಾಭ್ಯಾಂ ವಾದಯನ್ ವೇಣುಮಾದರಾತ್**
**ಷೋಡಶಚ್ಛದ ಪದ್ಮ ಸ್ಥಪಟ್ಕೋಣೋಪರಿ ಸಂಸ್ಥಿತಃ ॥**



ಚಿತ್ರ ೧೦೩ : ಪ್ರತಾಪರಾಮ ಮೂರ್ತಿ



ಚಿತ್ರ ೧೦೪ : ಗೋಪಾಲಕೃಷ್ಣ ಮೂರ್ತಿ

**ಗೋಪಾಲವಂದನಾಖ್ಯೋಽಯಂ ಮಂದಸ್ಮಿತ ಮುಖಾಂಬುಜಃ**

**ಸ್ವರಪತ್ರಸ್ಥಗೋಪೀಭಿರಾದರಾ ದೀಕ್ಷಿತೋಽತಿ ಪಾತಾತ್ ॥**

(ಪಾಂಚರಾತ್ರಾಗಮ ಮತ್ತು ಭಾಗವತಂ)

ರಕ್ತವರ್ಣದ ಮೈಕಾಂತಿಯಿಂದ ಸರ್ವಾಭರಣ ಭೂಷಣಗಳೊಂದಿಗೆ ಹತ್ತು ತೋಳುಗಳನ್ನು ಹೊಂದಿರುವ ಈ ಸ್ವಾಮಿಯು ಮದನಗೋಪಾಲನು. ಮುಂದಿನ ಎರಡು ಹಸ್ತಗಳಿಂದ ವೇಣುವನ್ನು ನುಡಿಸುತ್ತಿರುತ್ತಾನೆ. ಇತರ ಎಂಟು ಹಸ್ತಗಳಲ್ಲಿರುವ ಆಯುಧ ವಿನ್ಯಾಸವು ಈ ರೀತಿಯಾಗಿರುತ್ತದೆ.

ಬಲಗಡೆ ಕೆಳಗಿನಿಂದ ಕ್ರಮವಾಗಿ ಮೇಲಕ್ಕೆ ಪುಷ್ಪಬಾಣ, ಪದ್ಮ, ಅಂಕುಶ, ಚಕ್ರ.

ಎಡಗಡೆ ಕೆಳಗಿನಿಂದ ಕ್ರಮವಾಗಿ ಮೇಲಕ್ಕೆ ಕಬ್ಬಿನಜಲ್ಲೆ, ಗದೆ, ಪಾಶ, ಶಂಖ.

ಮದನಗೋಪಾಲಮೂರ್ತಿಯು ಹದಿನಾರುದಳಗಳಿರುವ, ಆರುಕೋಣಗಳುಳ್ಳ ಪೀಠದಮೇಲೆ ಇರುತ್ತಾನೆ. ಆ ಪದ್ಮದ ಹದಿನಾರು ದಳಗಳಮೇಲೆ ಇರುವ ಹದಿನಾರು ಗೋಪಿಕೆಯರು ಲಾವಣ್ಯಮೂರ್ತಿಯಾದ ಸ್ವಾಮಿಯನ್ನು ಅನುರಾಗದಿಂದ ನೋಡುತ್ತಿರುತ್ತಾರೆ.

ಕಿರುನಗೆ ಬೀರುತ್ತಿರುವ ಇಂತಹ ರೂಪದ ಮದನಗೋಪಾಲಮೂರ್ತಿಯು ನಮ್ಮನ್ನು ಸದಾ ರಕ್ಷಿಸುತ್ತಿರಲಿ.

## ೨೪. ದತ್ತಾತ್ರೇಯ

ವಿಷ್ಣುವಿನ ಅವತಾರಗಳಲ್ಲಿ ದತ್ತ ಆತ್ರೇಯ ಒಂದು ಎಂದು ಪರಿಗಣಿಸಲಾಗಿದೆ. ಈ ಅವತಾರದ ಹುಟ್ಟು ಮತ್ತು ಜೀವನದ ವಿವರಗಳು ಮಾರ್ಕಂಡೇಯ ಪುರಾಣದಲ್ಲಿ ದೊರೆಯುತ್ತದೆ. ಪ್ರತಿಷ್ಠಾನ ನಗರದಲ್ಲಿ ಕೌಶಿಕನೆಂಬ ಬ್ರಾಹ್ಮಣನಿದ್ದ. ಅವನಿಗೆ ಕುಷ್ಠರೋಗ. ಅವನ ಪತ್ನಿ ಪತಿವ್ರತೆ. ಗಂಡನ ಸೇವೆಯನ್ನು ಬಹುಶ್ರದ್ಧೆಯಿಂದ ಮಾಡುತ್ತಿದ್ದಳು. ಒಮ್ಮೆ ಋಷಿ ಅಣಿಮಾಂಡವ್ಯನಿಗೆ ಕೌಶಿಕನ ಮೇಲೆ ಕೋಪಬಂದು ಮುಂದಿನ ದಿನದ ಸೂರ್ಯೋದಯವಾಗುತ್ತಲೇ ಸಾಯುವಂತೆ ಶಾಪಕೊಟ್ಟ. ಇದನ್ನು ಕೇಳಿದ ಕೌಶಿಕನ ಪತ್ನಿ ಸೂರ್ಯೋದಯವೇ ಆಗದಿರಲಿ ಎಂದು ಹೇಳಿದಳು. ಪತಿವ್ರತೆಯ ಆಣತಿಯನ್ನು ಮೀರಲಾರದೆ ಸೂರ್ಯ ಹುಟ್ಟಲೇ ಇಲ್ಲ. ಇದರಿಂದ ಭಯಗೊಂಡ ದೇವತೆಗಳು ಅತ್ರಿ ಮತ್ತು ಅನಸೂಯಾದೇವಿಯರ ಬಳಿ ಬಂದು ಆಕೆಯು ಕೌಶಿಕನ ಹೆಂಡತಿಯನ್ನು ಒಪ್ಪಿಸಬೇಕೆಂದು ಪ್ರಾರ್ಥಿಸಿದರು. ಆಕೆ ಅಂಗೀಕರಿಸಿ ಕೌಶಿಕನ ಹೆಂಡತಿಯನ್ನು ಕಂಡಳು. ಆಕೆ ಬಹು ಗೌರವದಿಂದ ಕಂಡು ಅನಸೂಯಾ ದೇವಿಯನ್ನು ಸತ್ಕರಿಸಿದಳು. ನಂತರ ಬಂದ ಕೆಲಸವನ್ನು ತಿಳಿದುಕೊಂಡು, ಸೂರ್ಯನು ಹುಟ್ಟುವುದಕ್ಕೆ ತನ್ನ ಅಭ್ಯಂತರವಿಲ್ಲ ಆದರೆ ತನ್ನ ಗಂಡ ಮಾತ್ರ ಸಾಯಕೂಡದು ಎಂದು ಹೇಳಿದಳು . ಸೂರ್ಯ ಹುಟ್ಟುತ್ತಲೇ ಕೌಶಿಕ ನೆಲದ ಮೇಲೆ ಬಿದ್ದು ಸತ್ತ. ಅವನನ್ನು ಅನಸೂಯದೇವಿ ಬದುಕಿಸಿ ಆರೋಗ್ಯವಂತನನ್ನಾಗಿ ಮಾಡಿದಳು. ಇದರಿಂದ ಸಂಪ್ರೀತರಾದ ದೇವರುಗಳು ಅನಸೂಯಾದೇವಿಯನ್ನು ವರ ಕೇಳುವಂತೆ ಹೇಳಿದರು. ಆಕೆ ತ್ರಿಮೂರ್ತಿಗಳು (ಬ್ರಹ್ಮ, ವಿಷ್ಣು, ಮಹೇಶ್ವರರು) ತನ್ನ ಮಕ್ಕಳಾಗಿ ಹುಟ್ಟಬೇಕೆಂದು ಬೇಡಿದಳು. ಹಾಗೆ ಹುಟ್ಟಿದವನೇ ದತ್ತಾತ್ರೇಯ.



ಚಿತ್ರ ೧೦೫ : ಮದನ ಗೋಪಾಲಮೂರ್ತಿ

ಅತ್ರಿ ಋಷಿಗೆ ದತ್ತ, ಸೋಮ ಮತ್ತು ದೂರ್ವಾಸ ಎಂಬ ಮುವ್ವರು ಮಕ್ಕಳಾದರು (ಭಾಗವತ, ೪ : ೧ : ೧೫ - ೩೩). ದತ್ತನು ವಿಷ್ಣುವಿನ, ಸೋಮನು ಬ್ರಹ್ಮನ ಮತ್ತು ದೂರ್ವಾಸನು ಶಂಕರನ ಅವತಾರ ರೂಪ. ಈ ಮುವ್ವರೇ ಅಲ್ಲದೆ ಇವರಿಗೆ ನಿಮಿ ಎಂಬ ಮಗನೂ ಇದ್ದನೆಂದು ಮಹಾಭಾರತ ಹೇಳುತ್ತದೆ (ಅನುಶಾಸನ ಪರ್ವ, ೧೩೮ : ೫).

ದತ್ತ ಅವತಾರದ ಮುಖ್ಯ ಉದ್ದೇಶ ಕ್ಷಮಾಗುಣದ ಮಹತ್ತು ಸಾರುವುದು. ವೇದಗಳನ್ನು ಯಜ್ಞಕ್ರಿಯೆಯೊಂದಿಗೆ ಪುನರುಜ್ಜೀವನ ಗೊಳಿಸುವುದು. ಚಾತುವರ್ಣ್ಯದ ಪುನರ್ಘಟನೆ ಮತ್ತು ಧರ್ಮಸಂಸ್ಥಾಪನೆ (ಬ್ರಹ್ಮಪುರಾಣ ೨೧೩ : ೧೦೬ - ೧೧೦, ಹರಿವಂಶ ಪುರಾಣ ೧ : ೪೧). ಈತನು ಸಂನ್ಯಾಸ ಪದ್ಧತಿಯನ್ನು ಪ್ರಚಾರಮಾಡಿದ (ಶಿವಪುರಾಣ, ಶತರುದ್ರೀಯ ಸಂಹಿತೆ ೧೯ : ೨೬). ಕಾರ್ತವೀರ್ಯಾರ್ಜುನ ಮೂಲಕ ಪೃಥ್ವಿಯನ್ನು ಮ್ಲೇಚ್ಛರಹಿತವನ್ನಾಗಿ ಮಾಡಿದ (ವಿಷ್ಣುಧರ್ಮೋತ್ತರ ಪುರಾಣ ೧ : ೨೫ - ೨೬).

ದತ್ತ ತನ್ನ ತಂದೆಯನ್ನು 'ಬ್ರಹ್ಮಜ್ಞಾನವನ್ನು ಗಳಿಸುವುದು ಹೇಗೇ?' ಎಂದು ಪ್ರಶ್ನಿಸಿದ. ಆತ ಗೋದಾವರಿ (ಗೋಮತಿ) ತೀರದಲ್ಲಿ ಶಿವನ ಆರಾಧನೆ ಮಾಡಲು ಹೇಳಿದ. ಹಾಗೆ ಮಾಡಿದ್ದರಿಂದ ಈ ದತ್ತನಿಗೆ ಆತ್ಮಜ್ಞಾನ ಲಭಿಸಿತು. ಇಂದೂ ಗೋದಾವರಿಯ ತೀರದಲ್ಲಿರುವ ಆ ಸ್ಥಾನವನ್ನು ಬ್ರಹ್ಮತೀರ್ಥ ಎಂದು ಕರೆಯುತ್ತಾರೆ (ಬ್ರಹ್ಮಪುರಾಣ, ೧೧೭).

ಬ್ರಹ್ಮನಿಷ್ಠನಾದ ಈತನಿಗೆ ಧರ್ಮದೇವನ ದರ್ಶನವಾಯಿತು (ಪದ್ಮಪುರಾಣ, ಭೂಖಂಡ ೧೨ : ೫೦). ಈತನಿಗೆ ಅಲರ್ಕ, ಪ್ರಹ್ಲಾದ, ಯದು ಮತ್ತು ಸಹಸ್ರಾರ್ಜುನ ಎಂಬ ನಾಲ್ವರು ಶಿಷ್ಯರು. ಅವರಿಗೆ ಬ್ರಹ್ಮವಿದ್ಯೆಯನ್ನು ಬೋಧಿಸಿದ (ಭಾಗವತ, ೧ : ೩ : ೧೧). ಅಲರ್ಕನಿಗೆ ಆತ್ಮಜ್ಞಾನ, ಯೋಗ, ಯೋಗಧರ್ಮ, ಯೋಗಾಚಾರ್ಯ, ಯೋಗಸಿದ್ಧಿ ಮತ್ತು ನಿಷ್ಕಾಮ ಬುದ್ಧಿಗಳ ಬಗ್ಗೆ ಉಪದೇಶಮಾಡಿದ (ಮಾರ್ಕಂಡೇಯ ೩೫ - ೪೦). ಆಯು, ಪರಶುರಾಮ ಮತ್ತು ಸಾಂಕೃತಿ ಇವರೂ ಕೂಡ ದತ್ತನ ಶಿಷ್ಯರು.

ಗಿರಿನಗರದಲ್ಲಿ ದತ್ತನ ಆಶ್ರಮ ವಿತ್ತು. ಅದರ ಹೆಸರು ವಿಷ್ಣುಪದ. ಪಶ್ಚಿಮ ಘಟ್ಟದ ಮಲ್ಲಿಕೀಗ್ರಾಮ (ಮಾಹುರ್)ದಲ್ಲಿ ದತ್ತನ ಆಶ್ರಮವಿತ್ತು. ಇಲ್ಲಿಯೇ ಪರಶುರಾಮನು ತನ್ನ ತಂದೆ ಜಮದಗ್ನಿಯ ಅಗ್ನಿಸಂಸ್ಕಾರವನ್ನು ನಡೆಸಿದ. ಆತನ ತಾಯಿ ರೇಣುಕೆ ಸತಿಯಾಗಿದ್ದು ಇಲ್ಲಿಯೇ (ರೇಣುಕಾ ಪುರಾಣ ೩೭).

ದತ್ತನು ಹುಟ್ಟಿದ್ದು ಮಾರ್ಗಶೀರ್ಷ ಶುದ್ಧ ಚತುರ್ದಶಿ ಮಧ್ಯಾಹ್ನ ಅಥವ ಮಧ್ಯರಾತ್ರಿಎನ್ನುತ್ತಾರೆ. ಕೆಲವರು ಮಾರ್ಗಶೀರ್ಷ ಪೌರ್ಣಿಮಿ ಎಂದು ಹೇಳುತ್ತಾರೆ. ದತ್ತನ ಕೃತಿಗಳು - *ಅವಧೂತೋಪನಿಷತ್, ಜಾಬಾಲೋಪನಿಷದ್, ಅವಧೂತ ಗೀತಾ, ಪರಶುರಾಮ ಕಲ್ಪಸೂತ್ರ, ತ್ರಿಪುರೋಪಾಸ್ತಿ ಪದ್ಧತಿ.*

ಮರಾಠಿ ಮತ್ತು ಸಂಸ್ಕೃತಭಾಷೆಗಳಲ್ಲಿ ದತ್ತಸಾಹಿತ್ಯ ವಿಪುಲವಾಗಿದೆ.

ದತ್ತಮೂರ್ತಿಯನ್ನು ಮೂರು ಮುಖ, ಆರು ತೋಳುಗಳಿರುವಂತೆ ರೂಪಿಸಿ ಹಿಂದೆ ಒಂದು ಹಸು ಮುಂದೆ ನಾಲ್ಕು ನಾಯಿಗಳು ಇರುವಂತೆ ರೂಪಿಸುತ್ತಾರೆ. ಪುರಾಣಗಳಲ್ಲಿ ತ್ರಿಮುಖ ದತ್ತನ ಉಲ್ಲೇಖವಿಲ್ಲ. ತ್ರಿಮುಖವನ್ನು ಮೂರು ಪ್ರತ್ಯೇಕ ವ್ಯಕ್ತಿಗಳಾಗಿ ಭಾವಿಸಿ ದತ್ತ - ಸೋಮ - ದುರ್ವಾಸ ಎಂದು ಮುವ್ವರಾಗಿ ಹೇಳಲಾಗಿದೆ. ಹಸು - ನಾಯಿಗಳು ಇರುವುದಕ್ಕೆ

ಕಾರಣ - ಮತ್ತು ಅರ್ಥ ಪುರಾಣಗಳಲ್ಲಿ ದೊರೆಯುವುದಿಲ್ಲ. ತ್ರಿಮುಖ ದತ್ತನ ಪ್ರಾಚೀನ ಉಲ್ಲೇಖ ಮರಾಠಿಯ 'ಗುರುಚರಿತ್ರೆ' (ಕ್ರಿ.ಶ. ೧೫೫೦)ಯಲ್ಲಿ ದೊರೆಯುತ್ತದೆ. ಔದುಂಬರ ವೃಕ್ಷದ ಅಡಿಯಲ್ಲಿ ಮೂರು ಮುಖ, ಆರು ತೋಳುಗಳೊಂದಿಗೆ, ಹಸು ಮತ್ತು ನಾಯಿಗಳೊಡನೆ ದತ್ತಮೂರ್ತಿಯ ವರ್ಣನೆ ದೊರೆಯುತ್ತದೆ. ಮಹಾಕವಿ ಮಾಘ (ಕ್ರಿ.ಶ ೬೫೦) 'ಶಿಶುಪಾಲವಧ'ದಲ್ಲಿ ದತ್ತನು ವಿಷ್ಣುವಿನ ಅವತಾರ ಎಂದು ಹೇಳಿದ್ದಾನೆ. ಇದೇ ದತ್ತಾವತಾರದ ಮೊದಲ ಉಲ್ಲೇಖ.

ದತ್ತಾತ್ರೇಯ ಮೂರ್ತಿಕಲ್ಪನೆಯು ಮೂರು ಬಗೆಗಳಾಗಿವೆ.

(ಅ) ಬ್ರಹ್ಮ ಶಿವ ವಿಷ್ಣು ಇವರು ಪಕ್ಕಪಕ್ಕದಲ್ಲಿಯೇ ಪ್ರತ್ಯೇಕವಾಗಿ ನಿಂತಿರುತ್ತಾರೆ. ಬ್ರಹ್ಮನು ಮೇಲಿನ ಬಲಹಸ್ತದಲ್ಲಿ ಸ್ರುಕ್ - ಸ್ರುವಗಳನ್ನು, ಕೆಳಹಸ್ತದಲ್ಲಿ ಅಕ್ಷಮಾಲೆಯನ್ನು, ಮೇಲಿನ ಎಡ ಹಸ್ತದಲ್ಲಿ ಪಾಶವನ್ನು, ಕೆಳಎಡ ಹಸ್ತದಲ್ಲಿ ಕಮಂಡಲುವನ್ನು ಹಿಡಿದಿರುತ್ತಾನೆ. ವಿಷ್ಣು ಮೇಲಿನ ಬಲ ಹಸ್ತದಲ್ಲಿ ಪದ್ಮವನ್ನು, ಮೇಲಿನ ಎಡ ಹಸ್ತದಲ್ಲಿ ಗದೆಯನ್ನು, ಕೆಳಗಿನ ಎಡ ಹಸ್ತದಲ್ಲಿ ಚಕ್ರವನ್ನು, ಕೆಳಗಿನ ಬಲ ಹಸ್ತದಲ್ಲಿ ಶಂಖವನ್ನು ಹಿಡಿದಿರುತ್ತಾನೆ. ಶಿವನು ಮೇಲಿನ ಬಲಹಸ್ತದಲ್ಲಿ ಶೂಲವನ್ನು, ಮೇಲಿನ ಎಡ ಹಸ್ತದಲ್ಲಿ ಡಮರುಗವನ್ನು, ಕೆಳಗಿನ ಬಲ ಹಸ್ತದಲ್ಲಿ ಅಕ್ಷಮಾಲೆಯನ್ನು ಎಡ ಹಸ್ತದಲ್ಲಿ ಪುಸ್ತಕವನ್ನು ಹಿಡಿದಿರುತ್ತಾನೆ. ಶಿವ ಮತ್ತು ವಿಷ್ಣುಗಳು ತಮ್ಮ ದೇವಿಯರೊಂದಿಗೆ ಇರುತ್ತಾರೆ.

ಇದೇ ಬಗೆಯ ಮೂರ್ತಿಗಳು ಕುಳಿತಿದ್ದು ಬ್ರಹ್ಮನು ಪದ್ಮಾಸನದಲ್ಲೂ, ವಿಷ್ಣುವು ಗರುಡನ ಮೇಲೂ, ಶಿವನು ವೃಷಭನ ಮೇಲೂ ಇರಬಹುದು. ಬ್ರಹ್ಮನು ಉತ್ಕುಟಿಕಾಸನದಲ್ಲಿ ಯೋಗಪಟ್ಟದೊಂದಿಗೆ ಇರಬೇಕು.

(ಆ) ವಿಷ್ಣುವು ಯೋಗದಲ್ಲಿರುವಂತೆ ತೋರಿಸುವುದು. ತ್ರಿಮೂರ್ತ್ಯಾತ್ಮಕತೆಯು ಲಾಂಛನಗಳಿಂದ ಸ್ಪಷ್ಟಗೊಳಿಸುವುದು ಪೀಠದಮೇಲೆ ಹಂಸ, ಗರುಡ, ವೃಷಭಗಳನ್ನು ಚಿತ್ರಿಸುವುದು. ಸ್ವಾಮಿಗೆ ಜಟಾಮಕುಟ ರೂಪಿಸಿ ಎರಡು ಕಡೆ ಕೆಲವು ಜಡೆಗಳನ್ನು ನೇತಾಡುವಂತೆ ಬಿಡಿಸುವುದು. ಮೇಲಿನ ಹಸ್ತಗಳಲ್ಲಿ ಶಂಖ ಚಕ್ರಗಳು ಉತ್ಕುಟಿಕಾಸನದಲ್ಲಿ ಮೊಣಕಾಲಬಳಿ ಯೋಗಪಟ್ಟ ಇದ್ದು ಕೆಳಗಿನ ಎರಡು ತೋಳುಗಳೂ ಮೊಣಕಾಲುಗಳ ಮೇಲೆ ಇದ್ದು ಯೋಗಮುದ್ರೆಯಲ್ಲಿರಬೇಕು. ಹಿಂದಿನ ಪ್ರಭಾವಳಿಯಲ್ಲಿ ದಶಾವತಾರಗಳ ಚಿತ್ರಗಳು. ಸ್ವಾಮಿ ಬಲಗಿವಿಯಲ್ಲಿ ಸರ್ಪಕುಂಡಲವನ್ನು (ಶಿವನ ಪದ್ಧತಿ), ಎಡಗಿವಿಯಲ್ಲಿ ಮಕರಕುಂಡಲ (ವಿಷ್ಣುವಿನ ಪದ್ಧತಿ) ರೂಪಿಸಬೇಕು.

(ಇ) ಮೂರು ತಲೆಗಳು. ಆರು ತೋಳುಗಳು ಗೋವು ಹಿಂದೆ ನಿಂತಿದ್ದು ಮುಂದೆ ನಾಲ್ಕು ನಾಯಿಗಳು ಇರಬೇಕು. ನಾಯಿಗಳು ವೇದಗಳು. ಗೋವು ಕೃಷ್ಣನ ಸಂಕೇತ, ತ್ರಿಮೂರ್ತಿಗಳ ಲಾಂಛನ ಆಯುಧಗಳು.

(ಈ) ವಿಷ್ಣುಧರ್ಮೋತ್ತರಪುರಾಣವು ದತ್ತನನ್ನು ವಾಲ್ಮೀಕಿಯಂತೆಯೇ ರೂಪಿಸಬೇಕು **(ವಾಲ್ಮೀಕಿರೂಪಂ ಸಕಲಂ ದತ್ತಾತ್ರೇಯಸ್ಯ ಕಾರಯೇತ್।)** ಎಂದು ಹೇಳಿದೆ.

(ಉ) ಈ ಮೊದಲು 'ಅ' ವಿಭಾಗದಲ್ಲಿ ವಿವರಿಸಿರುವ ತ್ರಿಮೂರ್ತಿದತ್ತನನ್ನು ಹರಿಹರಪಿತಾಮಹ ಎಂದೂ ಶಾಸ್ತ್ರದಲ್ಲಿ ಕರೆಯಲಾಗಿದೆ. ರೂಪಮಂಡನವು ಹರಿಹರಪಿತಾಮಹ

ಎಂದು ದತ್ತನನ್ನೇ ವಿವರಿಸಿದರೂ ರೂಪ ಮಾತ್ರ ಬೇರೆಯಾಗಿದೆ -

**ಏಕಪೀಠ ಸಮಾರೂಢಮೇಕ ದೇಹ ನಿವಾಸಿನಮ್**
**ಷಡ್ಭುಜಂ ಚ ಚತುರ್ವಕ್ತ್ರಂ ಸರ್ವಲಕ್ಷಣ ಸಂಯುತಮ್ ॥**
**ಅಕ್ಷಮಾಲಾಂ ತ್ರಿಶೂಲಂ ಚ ಗದಾಂ ಕಾಯಾರ್ಗ್ಚ್ಯ ದಕ್ಷಿಣೇ**
**ಕಮಂಡಲುಂ ಚ ಖಟ್ವಾಂಗಂ ಚಕ್ರಂ ವಾಮಭುಜೇ ತಥಾ ॥**

(ರೂಪಮಂಡನ)

ಒಂದೇ ಪೀಠದಲ್ಲಿ ಕುಳಿತಿರುವ ಏಕದೇಹದ ನಾಲ್ಕು ಮುಖಗಳ, ಆರು ಬಾಹುಗಳ ಈ ಸ್ವಾಮಿಯು ಬಲಪಾರ್ಶ್ವದಲ್ಲಿಯ ಹಸ್ತಗಳಲ್ಲಿ ಮೇಲಿನಿಂದ ಕೆಳಕ್ಕೆ ಕ್ರಮವಾಗಿ ಅಕ್ಷಮಾಲೆ, ತ್ರಿಶೂಲ, ಗದೆ ಹಿಡಿದಿರುತ್ತಾನೆ. ಎಡಪಾರ್ಶ್ವದಲ್ಲಿಯ ಹಸ್ತಗಳಲ್ಲಿ ಮೇಲಿಂದ ಕೆಳಕ್ಕೆ ಕ್ರಮವಾಗಿ ಕಮಂಡಲು, ಖಟ್ವಾಂಗ, ಚಕ್ರಗಳನ್ನು ಹಿಡಿದಿರುತ್ತಾನೆ.

ಇಲ್ಲಿ ಈತನು ತ್ರಿಮೂರ್ತಿಗಳ ಸಂಯುಕ್ತರೂಪು ಎಂಬುದು ಸ್ಪಷ್ಟವಾಗಿದ್ದರೂ, ಈತನು ವಿಷ್ಣುವಿನ ಅವತಾರವೆಂಬುದು ಭಕ್ತರ ನಂಬಿಕೆ.

## ೨೫. ಪುರುಷ

ವೈಖಾನಸ ಆಗಮದಲ್ಲಿ ಪುರುಷನನ್ನು ಆವರಣದೇವತೆ ಎಂದು ವರ್ಣಿಸಲಾಗಿದೆ.

**ಪ್ರಾಚ್ಯಾಂ ಪುರುಷಂ ಪ್ರಾಙ್ಮುಖಂ ಶ್ವೇತಾಭಂ ಪೀತವಾಸಸಂ ಶ್ರೀ ಮೇದಿನೀಭ್ಯಾಂ ಸಂಯುಕ್ತಂ ಪುರುಷಂ ಪುರುಷಾತ್ಮಕಂ ಪರಂ ಪುರುಷಂ ಧರ್ಮಾಯಮಿತಿ ।**

ಮೊದಲ ಆವರಣದ ಪೂರ್ವದಿಕ್ಕಿನಲ್ಲಿ ಪುರುಷನು ಇರುತ್ತಾನೆ. ಪ್ರತಿಮೆಯು ಪೂರ್ವದಿಕ್ಕಿಗೆ ಮುಖಮಾಡಿಕೊಂಡಿರುತ್ತದೆ. ಈ ಮೂರ್ತಿಯ ವರ್ಣ ಬಿಳುಪು. ಈತನ ವಸ್ತ್ರಗಳು ಹಳದಿ ಬಣ್ಣ. ಶ್ರೀದೇವಿ ಮತ್ತು ಮೇದಿನೀ(ಭೂ)ದೇವಿಯರು ಈತನ ಇಕ್ಕೆಲಗಳಲ್ಲೂ ಇರುತ್ತಾರೆ.

ಪುರುಷ ಎಂಬುದು ಸಾಮಾನ್ಯವಾಚಕ ಪದವೇ ಆಗಿದ್ದರೂ ರೂಢಿಯಲ್ಲಿ ಇದು ವಿಷ್ಣುಪರ ಎಂಬ ಗ್ರಹಿಕೆ ಇದೆ. ಪುರುಷಸೂಕ್ತದಲ್ಲಿ ಉತ್ತರಭಾಗದಲ್ಲಿ ಮೊದಲ ಮಂತ್ರದಲ್ಲಿ *ವಿಶ್ವಕರ್ಮ*, *ತ್ವಷ್ಟೃ* ಎಂಬ ವಿಶೇಷ ನಾಮಗಳಿಂದ ಪುರುಷ ಸಂಬೋಧಿತನಾಗಿದ್ದರೂ ಅವು ವಿಷ್ಣುವಿನ ಹೆಸರುಗಳು ಎಂದೇ ವಿಷ್ಣು ಸಹಸ್ರನಾಮದಲ್ಲಿ ಗ್ರಹಿಸಲಾಗಿದೆ.

## ೨೬. ಧರ್ಮ

ವಿಷ್ಣುವಿನ ಅವತಾರಗಳಲ್ಲಿ ಇದೂ ಒಂದು. ಬ್ರಹ್ಮ ಜಗತ್ತುಗಳನ್ನು ಸೃಷ್ಟಿಮಾಡಿದ ನಂತರ ಅವನ್ನು ಕಾಪಾಡುವವನಿಗಾಗಿ ಹುಡುಕುತ್ತಿದ್ದ. ಆತನ ಬಲಪಾರ್ಶ್ವದಿಂದ ಒಂದು ರೂಪ ಮೂಡಿ ಬಂತು. ಅದರ ಕಿವಿಗಳಲ್ಲಿ ಕುಂಡಲಗಳಿದ್ದವು. ಕೊರಳಲ್ಲಿ ಬಿಳಿ ಹೂಗಳಮಾಲೆಯೊಂದಿತ್ತು. ಮೈಗೆ ಶ್ರೀಗಂಧವನ್ನು ಪೂಸಲಾಗಿತ್ತು. ಅದಕ್ಕೆ ನಾಲ್ಕು ಕಾಲುಗಳಿದ್ದವು. ವೃಷಭವನ್ನು ಹೋಲುವ ರೂಪ. ಅದನ್ನು ಧರ್ಮ ಎಂದು ಕರೆದರು. ಬ್ರಹ್ಮನು ಧರ್ಮನನ್ನು ಕರೆದು ತನ್ನ ಹಿರಿಯಮಗನಾಗಿದ್ದು ತಾನು ಸೃಷ್ಟಿಸಿರುವ ಲೋಕಗಳನ್ನು ಕಾಪಾಡಲು ಹೇಳಿದ. ಧರ್ಮನಿಗೆ ಕೃತಯುಗದಲ್ಲಿ ನಾಲ್ಕು ಪಾದಗಳು. ತ್ರೇತಾಯುಗದಲ್ಲಿ ಮೂರು ಪಾದಗಳು, ದ್ವಾಪರಯುಗದಲ್ಲಿ ಎರಡು ಪಾದಗಳು, ಕಲಿಯುಗದಲ್ಲಿ ಒಂದೇ ಪಾದ

ಇರುವುದಾಗಿ ಹೇಳಲಾಗುತ್ತದೆ. ಧರ್ಮನ ಪಾದಗಳು ಸತ್ಯ, ದಯ, ಶಾಂತಿ ಮತ್ತು ಅಹಿಂಸೆ. ಸಂಸ್ಕೃತದಲ್ಲಿ ವೃಷಭ ಎಂದರೆ ಧರ್ಮ ಎಂಬ ಅರ್ಥವೂ ಇದೆ. ಆದಿತ್ಯಪುರಾಣದಲ್ಲಿ ಧರ್ಮನ ವರ್ಣನೆಯು ಇಂತಿದೆ :

**ಚತುರ್ವಕ್ತ್ರಶ್ಚತು ಷ್ಪಾದಶ್ಚತುರ್ಬಾಹು ಶ್ಸಿತಾಂಬರಃ**

**ಸರ್ವಾಭರಣ ಪಾಂಭ್ಯೇತೋ ಧರ್ಮಃ ಕಾರ್ಯೋ ವಿಜಾನತಾ ॥**

**ದಕ್ಷಿಣೇ ಚಾಕ್ಷಮಾಲಾ ಚ ತಸ್ಯ ವಾಮೇ ಚ ಪುಸ್ತಕಮ್**

**ಮೂರ್ತಿ ಮಾನ್ವ್ಯಸಾಯಸ್ತು ಕಾರ್ಯೋ ದಕ್ಷಿಣಭಾಗತಃ ॥**

**ವಾಮ ಭಾಗೇ ತತಃ ಕಾರ್ಯೋ ವೃಷಃ ಪರಮರೂಪವಾನ್**

**ಕಾರ್ಯೌ ಪದ್ಮಕರೌ ಮೂರ್ಧ್ನಿ ವಿನ್ಯಸ್ತೌ ತು ತಥಾ ತಯೋಃ ॥**

ಧರ್ಮನಿಗೆ ನಾಲ್ಕು ಮುಖಗಳು. ಆತನ ವರ್ಣವು ಬಿಳಿಪು. ನಾಲ್ಕು ತೋಳುಗಳು. ನಾಲ್ಕು ಕಾಲುಗಳು ಇರುತ್ತವೆ. ಶ್ವೇತ ವಸ್ತ್ರಗಳಿಂದ ಅಲಂಕೃತನಾಗಿದ್ದು ಸರ್ವಾಭರಣಾ ಭೂಷಿತನಾಗಿರುತ್ತಾನೆ. ಬಲ ಪಾರ್ಶ್ವದ ಒಂದು ಹಸ್ತದಲ್ಲಿ ಅಕ್ಷಮಾಲೆಯನ್ನು ಹಿಡಿದು ಇನ್ನೊಂದು ಹಸ್ತವನ್ನು ಮೂರ್ತಿವೆತ್ತ ವ್ಯವಸಾಯದ (ಉದ್ದಿಮೆ) ತಲೆಯ ಮೇಲಿರಬೇಕು. ಎಡಹಸ್ತಗಳಲ್ಲಿ ಒಂದರಲ್ಲಿ ಪುಸ್ತಕ ಹಿಡಿದಿದ್ದು, ಇನ್ನೊಂದರಲ್ಲಿ ಪದ್ಮವನ್ನು ಹಿಡಿದಿರಬೇಕು. ಈ ಹಸ್ತವು ಸುಂದರವಾದ ವೃಷಭದ ತಲೆಯ ಮೇಲಿರಬೇಕು.

## ೨೭. ನರ ನಾರಾಯಣ

ಭಾಗವತ (೨ : ೭ : ೬)ದಲ್ಲಿ ಧರ್ಮನಿಂದ ದಕ್ಷಪ್ರಜಾಪತಿಯ ಮಗಳಲ್ಲಿ ನಾರಾಯಣನು ಜನ್ಮಿಸಿದನೆಂದು ಈತನು ನರನೊಂದಿಗೆ ಇದ್ದನೆಂದು ತಿಳಿಸಲಾಗಿದೆ. ಬದರಿಕಾಶ್ರಮದಲ್ಲಿ ನರ - ನಾರಾಯಣರು ಒಟ್ಟಾಗಿ ಇದ್ದರು. ಅವರನ್ನು ವಿಷ್ಣುವಿನ ಅವತಾರವೆಂದು ಪರಿಗಣಿಸಿದ್ದರು. ದ್ವಾಪರಯುಗದಲ್ಲಿ ಇವರು ಅರ್ಜುನ ಮತ್ತು ಕೃಷ್ಣರಾಗಿ ಹುಟ್ಟಿದರು (ಮಹಾಭಾರತ, ಶಾಂತಿಪರ್ವ, ೩೪೪). ಅದೇ ಮಹಾಭಾರತದಲ್ಲಿ (ಆದಿಪರ್ವ ೧೯೬ : ೩೨) ನಾರಾಯಣನ ಕಪ್ಪು ಕೂದಲುಗಳಿಂದ ಕೃಷ್ಣನು, ಬಿಳಿಯ ಕೂದಲುಗಳಿಂದ ಬಲರಾಮನು ಮೂಡಿಬಂದರೆಂದು ಹೇಳಲಾಗಿದೆ. ಪದ್ಮ ಪುರಾಣದ (ಉತ್ತರಖಂಡ ೨) ಪ್ರಕಾರ ನರನು ಗೌರವರ್ಣದವನಾಗಿಯೂ ನಾರಾಯಣನು ಶ್ಯಾಮಲ ವರ್ಣದವನಾಗಿಯೂ ಇದ್ದರು.

ಕಾಳಿಕಾಪುರಾಣದಲ್ಲಿ (ಅಧ್ಯಾಯ ೨೯) ಹೇಳಿರುವ ವಿವರಗಳಿಂದ ನರ - ನಾರಾಯಣರ ವಿಷ್ಣುವಿನ ನರಸಿಂಹಾವತಾರದ ನಂತರ ಜನ್ಮಿಸಿದರು. ನರಸಿಂಹಾವತಾರದ ಉದ್ದೇಶ ಸಫಲವಾದ ನಂತರ ನರಸಿಂಹ ತನ್ನ ದೇಹತ್ಯಾಗ ಮಾಡಲು ತೀರ್ಮಾನಿಸಿದ. ಆಗ ಶಿವನು ಶರಭಾವತಾರವನ್ನು ತಾಳಿ ನರಸಿಂಹನ ದೇಹವನ್ನು ಎರಡಾಗಿ ಸೀಳಿದ **(ನರಸಿಂಹಂ ಮಹಾಬಲಂ ಶರಭೋ ಭಗವಾನ್ ಭರ್ಗಃ ದ್ವಿವಿಧಾ ಮಧ್ಯೇ ಚಕಾರ ಹಾ)**. ನರಸಿಂಹನ ನರಾಕಾರದ ದೇಹದಿಂದ ದಿವ್ಯರೂಪದ ಮಹರ್ಷಿ ಉದ್ಭವಿಸಿದ. ಸಿಂಹದ ತಲೆಯಿಂದ ಮಹಾ ತೇಜಸ್ಸಿನ ಮುನಿರೂಪಿ ಜನಾರ್ದನನು ಮೂಡಿಬಂದ. ಇವರೇ ನರ - ನಾರಾಯಣರು. ಇವರಿಬ್ಬರೂ ಸಕಲ ಸೃಷ್ಟಿಗೆ ಕಾರಣಭೂತರಾದರು.

ಮಹಾಭಾರತದ ಉದ್ಯೋಗ ಪರ್ವದಲ್ಲಿ ಈ ಉದಂತವಿದೆ : ದಂಭೋದ್ಭವನು

ವಿಶ್ವವನ್ನು ಆಳುತ್ತಿದ್ದ. ಅವನಿಗೆ ತನ್ನ ಶಕ್ತಿ ಮತ್ತು ಪರಾಕ್ರಮಗಳ ಬಗ್ಗೆ ಅಮಿತವಾದ ಗರ್ವವಿತ್ತು. ಗಂಧಮಾಧನ ಪರ್ವತಗಳ ಮೇಲೆ ನರ ನಾರಾಯಣರೆಂಬ ಇಬ್ಬರು ಮುನಿಗಳು ಇಂದ್ರನಿಗಿಂತಲೂ ಬಲಶಾಲಿಗಳೆಂದು ಕೇಳಿದ. ಅವರ ಬಲ ಪರೀಕ್ಷಿಸಬೇಕೆಂದುಕೊಂಡು ಅವರ ಬಳಿಗೆ ಹೋಗಿ ಯುದ್ಧಕ್ಕೆ ಆಹ್ವಾನಿಸಿದ. ಪ್ರಾಪಂಚಿಕ ವ್ಯವಹರದಿಂದ ದೂರವಾಗಿ ಆಧ್ಯಾತ್ಮದಲ್ಲಿ ಬದುಕು ಸವೆಸುತ್ತಿರುವುದಾಗಿ ಹೇಳಿ ನರ ನಾರಾಯಣರು ಆ ಆಹ್ವಾನವನ್ನು ನಿರಾಕರಿಸಿದರು. ಈ ಉತ್ತರದಿಂದ ದಂಬೋದ್ಭವನಿಗೆ ತೃಪ್ತಿಯಾಗಲಿಲ್ಲ. ತನ್ನ ಆಹ್ವಾನವನ್ನು ಅಂಗೀಕರಿಸಿ ಯುದ್ಧಕ್ಕೆ ಬರಬೇಕೆಂದು ಅವರನ್ನು ಒತ್ತಾಯಿಸಿದ. ಇದರಿಂದ ದಂಬೋದ್ಭವನು ಕೂಡಲೇ ನಿರ್ವೀರ್ಯನಾಗಿ ನಿತ್ರಾಣನಾದ. ನಂತರ ಅವನಿಗೆ ಗರ್ವವು ಸಲ್ಲದೆಂದು ನಾರಾಯಣ ಬುದ್ಧಿಹೇಳಿದ. ಈ ರೀತಿಯ ಅನೇಕ ಕಥೆಗಳು ದೊರೆಯತ್ತವೆ.

ನರ ನಾರಾಯಣರ ತಪಸ್ಸಿಗೆ ಇಂದ್ರನು ಹೆದರಿ, ಅವರ ತಪಸ್ಸಿಗೆ ಭಂಗವನ್ನುಂಟು ಮಾಡಲು ಪ್ರಯತ್ನಿಸಿದ. ಸಾಧ್ಯವಾಗದೆ ತನ್ನ ಲೋಕದ ಕಾಮ ಮತ್ತು ರತಿಯರನ್ನು, ರಂಭಾ, ಮೇನಕೆ, ತಿಲೋತ್ತಮೆಯರೊಂದಿಗೆ ಕಳುಹಿಸಿದ. ಆದರೆ ಇವರಿಂದಲೂ ನರ ನಾರಾಯಣರ ತಪಸ್ಸನ್ನು ಭಂಗಗೊಳಿಸುವುದು ಸಾಧ್ಯವಾಗಲಿಲ್ಲ. ಇವರನ್ನು ಹಿಂದಿರುಗಿ ಕಳುಹಿಸಲು ನಾರಾಯಣ ಒಂದು ಯೋಜನೆಯನ್ನು ಹೂಡಿದ. ತನ್ನ ತೊಡೆಯನ್ನು ತಟ್ಟಿಕೊಂಡು ಅದರಿಂದ ಸುರಸುಂದರಿಯೊಬ್ಬಳು ಬರುವಂತೆ ಮಾಡಿದ. ಅವಳು ಅಲ್ಲಿದ್ದ ಎಲ್ಲಾ ಸುಂದರಿಯರಿಗಿಂತಲೂ ಸುಂದರಿಯಾಗಿದ್ದಳು. ತೊಡೆಯಿಂದ ಹುಟಿದ್ದರಿಂದ ಆಕೆಯನ್ನು *ಊರ್ವಶಿ* ಎಂದು ಕರೆಯಲಾಯಿತು. ಊರ್ವಶಿಯನ್ನು ಕಂಡ ರಂಭೆ, ಮೇನಕೆಯರು ನಾಚಿಕೆಯಿಂದ ತಲೆ ತಗ್ಗಿಸಿ ನಾರಾಯಣನ ಕ್ಷಮೆ ಕೋರಿದರು. ನಾರಾಯಣ ಅವರನ್ನು ಕ್ಷಮಿಸಿ ಊರ್ವಶಿಯನ್ನೂ ಅವರೊಂದಿಗೆ ಇಂದ್ರಲೋಕಕ್ಕೆ ಕಳುಹಿಸಿದ.

ಇದೇ ಕಥೆ ಸ್ವಲ್ಪ ಬದಲಾವಣೆಯೊಂದಿಗೆ ವಿಷ್ಣುಧರ್ಮೋತ್ತರದಲ್ಲಿ (೩ : ೩೫) ಹೇಳಲಾಗಿದೆ. ಮಾವಿನ ಹಣ್ಣಿನ ರಸದಿಂದ ಸುಂದರಿಯ ಚಿತ್ರವನ್ನು ನಾರಾಯಣನು ನೆಲದ ಮೇಲೆ ಬರೆದ **(ಸಹಕಾರ ರಸಂ ಗೃಹ್ಯ ಉರ್ವ್ಯಾಂ ಚಕಾರ ವರಸ್ತ್ರೀಯಂ)**. ಆ ಚಿತ್ರವೇ ಹೆಣ್ಣಾಯಿತು. ಮಣ್ಣಿನಿಂದ (ಉರ್ವಿ) ಬಂದುದರಿಂದ ಅವಳನ್ನು *ಊರ್ವಶಿ* ಎಂದು ಕರೆದರು.

ಮನುಸ್ಮೃತಿಯಲ್ಲಿ (೩ : ೧ : ೧೦) ನರ ಎಂದರೆ ಕ್ಷಯಿಸದೆ ಇರುವುದು **(ನ ರೀಯತೇ ಕ್ಷೀಯತೇ)** ಎಂದು ಹೇಳಿ ಈ ಪದವು ಪರಮಾತ್ಮ ಸೂಚಕವಾಗಿದ್ದು, ಸೃಷ್ಟಿ ತತ್ತ್ವದ ಮೂಲಶಕ್ತಿಯಾದ ನೀರನ್ನು **(ನಾರಂ)** ಸೃಷ್ಟಿಸುವ ಶಕ್ತಿಎಂದು ಈ ನೀರಿನಲ್ಲಿ ಅಡಗಿರುವ ಅನಂತ ಪರಮಾತ್ಮಶಕ್ತಿಯೇ ನಾರಾಯಣ (ನೀರಿನಲ್ಲಿರುವವನು) ಎಂದು ವಿವರಿಸಲಾಗಿದೆ.

ನರ ನಾರಾಯಣ ಪ್ರತಿಮಾ ಕಲ್ಪವು ವಿಷ್ಣುಧರ್ಮೋತ್ತರ ಪುರಾಣದಲ್ಲಿ ಈ ರೀತಿಯಾಗಿದೆ:

**ದೂರ್ವಾಶ್ಯಾಮೋ ನರಃ ಕಾರ್ಯೋ ದ್ವಿಭುಜಶ್ಚ ಮಹಾಬಲಃ**
**ನಾರಾಯಣಶ್ಚತುರ್ಬಾಹು ರ್ನೀಲೋತ್ಪಲ ಚ್ಛವಿಃ ||**
**ತಯೋರ್ಮಧ್ಯೇ ತು ಬದರೀ ಕಾರ್ಯೋ ಫಲವಿಭೂಷಣಾ**
**ಬದರ್ಯಾಮವನೌ ಕಾರ್ಯಾವಕ್ಷಮಾಲಾಧರಾವು ಭೌ ||**

**ಅಷ್ಟಚಕ್ರಂ ಸ್ಥಿತೌ ಯಾನೇ ಸೂತಯುಕ್ತೇ ಮನೋರಮೇ**

**ಕೃಷ್ಣಾಜಿನಧರೌ ದಾಂತೌ ಜಟಾಮಂಡಲ ಧಾರಿಣೌ ||**

**ಪಾದೇನ ಚೈಕೇನ ರಥಸ್ಥಿತೇನ ಪಾದೇನ ಚೈಕೇನ ಚ ಜಾನುಗೇನ**

**ಕಾರ್ಯೋ ಹರಿಶ್ಚಾತ್ರ ನರೇಣ ತುಲ್ಯಃ ಕೃಷ್ಣೋಽಪಿ ನಾರಾಯಣತುಲ್ಯ ಮೂರ್ತಿಃ ||**

ನರನ ಪ್ರತಿಮೆ ಗರಿಕೆಹುಲ್ಲಿನ ಬಣ್ಣದಲ್ಲಿರಬೇಕು. ಎರಡು ತೋಳುಗಳು ಒಂದು ತಲೆ ಇರುತ್ತದೆ. ತೋಳುಗಳು ಬಲವಾಗಿರಬೇಕು. ನಾರಾಯಣನು ನೀಲಿವರ್ಣದಲ್ಲಿದ್ದು ನಾಲ್ಕು ತೋಳುಗಳನ್ನು ಹೊಂದಿರಬೇಕು. ಇಬ್ಬರು ಬದರಿ ವೃಕ್ಷದ ಕೆಳಗೆ ಕುಳಿತಿರಬೇಕು. ಇಬ್ಬರೂ ಕೃಷ್ಣಾಜಿನಗಳನ್ನು ತೊಟ್ಟು ಜಟಾಮಂಡಲಗಳನ್ನು ಧರಿಸಿರಬೇಕು. ಅಥವ ಎಂಟು ಚಕ್ರಗಳುಳ್ಳ ರಥದಲ್ಲಿ ನಾರಾಯಣನು ಕೃಷ್ಣನ ರೂಪದಲ್ಲೂ, ನರನು ಅರ್ಜುನನ ರೂಪದಲ್ಲೂ ಕುಳಿತಿರಬೇಕು.

## ೨೮. ಧನ್ವಂತರಿ

ವೈದ್ಯರ ಅಭಿಮಾನಿ ದೇವ. ಆಯುರ್ವೇದದ ಪ್ರವರ್ತಕ ದೇವ. ಭಾಗವತದಲ್ಲಿ ಹೇಳಲಾಗಿರುವ ವಿಷ್ಣುವಿನ ಇಪ್ಪತ್ತೆರಡು ಅವತಾರಗಳಲ್ಲಿ ಒಂದು. ಆದರೆ ಹರಿವಂಶ (೨೯ : ೧೫೨೩)ದಲ್ಲಿ ಈತನನ್ನು ವಿಷ್ಣು ಭಕ್ತ ಎಂದು ಹೇಳಲಾಗಿದೆ. ಸಮುದ್ರ ಮಥನದಲ್ಲಿ ಅಮೃತಕುಂಭವನ್ನು ಕೈಯ್ಯಲ್ಲಿ ಹಿಡಿದುಕೊಂಡು ಸಮುದ್ರದಿಂದ ಹೊರಬಂದ (ಮಹಾಭಾರತ, ಅನುಶಾಸನ ಪರ್ವ ೧೬ : ೩೭). ಈತನು ಸಾಗರದಿಂದ ಬರುತ್ತಲೇ ದಶದಿಶೆಗಳು ಕಾಂತಿವಂತವಾದವು. ವಿಷ್ಣುವು ಈತನನ್ನು ನೋಡಿ 'ಅಬ್ಜ' ಎಂದು ಕರೆದ. ಧನ್ವಂತ್ರಿಯು 'ಯಜ್ಞದಲ್ಲಿ ನನ್ನ ಸ್ಥಾನವನ್ನು ಮತ್ತು ಹವಿಸ್ಸನ್ನು ನಿಷ್ಕರ್ಷಿಸಿ' ಎಂದು ವಿಷ್ಣುವನ್ನು ಪ್ರಾರ್ಥಿಸಿದ. ವಿಷ್ಣುವು 'ಇದು ಈಗಾಗಲೇ ಹಂಚಿದ್ದಾಗಿದೆ. ಮುಂದಿನ ಜನ್ಮದಲ್ಲಿ ನಿನ್ನ ಈ ಬಯಕೆ ಪೂರ್ಣವಾಗುತ್ತದೆ. ಆ ಜನ್ಮದಲ್ಲಿ ನಿನಗೆ ವಿಶೇಷವಾದ ಪ್ರಖ್ಯಾತಿ ಲಭಿಸುತ್ತದೆ. ಅಣಿಮಾದಿ ಅಷ್ಟಸಿದ್ಧಿಗಳು ಗರ್ಭದಲ್ಲಿಯೇ ಪ್ರಾಪ್ತವಾಗುತ್ತವೆ. ಸಶರೀರಿಯಾಗಿ ದೈವತ್ವವನ್ನು ಪಡೆದುಕೊಳ್ಳುತ್ತೀಯೆ. ಆಯುರ್ವೇದವನ್ನು ಎಂಟು ಭಾಗಗಳಾಗಿ ವಿಭಜಿಸುತ್ತೀಯೆ. ಇದಕ್ಕಾಗಿ ಜನರೇ ನಿನಗೆ ಸಮಂತ್ರಕವಾಗಿ ಆಹುತಿ ನೀಡುತ್ತಾರೆ' ಎಂದು ಹೇಳಿದ.

ಇದೇ ಮಾತಿನಂತೆ ದ್ವಾಪರಯುಗದಲ್ಲಿ ಕಾಶಿ ರಾಜನಾದ ಧನ್ವ (ಸೌನಹಿತ್ರ)ನ ಮಗನಾಗಿ ಹುಟ್ಟಿದ. ಈ ಹುಟ್ಟಿನಲ್ಲಿ ಭರದ್ವಾಜ ಋಷಿ ಪ್ರಣೀತವಾದ ಆಯುರ್ವೇದ ಶಾಸ್ತ್ರವನ್ನು ಎಂಟು ಭಾಗಗಳಾಗಿ ವಿಭಜಿಸಿದ. ಜನರನ್ನು ರೋಗದಿಂದ ಮುಕ್ತರನ್ನಾಗಿ ಮಾಡಿದ (ವಾಯುಪುರಾಣ ೯೨ : ೯ - ೨೨). ಈ ಮಹಾಕಾರ್ಯಕ್ಕಾಗಿ ನಿತ್ಯಕರ್ಮದಲ್ಲಿಯ ಪಂಚಮಹಾಯಜ್ಞ ವೈಶ್ವದೇವದಲ್ಲಿ ಯಜ್ಞಾಹುತಿ ದೊರೆಯಲು ಪ್ರಾರಂಭವಾಯಿತು.

(ಅ) ಋಗ್ವೇದದಲ್ಲಿ ಧನ್ವಂತ್ರಿಯ ಹೆಸರು ದೊರೆಯುವುದಿಲ್ಲವಾದರೂ ದಿವೋದಾಸನ ಉಲ್ಲೇಖವಿದೆ. ಈ ಸ್ವಾಮಿಯ ರೂಪಕಲ್ಪನೆಯು ಇಂತಿದೆ

**ಅಥೋದಧೇರ್ಮಥ್ಯಮಾನಾತ್ ಕಾಶ್ಯಪೈರಮೃತಾರ್ಥಿಭಿಃ**

**ಉದತಿಷ್ಠನ್ಮಹಾರಾಜ ಪುರುಷಃ ಪರಮಾದ್ಭುತಃ ||**

**ದೀರ್ಘಪೀವರದೋರ್ದಂಡಃ ಕಂಬುಗ್ರೀವೋಽರುಣೇಕ್ಷಣಃ**

**ಶ್ಯಾಮಲಸ್ತರುಣಃ ಸ್ರಗ್ವೀ ಸರ್ವಾಭರಣಭೂಷಿತಃ ||**

**ಪೀತವಾಸಾ ಮಹೋರಸ್ಕಃ ಸುಮೃಷ್ಟಮಣಿಕುಂಡಲಃ**

**ಸ್ನಿಗ್ಧಕುಂಚಿತಕೇಶಾಂತಃ ಸುಭಗಃ ಸಿಂಹವಿಕ್ರಮಃ ||**

**ಅಮೃತ ಪೂರ್ಣಕಲಶಂ ಬಿಭ್ರದ್ ವಲಯಭೂಷಿತಃ**

**ಸ ವೈ ಭಗವತಃ ಸಾಕ್ಷಾದ್ ವಿಷ್ಣೋರಂಶಾಂಶಸಂಭವಃ ||**

**ಧನ್ವಂತರಿರಿತಿ ಖ್ಯಾತಃ ಆಯುರ್ವೇದ ದೃಗ್ ಇಜ್ಯಭಾಕ್**

(ಭಾಗವತ ೮ : ೮ ೩೨ - ೩೫ 'ಧನ್ವಂತರಿ ಸ್ತೋತ್ರಂ')

ಸಮುದ್ರ ಮಥನವನ್ನು ಸುರ - ಅಸುರರು ಸೇರಿ ನಡೆಸಿದಾಗ ಅದ್ಭುತವಾದ ಪುರುಷನೊಬ್ಬನು ಸರ್ವಾಭರಣಭೂಷಿತನಾಗಿದ್ದು ಹಳದಿ ವರ್ಣದ ವಸ್ತ್ರಗಳನ್ನು ಧರಿಸಿದ್ದು, ವಿಶಾಲವಾದ ವಕ್ಷಸ್ಥಲ ಮತ್ತು ಮಣಿ ಕುಂಡಲಗಳನ್ನು ಧರಿಸಿದ್ದು, ಸಿಂಹದಂತಹ ಪರಾಕ್ರಮಶಾಲಿಯಾಗಿರುವ, ಕೆಂಪುಕಣ್ಣು, ಶಂಖದಂತಹ ಸುಂದರ ಕೊರಳು ಪಡೆದಿದ್ದು ಅಮೃತ ಕಲಶವನ್ನು ಹಿಡಿದು ಬಂದ. ಆತನು ಸಾಕ್ಷಾತ್ ವಿಷ್ಣುವಿನ ಅಂಶಾವತಾರಿ. ಧನ್ವಂತರಿ ಎಂಬುದು ಆತನ ಹೆಸರು. ಮನುಕುಲಕ್ಕೆ ಆಯುರ್ವೇದವು ಆತನ ಕೊಡುಗೆಯೇ.

(ಆ) ವಿಷ್ಣುಧರ್ಮೋತ್ತರ ಪುರಾಣವು ಹೀಗೆ ಹೇಳುತ್ತದೆ -

**ಧನ್ವಂತರಿ ಸ್ತು ಕರ್ತವ್ಯ ಸ್ಸುರೂಪಃ ಪ್ರಿಯದರ್ಶನಃ**

**ಕರದ್ವಯಗತಸ್ತಾಸ್ಯ ಸಾಮೃತಃ ಕಲಶೋ ಭವೇತ್ ||**

ಸುಂದರಾಕಾರನು, ನೋಡಲು ಬಹು ಚೆನ್ನಾಗಿರುವವನೂ ತನ್ನ ಎರಡೂ ಕೈಗಳಿಂದ ಅಮೃತ ತುಂಬಿರುವ ಕಲಶವನ್ನು ಹಿಡಿದಿರುವವನು ಧನ್ವಂತರಿ.

(ಇ) ಎರಡೂ ಕೈಗಳಿಂದ ಅಮೃತ ಕುಂಭವನ್ನು ತನ್ನ ಮೇಲೆ ಸುರಿದುಕೊಳ್ಳುತ್ತಿರುತ್ತಾನೆ ಎಂದು ಪ್ರಪಂಚಸಾರ ಸಂಗ್ರಹ ಹೇಳುತ್ತದೆ.

(ಈ) ಪ್ರಪಂಚ ಸಾರ ಸಂಗ್ರಹದಲ್ಲಿ ಇನ್ನೊಂದು ಧ್ಯಾನ ಶ್ಲೋಕವು ಈ ರೀತಿಯಾಗಿದೆ:

**ಶಂಖಂ ಚಕ್ರಂ ಜಲೂಕಾಂ ದಧದಮೃತ ಘಟಂ ಚಾಪಿ ದೋರ್ಭಿಶ್ಚತುರ್ಭಿಃ**

**ಸೂಕ್ಷ್ಮಸ್ವಚ್ಛಾತಿ ಹೃದ್ಯಾಂಶುಕಪರಿವಿಲಸನ್ಮೌಲಿ ಮಂಭೋಜನೇತ್ರಮ್ |**

**ಕಾಲಾಂಭೋದೋಜ್ಜ್ವಲಾಂಗಂ ಕಟಿತಟವಿಲಸಚ್ಚಾರು ಪೀತಾಂಬರಾಢ್ಯಮ್**

**ವಂದೇ ಧನ್ವಂತರಿಂ ತಂ ನಿಖಿಲಗದವನ ಪ್ರೌಢದಾವಾಗ್ನಿಲೀಲಮ್ ||**

ಕಪ್ಪು ತಾವರೆಯಂತಹ ಮೈಕಾಂತಿಯ ಧನ್ವಂತರಿಯು ನಾಲ್ಕು ತೋಳುಗಳನ್ನು ಪಡೆದಿರುತ್ತಾನೆ. ಶಂಖ - ಚಕ್ರಗಳನ್ನು. ಜಿಗಣೆ ಮತ್ತು ಅಮೃತಕಲಶವನ್ನು ಧರಿಸಿರುತ್ತಾನೆ. ಹಳದಿ ರೇಷ್ಮೆವಸ್ತ್ರಗಳನ್ನು ಧರಿಸಿರುತ್ತಾನೆ. ಜಲೂಕ ಎಂದರೆ ಜಿಗಣೆ ಎಂದೇ ಅರ್ಥವಿದ್ದರೂ ಸಂಪ್ರದಾಯಿಕ ಶಿಲ್ಪಿಗಳು ಶಲ್ಯಚಿಕಿತ್ಸಾ ಅಸ್ತ್ರಗಳನ್ನು ಆಯುರ್ವೇದ ಮೂಲಿಕೆಗಳನ್ನು ಈ ಹಸ್ತದಲ್ಲಿ ಚಿತ್ರಿಸಿರುವುದು ಉಂಟು. ಇದೇ ರೀತಿಯ ಅರ್ಥವನ್ನು ಅವರು ಹೇಳುತ್ತಾ ಬಂದಿದ್ದಾರೆ.



ಚಿತ್ರ ೧೦೬ : ಧನ್ವಂತ್ರಿ - ೧



ಚಿತ್ರ ೧೦೭ : ಧನ್ವಂತ್ರಿ - ೨

## ೨೯. ವರದರಾಜ / ಕರಿವರದ

ಗಜೇಂದ್ರ ಮೋಕ್ಷದ ಕಥೆಯು ಬಹು ಜನಪ್ರಿಯವಾದದ್ದು. ವೈಷ್ಣವರಿಗಂತೂ ಇದು ಬಹು ಇಷ್ಟವಾದ ಕಥೆ ; ವಿಷ್ಣುವಿನ ಭಕ್ತಪ್ರೀತಿಯನ್ನು ಸಾರುವ ಕಥೆ. ಭಾಗವತದ ಎಂಟನೆಯ ಸ್ಕಂದದಲ್ಲಿ ಈ ಕಥೆಯು ವಿವರವಾಗಿ ದೊರೆಯುತ್ತದೆ. ಪಾಂಡ್ಯರಾಜ್ಯದ ಅರಸ ಇಂದ್ರದ್ಯುಮ್ನನು ವಿಷ್ಣುವಿನ ಮಹಾಭಕ್ತ. ಅಗಸ್ತ್ಯರ ಶಾಪದಿಂದ ಆನೆಯಾಗಬೇಕಾಯಿತು. ಆನೆಯು ಹಿಂಡಿನ ನಾಯಕನಾಗಿ ತ್ರಿಕೂಟಾಚಲದಲ್ಲಿಯ ಋತುಮತ ವನದಲ್ಲಿತ್ತು. ಅಲ್ಲಿಯ ಸರೋವರಕ್ಕೆ ನೀರುಕುಡಿಯಲು ಆನೆ ಒಮ್ಮೆ ಬಂದಾಗ ಮೊಸಳೆಯೊಂದು ಅದರ ಕಾಲನ್ನು ಹಿಡಿದೆಳೆಯತೊಡಗಿತು. ಆನೆ ತಾವರೆಯನ್ನು ತನ್ನ ಸೊಂಡಿಲಲ್ಲಿ ಹಿಡಿದು ವಿಷ್ಣುವನ್ನು ಪ್ರಾರ್ಥಿಸಿತು. ಕೂಡಲೇ ವಿಷ್ಣು ಬಂದು, ತನ್ನ ಚಕ್ರವನ್ನು ಪ್ರಯೋಗಿಸಿ, ಮೊಸಳೆಯನ್ನು ಕೊಂದು, ಆನೆಯನ್ನು ಬಿಡಿಸಿದ. ಮೊಸಳೆಯು ಹುಹು ಎಂಬ ಗಂಧರ್ವ. ದೇವಲ ಋಷಿಯು ಮೊಸಳೆಯಾಗುವಂತೆ ಅವನನ್ನು ಶಪಿಸಿದ್ದ. ಆ ಶಾಪದಿಂದ ಅವನೂ ಮುಕ್ತನಾದ. ವಿಷ್ಣುವು ಆನೆಯನ್ನು ಇಂದ್ರದ್ಯುಮ್ನನನ್ನಾಗಿ ಮಾಡಿ ಅವನ ಸತ್ಕರ್ಮಗಳಿಗೆ ಮೆಚ್ಚಿ ತನ್ನ ಪಾರ್ಷದರಲ್ಲಿ ಒಬ್ಬನನ್ನಾಗಿ ಮಾಡಿಕೊಂಡ.

ಈ ಕಥೆ ಮೊದಲಿಗೆ ಕ್ರಿ.ಶ. ಐದನೆಯ ಶತಮಾನದಲ್ಲಿ ಗುಪ್ತಕಾಲದ ದೇವಾಲಯದಲ್ಲಿ ಚಿತ್ರಿತವಾಗಿರುವುದು ದೊರೆಯುತ್ತದೆ. ವರದರಾಜ ಎಂದರೆ ವರಗಳನ್ನು ಕೊಡುವವರಲ್ಲಿ ರಾಜ ಎಂದು. ಇದು ವಿಷ್ಣುವಿಗೆ ಇರುವ ಹೆಸರುಗಳಲ್ಲಿ ಒಂದು. ಕರಿವರದ ಎಂದರೆ ಆನೆಯನ್ನು ರಕ್ಷಿಸಿದವನು ಎಂದು.

ಇದರಲ್ಲಿ ವಿಷ್ಣು ನಾಲ್ಕು ತೋಳುಗಳೊಂದಿಗೆ ಸಾಧಾರಣವಾಗಿ ಚಕ್ರ - ಶಂಖ - ಗದಾ - ಪದ್ಮಗಳನ್ನು ಧರಿಸಿರುತ್ತಾನೆ.

ಕೆಲವು ಬಾರಿ ವಿಷ್ಣು ಎಂಟು ತೋಳುಗಳಲ್ಲಿರುವಂತೆ ಚಿತ್ರಿಸಲಾಗುತ್ತದೆ. ಆಗ ಚಕ್ರ- ಶಂಖ, ಖಡ್ಗ - ಖೇಟಕ, ಧನುಸ್ಸು - ಬಾಣ, ಗದಾ - ಪದ್ಮಗಳನ್ನು ಧರಿಸಿರುವುದುಂಟು. ಇದರಲ್ಲಿ ಗದಾ ಪದ್ಮಗಳು ಇಲ್ಲದೆ ಅಥವ ಗದೆ ಇಲ್ಲದೆ ಸ್ವಾಮಿಯನ್ನು ರೂಪಿಸುವುದೂ ಉಂಟು (ಅಷ್ಟ ಭುಜಸ್ವಾಮಿಯ ರೂಪವು ಇದೇ).

## ೩೦. ಅಷ್ಟಭುಜಸ್ವಾಮಿ

ವಿಷ್ಣುವಿನ ತ್ರಿವಿಕ್ರಮ, ನರಸಿಂಹ ಮತ್ತು ರಾಜಗೋಪಾಲ ರೂಪಗಳು ಮತ್ತು ಇತರ ರೂಪಗಳು ಎಂಟು ಭುಜಗಳನ್ನು ಪಡೆದಿರುವುದುಂಟು. ಅದರಲ್ಲೂ ಕೃಷ್ಣನ ವೇಣುಗೋಪಾಲ ರೂಪವು ಈ ರೀತಿ ಎಂಟು ಭುಜಗಳಲ್ಲಿ ಪಡೆದು ಹಲವು ಬಗೆಗಳಲ್ಲಿದೆ. ಇದೇ ಅಲ್ಲದೆ ವಿಷ್ಣುವೇ ಎಂಟು ಭುಜಗಳನ್ನು ಪಡೆದಿರುವುದು ಹಲವು ಮೂರ್ತಿಗಳಲ್ಲಿ ಕಾಣಸಿಗುತ್ತದೆ. ಬಲಪಾರ್ಶ್ವದಲ್ಲಿ ಕೆಳಗಿನಿಂದ ಮೇಲಕ್ಕೆ ಕ್ರಮವಾಗಿ ಅಭಯಮುದ್ರೆ, ಬಾಣ, ಖಡ್ಗ ಮತ್ತು ಚಕ್ರವನ್ನೂ, ಎಡ ಪಾರ್ಶ್ವದಲ್ಲಿ ಕೆಳಗಿನಿಂದ ಮೇಲಕ್ಕೆ ಕ್ರಮವಾಗಿ ವರದಮುದ್ರೆ, ಬಿಲ್ಲು, ಖೇಟಕ(ಗುರಾಣಿ)ಮತ್ತು ಶಂಖವನ್ನು ಧರಿಸಿರುತ್ತಾನೆ.



ಚಿತ್ರ ೧೦೮ : ವರದರಾಜ

ಈ ರೂಪದಲ್ಲಿ ಆಯುಧಗಳು ವ್ಯತ್ಯಸ್ಥವಾಗಿಯೂ ರೂಪಿತವಾಗಿರುವುದುಂಟು ಆಗ ಗದೆ, ಪದ್ಮ, ಪಾಶ, ಅಂಕುಶಗಳೂ ರೂಪಿತವಾಗಿವೆ.

ಕೃಷ್ಣನು ವೇಣುಗೋಪಾಲನಾಗಿ ಎಂಟು ಹಸ್ತಗಳೊಂದಿಗೆ ಚಿತ್ರಿತವಾದಾಗ ವಿಷ್ಣುವಿನ ಆಯುಧಗಳಾದ ಶಂಖ - ಚಕ್ರ- ಗದೆ - ಪದ್ಮಗಳು ನಾಲ್ಕು ಹಸ್ತಗಳಲ್ಲಿ ಧರಿಸಿದ್ದು ಎರಡು ಹಸ್ತಗಳಿಂದ ಸ್ವಾಮಿಯು ಮುರಳಿಯನ್ನು ನುಡಿಸುತ್ತಿರುತ್ತಾನೆ. ಇನ್ನು ಉಳಿದ ಎರಡು ಹಸ್ತಗಳು ಧ್ಯಾನ ಮುದ್ರೆಯಲ್ಲಿರುತ್ತವೆ. ಅಥವ ಈ ಹಸ್ತಗಳಲ್ಲಿ ಪಾಶ,ಅಂಕುಶಗಳನ್ನು ಧರಿಸಿರುವುದೂ ಉಂಟು. ಬಿಲ್ಲು ಬಾಣಗಳು ಇಳ್ಳು ಧನಸ್ಸು (ಕಬ್ಬಿನ ಜಲ್ಲೆಯ ಬಿಲ್ಲು) ಮತ್ತು ಪುಷ್ಪಬಾಣಗಳಾಗಿ ರೂಪಿಸಿರುವುದೂ ಉಂಟು.

ಎಂಟು ತೋಳುಗಳ ಈ ಸ್ವಾಮಿ ನಿಂತಿರುತ್ತಾನೆ. ಬಲಪಾರ್ಶ್ವದ ಕೆಳಹಸ್ತದಲ್ಲಿ ಮೇಲಕ್ಕೆ ಕ್ರಮವಾಗಿ ಅಭಯ ಮುದ್ರೆ, ಬಾಣ, ಖಡ್ಗ ಮತ್ತು ಚಕ್ರಗಳನ್ನು ಧರಿಸಿರುತ್ತಾನೆ. ಎಡದ ಪಾರ್ಶ್ವದ ಕೆಳಹಸ್ತದಲ್ಲಿ ಮೇಲಕ್ಕೆ ಕ್ರಮವಾಗಿ ವರದ ಮುದ್ರೆ, ಬಿಲ್ಲು, ಖೇಟಕ (ಗುರಾಣಿ) ಮತ್ತು ಶಂಖಗಳನ್ನು ಧರಿಸಿರುತ್ತಾನೆ.

## ೩೧. ವೆಂಕಟೇಶ್ವರ

ಶ್ರೀಪರ್ವತ (ತಿರುಮಲೈ) ಅಥವ ಶೇಷಾಚಲ ಎಂದು ಹೆಸರಾಗಿರುವ ಪರ್ವತ ಶ್ರೇಣಿಯ ಮೇಲೆ ಸ್ಥಿತನಾಗಿರುವ ದೇವನನ್ನು ವೆಂಕಟೇಶ್ವರ ಎನ್ನುತ್ತಾರೆ. ಸ್ಕಾಂದ ಪುರಾಣದಲ್ಲಿ ಈ ಸ್ವಾಮಿಯನ್ನು ಶ್ರೀನಿವಾಸ ಎಂದು ಹೆಸರಿಸಲಾಗಿದೆ (ಸ್ಕಾಂದ ೨ : ೧ : ೪ - ೮). ಉತ್ತರ ಭಾರತದಲ್ಲಿ ವೈಶ್ಯ ಮತ್ತು ವಣಿಕರ ದೇವರೆಂದು ಜನಪ್ರಿಯನಾಗಿರುವ ಈ ಸ್ವಾಮಿಯನ್ನು ಬಾಲಾಜಿ ಎಂದೂ ಕರೆಯಲಾಗುತ್ತದೆ. ದಕ್ಷಿಣ ಭಾರತದಲ್ಲಿ ವಿಠ್ಠಲ ಮತ್ತು ವೆಂಕಟೇಶ ವಿಷ್ಣುವಿನ ಸಾಕ್ಷಾತ್ ಸ್ವರೂಪ ಎಂದು ಭಕ್ತರು ಭಾವಿಸುತ್ತಾರೆ. ಇದು ವಿಷ್ಣುವಿನ ಇತರ ಅವತಾರಗಳಿಗಿಂತಲೂ ಸಂಪೂರ್ಣವಾಗಿ ಭಿನ್ನವಾಗಿದೆ.

ವೇಂಕ ಎಂದರೆ ಪಾಪ, ಕಟ ಎಂದರೆ ನಾಶಕ ಎಂಬುದು ಶಬ್ದಾರ್ಥ. ಆದ್ದರಿಂದ ವೆಂಕಟೇಶನೂ, ಆತನು ಇರುವ ಬೆಟ್ಟ, ವೆಂಕಟಾದ್ರಿ ಎರಡೂ ಅತ್ಯಂತ ಪವಿತ್ರವೆಂದು ಭಾವಿಸಲಾಗುತ್ತದೆ. ವೇಂಕಟನು ಶ್ರೀ ವಿಷ್ಣುವೆಂದು, ವೆಂಕಟಾದ್ರಿಯು ಆದಿಶೇಷನೆಂದು ನಂಬುತ್ತಾರೆ. ವೆಂಕಟಾದ್ರಿಯು ಏಳು ಬೆಟ್ಟಗಳ ಒಂದು ಸಮೂಹ. ಏಳು ಮೈಲಿಗಳ ಮೆಟ್ಟಿಲಿನ ದಾರಿಯನ್ನು ಹತ್ತಿ ವೆಂಕಟೇಶನನ್ನು ಕಾಣಬೇಕಾಗಿದೆ.

ವೆಂಕಟೇಶ ಮಹಾತ್ಮೆಯು ಸ್ಕಾಂದ ಪುರಾಣದಲ್ಲಿ ದೊರೆಯುತ್ತದೆ. ಮಹಾಭಾರತದಲ್ಲೂ ಬಲರಾಮನ ತೀರ್ಥಯಾತ್ರೆಯ ವಿವರಣೆಯಲ್ಲಿ ಉಕ್ತವಾಗಿದೆ. ಆದರೆ ವೆಂಕಟೇಶನ ಮೂರ್ತಿಕಲ್ಪ ನಿರ್ಣಯವಾದದು ಶ್ರೀರಾಮಾನುಜಾಚಾರ್ಯರ ಕಾಲದಲ್ಲಿಯೇ. ವೆಂಕಟೇಶನ ಉಪಾಸನೆಯನ್ನು ಪ್ರಚಾರಕ್ಕೆ ತಂದವರೂ ಅವರೇ. ಅವರಿಂದಲೇ ವೈಷ್ಣವ ಸಂಪ್ರದಾಯದ ಅಧಿಷ್ಠಾತೃ ದೇವತೆಗಳಲ್ಲಿ ವೆಂಕಟೇಶನೂ ಸೇರ್ಪಡೆಯಾದದ್ದು.

ಹಲವು ಪ್ರಖ್ಯಾತ ಕ್ಷೇತ್ರಗಳ ಬಗ್ಗೆ ಸಂಶಯಗಳಿರುವಂತೆಯೇ ತಿರುಪತಿಯ ವೆಂಕಟೇಶ್ವರ ಸ್ವಾಮಿಯ ಬಗ್ಗೆಯೂ ಸಂಶಯಗಳಿವೆ. ಜೈನರು ಈ ದೇವನು ತಮ್ಮ ಆರಾಧನಾಮೂರ್ತಿ ಧರಣೇಂದ್ರಮೂರ್ತಿ ಎಂದು ಆ ದೇವನ ಹೆಂಡತಿ ಪದ್ಮಾವತಿ ಎಂದು ಹೇಳುತ್ತಾರೆ. ಬೌದ್ಧರು

ಬೋಧಿಸತ್ವನ ಮೂರ್ತಿಗಳಲ್ಲಿ ಇದೊಂದು ಎನ್ನುತ್ತಾರೆ. ಇದಕ್ಕೆ ಅವರು ಸಿಂಹಳದ ಬೌದ್ಧ ಗ್ರಂಥಗಳಲ್ಲಿ ಆಧಾರಗಳನ್ನು ತೋರುತ್ತಾರೆ. ಶೈವರು ಇದು ಸುಬ್ರಹ್ಮಣ್ಯಸ್ವಾಮಿ ಎನ್ನುತ್ತಾರೆ. ಶಾಕ್ತರು ಇದು ದೇವೀಮೂರ್ತಿ ಎನ್ನುತ್ತಾರೆ. ಇದಕ್ಕೆ ಶುಕ್ರವಾರದಂದು ವಿಶೇಷ ಅಭಿಷೇಕ ಬಿಲ್ವಾರ್ಚನೆಯನ್ನು ದೃಷ್ಟಾಂತವಾಗಿ ತೋರುತ್ತಾರೆ. ಈ ಮೂರ್ತಿಯ ಹಿಂಭಾಗದಲ್ಲಿ ಜಡೆ ಇದೆ ಎನ್ನುತ್ತಾರೆ. ತೋಳಲ್ಲಿ ನಾಗ ಬಂಧ ಇದೆ. ಪ್ರಾಚೀನ ಆಳ್ವಾರೊಬ್ಬರು ನೀನು ಶಿವನೋ ಕೇಶವನೋ ಗೊತ್ತಿಲ್ಲ ಎಂದು ತಮ್ಮ ಪ್ರಾರ್ಥನೆಯಲ್ಲಿ ಹಾಡಿದ್ದಾರೆ.

ಈ ಅನುಮಾನಗಳಿಂದ ವೆಂಕಟೇಶ ಮೂರ್ತಿಯು ಮೊದಲಿಗೆ ಶೈವಮೂರ್ತಿ ಆಗಿರಬಹುದು ಎಂಬ ಸಂಶಯಕ್ಕೆ ಎಡೆ ದೊರೆಯುತ್ತದೆ.

ರಾಮಾನುಜಾಚಾರ್ಯರ ಕಾಲಕ್ಕೆ ಬೌದ್ಧ ಜೈನರ ಪ್ರಭಾವ ಇಳಿದು ಶೈವ ಮತವು ಪ್ರಬಲವಾಗಿತ್ತು. ತಿರುಪತಿಯ ದೇವಾಲಯದ ಬಗ್ಗೆ ಈ ರೀತಿಯ ವಿವಾದವೂ ನಡೆದಿತ್ತು. ಶೈವರು ಪ್ರಬಲರಾಗಿದ್ದುದರಿಂದ ಅವರನ್ನು ಒಪ್ಪಿಸುವುದು ಸುಲಭವಾಗಿರಲಿಲ್ಲ. ಕೊನೆಗೆ ಶಿವ ಕೇಶವರ ಲಾಂಛನವನ್ನು ಗರ್ಭಗುಡಿಯಲ್ಲಿರಿಸಿ ಬೀಗಹಾಕಿ ಬೆಳಗೆ ದೇವರು ಯಾವ ಲಾಂಛನ ಸ್ವೀಕರಿಸಿದ್ದರೆ ಅವರು ಪೂಜಾದಿಗಳನ್ನು ವಹಿಸಿ ನಡೆಸಬೇಕೆಂದು ಎರಡು ಪಕ್ಷಗಳೂ ಅಂಗೀಕರಿಸಿದರು. ಹಾಗೆ ಗರ್ಭಗುಡಿಗೆ ಬೀಗ ಹಾಕಲಾಯಿತು. ರಾಮಾಜಾಚಾರ್ಯರು ಆ ರಾತ್ರಿಯೆಲ್ಲಾ ವಿಷ್ಣುವನ್ನು ಕುರಿತು ತಪಸ್ಸುಮಾಡಿದರಂತೆ. ಬೆಳಗ್ಗೆ ದೇವರು ಶಂಖ ಚಕ್ರ ಧಾರಿಯಾಗಿ ಕಾಣಿಸಿಕೊಂಡ. ಶೈವರು ಮೌನವಾದರು. ಅಂದಿನಿಂದ ತಿರುಮಲೇಶನನ್ನು ವೆಂಕಟೇಶ್ವರ ಎನ್ನುತ್ತಾರೆ.

ಆದರೆ ವೈಖಾನಸ ಮತ್ತು ಪಾಂಚರಾತ್ರ ಆಗಮ ಮೂರ್ತಿ ಕಲ್ಪನೆಯಲ್ಲಿ ಈ ಸ್ವಾಮಿಯ ಉಲ್ಲೇಖವಿಲ್ಲ. ಪೌರಾಣಿಕ ಮೂರ್ತಿಯೆಂದೇ ಈ ಸ್ವಾಮಿಯನ್ನು ಪರಿಗಣಿಸಿ ಪೂಜಿಸುತ್ತಾರೆ.

ನಾಲ್ಕು ತೋಳುಗಳಿರುವ ಈ ದೇವ ಮೇಲಿನ ಎರಡು ಹಸ್ತಗಳಲ್ಲಿ ಎಡದಲ್ಲಿ ಶಂಖ, ಬಲದಲ್ಲಿ ಚಕ್ರಧರಿಸಿರುತ್ತಾನೆ. ಮಂದಿನ ಬಲಹಸ್ತವು ಅಭಯ ಮುದ್ರೆಯಲ್ಲಿರುತ್ತದೆ. ಎಡಹಸ್ತ ತೊಡೆಯ ಬಳಿ ಇರುತ್ತದೆ (ಕಟ್ಯಾವಲಂಬಿತ ಹಸ್ತ?). ವಕ್ಷದಲ್ಲಿ ವ್ಯೂಹಲಕ್ಷ್ಮಿ ಇದೆ. ಆದ್ದರಿಂದ ಈತನು ಶ್ರೀನಿವಾಸ.

## ೩೧. ಪುರಿ ಜಗನ್ನಾಥ

ವಿಷ್ಣುವಿನ ಒಂದು ರೂಪ. ಒರಿಸ್ಸಾದ ಸಾಗರ ತೀರದಲ್ಲಿರುವ ಪುರುಷೋತ್ತಮ ಕ್ಷೇತ್ರವೆಂದು ಪ್ರಖ್ಯಾತವಾಗಿರುವ ಪುರಿಯಲ್ಲಿ ಈ ಮೂರ್ತಿಯ ದೇವಾಲಯವಿದೆ. ಈ ಮೂರ್ತಿಯನ್ನು ಪುರಿಯ ರಾಜನಾಗಿದ್ದ ಇಂದ್ರದ್ಯುಮ್ನ ಪ್ರತಿಷ್ಠಿಸಿದನೆಂದು ಹೇಳಲಾಗುತ್ತದೆ (ಬ್ರಹ್ಮವೈವರ್ತಪುರಾಣ, ಪ್ರಕೃತಿ ಖಂಡ, ಉತ್ಕಳ ಖಂಡ). ರಾಜನು ಭಕ್ತಿಯಿಂದ ತಪಸ್ಸುಮಾಡಿದ. ಆತನಿಗೆ ವಿಷ್ಣುವು ಚತುರ್ಮೂರ್ತಿಯಾಗಿದರ್ಶನ ನೀಡಿದ - ಪುರುಷೋತ್ತಮ (ವಾಸುದೇವ), ಬಲಭದ್ರ (ಸಂಕರ್ಷಣ), ಸುಭದ್ರಾ (ಕಾತ್ಯಾಯಿನಿ) ಮತ್ತು ಸುದರ್ಶನ. ತಾನು ಕಂಡದ್ದನ್ನು ಮೂರ್ತಿರೂಪಕ್ಕೆ ಬದಲಿಸುವುದು ಹೇಗೆಂದು ಯೋಚಿಸುತ್ತಿರುವಂತೆಯೇ ನೀರಿನಲ್ಲಿ ಕೆಂಪು (ಮಂಜಿಷ್ಟ) ವರ್ಣದ ಒಂದು ದೊಡ್ಡ ಮರದ ತೊಲೆ ತೇಲಿಬಂತು. ಅದರೊಂದಿಗೇ ಒಬ್ಬ ವರ್ಧಕಿ (ಕಾಷ್ಠ ಶಿಲ್ಪಿ)ಯು ಬಂದ. ಅರಸರು ಕನಸಿನಲ್ಲಿ ಕಂಡಂತಹ



ಚಿತ್ರ ೧೦೯ : ವೆಂಕಟೇಶ್ವರ

ಮೂರ್ತಿಗಳನ್ನು ಹಾಗೆಯೇ ಕಂಡರಿಸುವುದಾಗಿಯೂ ಹೇಳಿದ. ಹದಿನೈದು ದಿನಗಳ ಕಾಲ ಏಕಾಂತದಲ್ಲಿದ್ದು ಮೂರ್ತಿಗಳನ್ನು ಕಡೆದ. ನಂತರ ಆ ಮೂರ್ತಿಗಳನ್ನು ರತ್ನವೇದಿಯ ಮೇಲೆ ಪ್ರತಿಷ್ಠಾಪಿಸಿದ.

ಈಗ ಆರಾಧಿಸುವ ಮೂರ್ತಿಗಳೂ ಕೂಡ ಮರದಲ್ಲಿ ಮಾಡಿರುವವೇ. ಆದರೆ ಇಂದ್ರದ್ಯುಮ್ನನ ಕಾಲದ್ದಲ್ಲ. ಪ್ರತಿ ೧೨ ಅಥವ ೧೯ ವರ್ಷಗಳಿಗೆ ಮೂರ್ತಿಗಳನ್ನು ಭೂಸ್ಥಾಪನೆ ಮಾಡಿ ಹೊಸ ಮೂರ್ತಿಗಳನ್ನು ರತ್ನವೇದಿಯ ಮೇಲೆ ಪ್ರತಿಷ್ಠಾಪಿಸುತ್ತಾರೆ. ಇದನ್ನು 'ನವಕಲೇವರ' ಎಂದು ಹೇಳಿ ವಿಶೇಷ ಪದ್ಧತಿಯಲ್ಲಿ ಅನೇಕ ಕ್ರಿಯೆಗಳನ್ನು ನೆರವೇರಿಸುತ್ತಾರೆ. ಮೊದಲಿನ ಮೂರ್ತಿಗಳು ಹೇಗಿದ್ದವೋ ಅದೇ ರೀತಿಯಾಗಿ ಹೊಸ ಮೂರ್ತಿಗಳನ್ನು ತಯಾರಿಸಲಾಗುತ್ತದೆ. ದೇವಾಲಯದಲ್ಲಿರುವ ಮೂರ್ತಿಗಳನ್ನು ಬಟ್ಟೆಗಳ ಮೇಲೆ ಚಿತ್ರಿಸಿ ಅಥವ ಮರದಲ್ಲಿ ಚಿಕ್ಕ ಆಕಾರದಲ್ಲಿ ತಯಾರಿಸಿ ಯಾತ್ರಿಕರಿಗೆ ಲಭಿಸುವಂತೆ ಮಾಡಿದ್ದಾರೆ.

ಈ ಮೂರ್ತಿಗಳನ್ನು ಮಾಡಬೇಕಾಗಿರುವ ವಿವರಗಳು ಬ್ರಹ್ಮಪುರಾಣ (೪೨ : ೧೪ - ೧೫) ದಲ್ಲಿ ದೊರೆಯುತ್ತದೆ. ಆದರೆ ಈಗ ಇರುವ ಮೂರ್ತಿಗಳು ಈ ವಿವರಣೆಗೆ ಹೊಂದುವುದಿಲ್ಲ. ಪುರುಷೋತ್ತಮ (ಜಗನ್ನಾಥ)ನು ನಾಲ್ಕು ಬಾಹುಗಳನ್ನು ಪಡೆದಿರುತ್ತಾನೆ ಎಂದು ಹೇಳಿದ್ದರೂ ಈಗ ಇರುವ ಮೂರ್ತಿಗೆ ಎರಡೇ ಬಾಹುಗಳಿವೆ. ನಾಲ್ಕು ಹಸ್ತಗಳಲ್ಲಿ ಶಂಖ - ಚಕ್ರ - ಗದಾ - ಪದ್ಮ ಧರಿಸಿರುತ್ತಾನೆ. ಹಳದಿ ರೇಷ್ಮೆ ವಸ್ತ್ರವನ್ನು ಧರಿಸಿರುತ್ತಾನೆ. ಕೊರಳಲ್ಲಿ ವನಮಾಲೆ ಧರಿಸಿರುತ್ತಾನೆ. ಶ್ರೀವತ್ಸ ಸಮಾಯುಕ್ತನಾಗಿರುತ್ತಾನೆ. ಮುಕುಟ ಮತ್ತು ಅಂಗದಗಳಿಂದ ಅಲಂಕೃತನಾಗಿರುತ್ತಾನೆ. ಶಾರದಾತಿಲಕ (೧೭ : ೩೧)ದಲ್ಲಿ ಪುರುಷೋತ್ತಮನ ತೊಡೆಯ ಮೇಲೆ ಲಕ್ಷ್ಮೀ ಕುಳಿತಿರುತ್ತಾಳೆ. ಸ್ವಾಮಿ ಆಕೆಯನ್ನು ಆಲಂಗಿಸಿರುತ್ತಾನೆ. ಲಕ್ಷ್ಮಿಯ ಕೈಯ್ಯಲ್ಲಿ ಪದ್ಮವಿರುತ್ತದೆ. ಲಕ್ಷ್ಮಿಯತ್ತ ಶೃಂಗಾರ ನೋಟವನ್ನು ಸ್ವಾಮಿ ಬೀರುತ್ತಿರುತ್ತಾನೆ.

ಇಂದ್ರದ್ಯುಮ್ನನು ಕಂಡ ಮೂರ್ತಿಗಳನ್ನು ಬ್ರಹ್ಮವೈವರ್ತಪುರಾಣವು ಇಂತು ವಿವರಿಸುತ್ತದೆ:

ಜನಾರ್ದನನು ದಿವ್ಯ ಸಿಂಹಾಸನದ ಮೇಲೆ ಮಂಡಿಸಿದ್ದ. ಆತನೊಂದಿಗೆ ಬಲಭದ್ರ ಮತ್ತು ಸುದರ್ಶನ ಇದ್ದರು. ಸ್ವಾಮಿಗೆ ನಾಲ್ಕು ತೋಳು. ಅವುಗಳಲ್ಲಿ ಶಂಖ - ಚಕ್ರ - ಗದಾ - ಪದ್ಮಗಳನ್ನು ಧರಿಸಿದ್ದ. ಬಲಭದ್ರನಿಗೂ ನಾಲ್ಕು ತೋಳುಗಳು. ಆತನು ಹಲ (ನೇಗಿಲು) - ಮುಸಲ (ಒನಕೆ) - ಚಕ್ರ - ಅಬ್ಜ (ಕಮಲ)ಗಳನ್ನು ಧರಿಸಿದ್ದ. ಆತನು ಪನ್ನಗಾಕೃತಿಯಲ್ಲಿದ್ದ. ಆತನ ಮೇಲೆ ಏಳು ಹೆಡೆಗಳ ನಾಗರಹಾವು ಛತ್ರಿಯಂತೆ (**ಛತ್ರೀಕೃತ ಫಣಾಸ್ಸಪ್ತ**) ಇದ್ದವು. ಉಜ್ವಲವಾದ ಕರ್ಣಕುಂಡಲಗಳನ್ನು, ಕಿರೀಟವನ್ನು ಧರಿಸಿದ್ದ. ಸುಂದರ ಮುಖದ ಸುಭದ್ರೆಯು ತನ್ನ ಎರಡು ಹಸ್ತಗಳಲ್ಲಿ ವರದ, ಅಭಯ ಮುದ್ರೆಗಳನ್ನು ತಾವರೆಯನ್ನು ಧರಿಸಿದ್ದಳು (**ವರಾಬ್ಜಾಭಯ ಧಾರಿಣೀ**). ಆಕೆಯು ಸರ್ವ ಚೈತನ್ಯ ರೂಪಿಣಿಯಾದ ಲಕ್ಷ್ಮೀಯ ಅವತಾರವೇ ಆಗಿದ್ದಳು. ಸ್ವಾಮಿಯ ಕೈಯ್ಯಲ್ಲಿರುವ ಸುದರ್ಶನವು ಒಂದು ಸ್ತಂಭದ ಮಧ್ಯೆ ಇತ್ತು.

ಸ್ಕಂದಪುರಾಣದ ಪುರುಷೋತ್ತಮ ಮಹಾತ್ಮ್ಯೆಯು ಜಗನ್ನಾಥನನ್ನು ವಿಷ್ಣುವಿನ ಅವತಾರವೆಂದು ಬಲಭದ್ರನು ಶಿವ ಅಥವ ಶೇಷನ ಅವತಾರವೆಂದು ಇವರಿಬ್ಬರ ಮಧ್ಯೆ ನಿಂತಿರುವ ಸುಭದ್ರೆಯನ್ನು ಲಕ್ಷ್ಮೀ (ಅಥವ ಕಾತ್ಯಾಯಿನಿ, ಭುವನೇಶ್ವರಿ ಅಥವ ಏಕಾನಂಶಾ).

ಇಲ್ಲಿ ಸುಭದ್ರೆ ಪ್ರತ್ಯೇಕ ಪೀಠದಲ್ಲಿರುತ್ತಾಳೆ ಎಂದು ಹೇಳಲಾಗಿದೆ. ಆಕೆಗೆ ಎರಡು ತೋಳು. ಕುಂಕುಮದ ಕೆಂಪುವರ್ಣ. ವರದ ಮುದ್ರೆ ಮತ್ತು ಕಮಲ ಧರಿಸಿರುತ್ತಾಳೆ.

ಈಗ ದೇವಾಲಯದಲ್ಲಿ ನಾವು ನೋಡುವಂತೆ ನಾಲ್ಕು ವಿಗ್ರಹಗಳು ರತ್ನವೇದಿಯ ಮೇಲೇ ಇವೆ. ಈ ಮೂರ್ತಿಗಳೇ ಅಲ್ಲದೆ ಲೋಹದ ಚಿಕ್ಕ ಲಕ್ಷ್ಮೀಮೂರ್ತಿಯು ಜಗನ್ನಾಥನ ಬಲಕ್ಕೆ ಮತ್ತು ವಿಶ್ವಧಾತ್ರಿ ಎಂದು ಕರೆಯುವ ಭೂದೇವಿಯ ವಿಗ್ರಹವು ಎಡಭಾಗಕ್ಕೆ ಮತ್ತು ಜಗನ್ನಾಥನನ್ನು ಸೂಚಿಸುವ ಮತ್ತು ನೀಲಮಾಧವ ಎಂದು ಕರೆಯಲ್ಪಡುವ ಮರದವಿಗ್ರಹ ಇದೆ. ಇವೆಲ್ಲಾ ಪೂರ್ವಾಭಿಮುಖವಾಗಿಯೇ ಇವೆ.



ಚಿತ್ರ ೧೧೦ : ಜಗನ್ನಾಥ, ಸುಭದ್ರೆ, ಬಲಭದ್ರ ಮತ್ತು ಚಕ್ರ

ಜಗನ್ನಾಥನನ್ನು ತಯಾರಿಸುವ ಮರವು ಮಂಜಿಷ್ಠ (ಕಡುಕೆಂಪು) ವರ್ಣದ್ದಾಗಿರಬೇಕು. ಈ ಮರಕ್ಕೆ ನಾಲ್ಕು ಮುಖ್ಯಶಾಖೆಗಳಿರಬೇಕು. ಇದರ ಮೇಲೆ ಶಂಖ, ಚಕ್ರದ ಗುರ್ತುಗಳಿರಬೇಕು. ಬಲಭದ್ರನ ವಿಗ್ರಹದ ಮರ ತೆಳುಪಾಟಲ ಅಥವ ಬಿಳುಪಾಗಿದ್ದು ಮರಕ್ಕೆ ಏಳು ಶಾಖೆಗಳಿರಬೇಕು. ಇದರಮೇಲೆ ನೇಗಿಲು ಮತ್ತು ಒನಕೆಯ ಚಿಹ್ನೆಗಳಿರಬೇಕು. ಸುಭದ್ರೆಯನ್ನು ಮಾಡಲು ಮರದಲ್ಲಿ ಹಳದಿ ಬಣ್ಣದ ಛಾಯೆ ಇರಬೇಕು. ಮರದಲ್ಲಿ ಐದು ಶಾಖೆಗಳು ಮತ್ತು ಐದುದಳಗಳ ತಾವರೆಯ ಚಿಹ್ನೆಗಳು ಕಾಣಿಸಬೇಕು. ಸುದರ್ಶನಕ್ಕೆ ಮರದ ತೊಗಟೆ ಕೆಂಪಾಗಿರಬೇಕು. ಮರದಲ್ಲಿ ಮೂರು ಶಾಖೆಗಳಿರಬೇಕು. ಅದರ ಮೇಲೆ ಚಕ್ರದ ಚಿಹ್ನೆ ಇರಬೇಕು.

ಈ ಪ್ರತಿಮೆಗಳು ಮರದಲ್ಲಿ ತಯಾರು ಮಾಡಿದರೂ, ಮರವೇ ಪ್ರಧಾನ ವಸ್ತುವಾದರೂ, ಅನೇಕ ಲೇಪಗಳಿಂದ ಸಿದ್ಧವಾಗುತ್ತದೆ. ಸಾಲುಮರದ ಗೋಂದು, ಚಂದನ, ಕರ್ಪೂರ, ಕಸ್ತೂರಿ, ಕೆಂಪು ಚಂದನ, ಕೆಂಪುನೇತ್ರಪಟ (ಬಟ್ಟೆ) ಇವನ್ನು ಮರದ ಸುತ್ತಲೂ ಅನೇಕ ಬಾರಿ ಬಳಿಯಲಾಗುತ್ತದೆ

ಜಗನ್ನಾಥ, ಬಲಭದ್ರ ಮತ್ತು ಸುದರ್ಶನ ಇವರ ಎತ್ತರ ಒಂದೇ - ೮೪ ಯವ. ಒಂದು ಯವ ಎಂದರೆ ಬಲಗೈಯ ಮಧ್ಯ ಬೆರಳಿನ ಮಧ್ಯ ಪರ್ವ. ಸುಭದ್ರೆಯ ಎತ್ತರ ೫೨. ೫ಯವಗಳು.

ಜಗನ್ನಾಥ ಮತ್ತು ಬಲಭದ್ರರ ವಿಗ್ರಹಗಳು ಎಂದರೆ ಮುಂಡಕ್ಕೆ ದೊಡ್ಡದಾದ ರುಂಡವನ್ನು ಸೇರಿಸಿ ಪ್ರತ್ಯೇಕವಾಗಿ ಎರಡು ಕೈಗಳನ್ನು ಜೋಡಿಸಲಾಗುತ್ತದೆ. ಸುಭದ್ರೆಯ ವಿಗ್ರಹದಲ್ಲಿ ಕೈಗಳು ಇರುವುದಿಲ್ಲ. ಕೈಗಳು ಮರೆಯಲ್ಲಿವೆ ಎಂದು ಹೇಳುತ್ತಾರೆ. ಜಗನ್ನಾಥನ ತಲೆ ಸಮತಟ್ಟಾದ ನೆಲೆಯ ಮೇಲಿದೆ. ಮುಖದ ತುಂಬಾ ಇವೆ ಎನಿಸುವ ಎರಡು ಕಣ್ಣುಗಳಿವೆ. ಬಲಭದ್ರ ಮತ್ತು ಸುಭದ್ರೆಯರ ತಲೆಗಳು ಕೋಲಾಗಿವೆ. ಕಣ್ಣುಗಳು ಬಾದಾಮಿ ಆಕಾರದಲ್ಲಿವೆ.

ಜಗನ್ನಾಥನು ಚಕ್ರಾಕೃತಿಯಲ್ಲೂ, ಬಲಭದ್ರನು ಶಂಖಾಕೃತಿಯಲ್ಲೂ, ಸುಭದ್ರೆಯು ಪದ್ಮಾಕೃತಿಯಲ್ಲಿ ಇದ್ದಾರೆ ಎಂದು ಹೇಳುತ್ತಾರೆ.

ಜಗನ್ನಾಥನ ವಿಗ್ರಹವನ್ನು ಐದುಭಾಗಗಳೆಂದು ಹೇಳಿ ಅದರ ಅಳತೆಗಳನ್ನು ಹೀಗೆ ಹೇಳಲಾಗಿದೆ :

(೧) ಶ್ರೀಮುಖವು ೧೪ ಭಾಗ (೩೬.೭೫ ಯವಗಳು)

(೨) ಗ್ರೀವ ಕೊರಳು ೫ ಭಾಗ (೧೨ ಯವಗಳು)

(೩) ಹೃದಯ ೩ ಭಾಗ (೯ ಯವಗಳು)

(೪) ಸೊಂಟ (ಪರಿಧಾನ) ೪ ಭಾಗ (೧೦.೫ ಯವಗಳು)

(೫) ಪಾದ ೬ ಭಾಗ (೧೫.೭೫ಯವಗಳು)

ಬಲಭದ್ರನ ವಿಗ್ರಹದ ಎತ್ತರವನ್ನು ನಾಲ್ಕು ಭಾಗಗಳೆಂದು ಹೇಳಿ ಅದರ ಅಳತೆಗಳನ್ನು ಹೀಗೆ ಹೇಳಲಾಗಿದೆ.

(೧) ತಲೆಯ ಮೇಲಿನ ಫಣೆ ಮತ್ತು ಶ್ರೀಮುಖ ಸೇರಿ ೧೨ ಭಾಗ (೩೧.೫ ಯವಗಳು)

ಫಣೆ... ೬ ಯವ

ಮುಂದಲೆ ... ೧.೫ ಯವ

ಮುಖದ ಉಳಿದಭಾಗ ... ೨೪ಯವ

(೨) ಗ್ರೀವ ಕೊರಳು ೪ ಭಾಗ (೧೦.೫ ಯವಗಳು)

(೩) ಹೃದಯ ಮತ್ತು ಸೊಂಟ (ಪರಿಧಾನ) ೬ ಭಾಗ (೫.೫ ಯವಗಳು)

(೪) ಪಾದ ೧೦ ಭಾಗ (೨೬ ಯವಗಳು)

ಸುಭದ್ರೆಯ ವಿಗ್ರಹವನ್ನು ಐದು ಭಾಗಗಳಾಗಿ ವಿಭಾಗಿಸುತ್ತಾರೆ

(೧) ಶ್ರೀಮುಖ ೧೨ ಭಾಗ (೧೯.೭೫ ಯವಗಳು)

(೨) ಹೃದಯ ೨ ಭಾಗ (೯.೭೫ ಯವಗಳು)

(೩) ಸೊಂಟ (ಪರಿಧಾನ) ೧೨ ಭಾಗ (೧೯.೭೫ಯವಗಳು)

(೪) ಪಾದ ೬ ಭಾಗ (೯.೭೪ ಯವಗಳು)

ಸುದರ್ಶನದ ಎತ್ತರವನ್ನು ನಾಲ್ಕು ಭಾಗಗಳಾಗಿ ವಿಭಜಿಸಿ ಪ್ರತಿಭಾಗವು ೮ ಯವಗಳು ಎಂದು ಹೇಳುತ್ತಾರೆ. ಇದು ಒಂದು ಕೋಲು. ಅದಕ್ಕೆ ಬಟ್ಟೆಯನ್ನು ಅಂಟಿಸಲಾಗಿರುತ್ತದೆ.

ಚಕ್ರದ ರೂಪು ಕಾಣಿಸುವುದಿಲ್ಲ. ಮರದ ಕೋಲಿನ ಒಳಗೆ ಚಿನ್ನದ ಚಕ್ರವನ್ನು ಮಾಡಿ ಅಡಗಿಸಿರುತ್ತಾರೆ ಎಂದು ಹೇಳಲಾಗುತ್ತದೆ. ದೇವಾಲಯದ ಅರ್ಚನೆಗಾಗಿ ಬಳಸುವ ಪ್ರತಿಷ್ಠಾ ಪ್ರದೀಪವು ದೇವರು ವಿಷ್ಣುವಿನ ನರಸಿಂಹರೂಪವನ್ನು ಪ್ರತಿನಿಧಿಸುತ್ತದೆ ಎಂದು ಹೇಳುತ್ತದೆ.

ನವಕಳೇವರದ ಸಂದರ್ಭದಲ್ಲಿ ಪ್ರತಿ ಪ್ರತಿಮೆಯ ಒಳಗೆ ಒಂದು ಗೂಡಿದ್ದು ಅದರಲ್ಲಿ ಬ್ರಹ್ಮ ಪದಾರ್ಥಎಂದು ಕರೆಯಲಾಗುವ ವಸ್ತುವನ್ನು ರಹಸ್ಯವಾಗಿ ಸೇರಿಸಲಾಗುತ್ತದೆ. ಅದೇ ಈ ಪ್ರತಿಮೆಗಳಿಗೆ ವಿಶೇಷ ಶಕ್ತಿ ಕೊಡುತ್ತದೆ ಎಂದು ಹೇಳಲಾಗುತ್ತದೆ. ಹೊಸ ಪ್ರತಿಮೆಯನ್ನು ಜೀವಂತಗೊಳಿಸುವುದು ಇದೇ ಪದಾರ್ಥವೇ.

ಈ ದೇವಾಲಯವು ಬೌದ್ಧರಿಗೆ ಸೇರಿದ್ದು ನಂತರದ ಕಾಲದಲ್ಲಿ ವೈಷ್ಣವ ದೇವಾಲಯವಾಗಿ ಬದಲಾಗಿದೆ ಎಂದು ಹೇಳುತ್ತಾರೆ. ದೇವಮೂರ್ತಿಗಳಲ್ಲಿ ಅಡಗಿಸುವ ಬ್ರಹ್ಮ ಪದಾರ್ಥವು ಬುದ್ಧನಿಗೆ ಸೇರಿದ ಪದಾರ್ಥಎಂದೂ ಹೇಳುತ್ತಾರೆ. ಆದರೆ ಹಿಂದೂಗಳು ಇದು ಜಗನ್ನಾಥ ಮತ್ತು ಅವನ ಸೋದರಿ ಸುಭದ್ರೆಯ ದೇವಸ್ಥಾನ ಎಂದು ಹೇಳುತ್ತಾರೆ.

## ೩೩. ಮೋಹಿನೀ

ವಿಷ್ಣು ಹೆಣ್ಣಿನ ರೂಪಧರಿಸಿದ ಉದಂತ ಭಾಗವತ ಪುರಾಣದಲ್ಲಿದೆ. ಧನ್ವಂತ್ರಿ ಅವತಾರದ ನಂತರ, ನರಸಿಂಹಾವತಾರಕ್ಕೆ ಮೊದಲು ವಿಷ್ಣುವು ಮೋಹಿನಿ ಅವತಾರವನ್ನು ಧರಿಸಿದ್ದ. ಅಮೃತವನ್ನು ಪಡೆಯಲು ದೇವ - ದಾನವರು ಇಬ್ಬರೂ ಕೂಡಿ ಕ್ಷೀರಸಾಗರ ಮಥನವನ್ನು ನಡೆಸಿದರು. ಅಮೃತ ಬಂದಾಗ ಇಬ್ಬರೂ ಅದಕ್ಕಾಗಿ ಹೊಡೆದಾಡಲು ಮುಂದಾದರು. ಆಗ ವಿಷ್ಣು ಬಹು ಆಕರ್ಷಕ ಸುಂದರಿಯ ರೂಪವನ್ನು ಧರಿಸಿ ಅಮೃತವನ್ನು ಇಬ್ಬರಿಗೂ ಸಮಾನವಾಗಿ ಹಂಚುವ ಕೆಲಸ ನಿರ್ವಹಿಸುವುದಾಗಿ ಹೇಳಿದ. ಆ ಸುಂದರಿಯ ಆಕರ್ಷಣೆಗೆ ಮರುಳಾದ ದಾನವರು ಮೋಹಿನೀಯು ಅಮೃತವನ್ನೆಲ್ಲಾ ದೇವತೆಗಳಿಗೆ ಹಂಚುತ್ತಿದ್ದುದನ್ನೂ ಗಮನಿಸಲಿಲ್ಲ. ಇದರಿಂದ ಮುಂದೆ ದಾನವರನ್ನು ಸುಲಭವಾಗಿ ದೇವತೆಗಳು ಕೊಲ್ಲುವುದು ಸಾಧ್ಯವಾಯಿತು. ದೇವಗಳು ಅಮರರಾದರು

ಇನ್ನೊಂದು ಉದಂತದಂತೆ ಅಮೃತವನ್ನು ಹಂಚುತ್ತಿದ್ದ ಮೋಹಿನಿಯನ್ನು ಶಿವನು ಮೋಹಿಸಿದ. ಇದೇ ಕಾರಣದಿಂದಲೇ ಹರಿ - ಹರ ರೂಪಧರಿಸಿ ಅದೇ ಅರ್ಧನಾರಿರೂಪಕ್ಕೆ ಕಾರಣವಾಯಿತು. ಬಲಪಾರ್ಶ್ವ ಶಿವನಾಗಿದ್ದರೆ ಎಡಪಾರ್ಶ್ವವು ಮೋಹಿನಿಯಾಗಿ (ಸ್ತ್ರೀರೂಪ) ರೂಪಿತವಾಯಿತು. ಜನಪದ ದೇವನಾದ ಶಸ್ತ ಅಥವ ಅಯ್ಯಪ್ಪ ಸ್ವಾಮಿ ಇವರ ಪುತ್ರನೆಂದೂ ಹೇಳಲಾಗುತ್ತದೆ.

ಮೋಹಿನಿಯು ತಾರುಣ್ಯದಲ್ಲಿರುವ ಹೆಣ್ಣು (ಬಾಲಾ). ನೀಲೋತ್ಪಲದಂತೆ ನೀಲವರ್ಣಕಾಂತಿಯಲ್ಲಿರುತ್ತಾಳೆ. ಈಕೆಗೆ ಮೂರುಕಣ್ಣು, ನಾಲ್ಕು ತೋಳುಗಳು ಎಲ್ಲಾ ಆಭರಣಗಳಿಂದಲೂ ಅಲಂಕೃತಳಾಗಿರುತ್ತಾಳೆ. ಹಳದಿಯ ರೇಶ್ಮೆವಸ್ತ್ರಗಳನ್ನು ಧರಿಸಿರುತ್ತಾಳೆ. ಆಕೆಯ ಸುತ್ತಲೂ ದೇವ - ದಾನವರು ಇರುತ್ತಾರೆ. ಬಲಹಸ್ತದಲ್ಲಿ ಸುಧೆ ತುಂಬಿರುವ ಕಲಶವನ್ನು ಎಡಹಸ್ತದಲ್ಲಿ ನೀಲೋತ್ಪಲವನ್ನು ಧರಿಸಿರುತ್ತಾಳೆ. ಮೇಲಿನಹಸ್ತಗಳಲ್ಲಿ ಪಾಶ ಮತ್ತು ಅಂಕುಶವನ್ನು ಧರಿಸಿರುತ್ತಾಳೆ. ಮೋಹಿನಿಯು ಲೋಕಮೋಹಿನಿ.

ಮೋಹಿನಿಯನ್ನು ನಿತ್ಯ ದೇವತೆಯಾಗಿ ಪರಿಗಣಿಸಿರುವ ಶಾರದಾತಿಲಕ ತಂತ್ರವು ಆಕೆಗೆ

ಮೂರುಕಣ್ಣು. ಅರುಣ ವರ್ಣದ ಮೈಕಾಂತಿ ಇದೆ ಎಂದು ಹೇಳುತ್ತದೆ. ಆಕೆಯ ಶಿಖೆಯಲ್ಲಿ ಬಾಲ ಚಂದ್ರಮನಿರುವುದಾಗಿ ವಿವರಿಸಿದೆ. ಆಕೆಯು ಕೆಂಪುವಸ್ತ್ರಗಳನ್ನು ಧರಿಸಿದ್ದು ಕೆಂಪು ವರ್ಣದ ಆಭರಣಗಳಿಂದ ಅಲಂಕೃತಳಾಗಿರುತ್ತಾಳೆ.

# ಉ. ದೇವೀಮೂರ್ತಿಗಳು

ಇದುವರೆವಿಗಿನ ಅಧ್ಯಯನದಲ್ಲಿ ಆದಿಮೂರ್ತಿ (ಆದಿವಿಷ್ಣು)ಯು ತಾನಾಗಿಯೇ ರೂಪಿಸಿರುವ ಅನೇಕ ಬಗೆಯ ಮೂರ್ತಿರೂಪಗಳನ್ನು ಗಮನಿಸಿದ್ದೇವೆ. ವ್ಯೂಹಮೂರ್ತಿಗಳು, ಅವತಾರಮೂರ್ತಿಗಳು, ಚತುರ್ವಿಂಶತಿ ಮೂರ್ತಿಗಳು, ಇತರ ರೂಪಗಳು ಹೀಗೆ ಇವು ಅಗಣಿತ ಎಂದರೂ ತಪ್ಪಲ್ಲ. ಆದ್ದರಿಂದ ಸ್ವಾಮಿಯು ಹೆಣ್ಣಿನ ರೂಪವನ್ನು ಧರಿಸಿದ ಎಂಬುದೂ ತಪ್ಪಲ್ಲ. ಈ ರೂಪಧಾರಣೆಯು ಸ್ವಾಮಿಯ ಸರ್ವಶಕ್ತಿತ್ವವನ್ನು, ಸರ್ವವ್ಯಾಪಕತ್ವವನ್ನು ತೋರ್ಪಡಿಸುತ್ತದೆಯಷ್ಟೇ. ಇದೇ ಕಾರಣಕ್ಕಾಗಿಯೇ ವೈಷ್ಣವರಲ್ಲಿ ದೇವಿಗೆ ವಿಶೇಷ ಪ್ರಾಶಸ್ತ್ಯವನ್ನು ಕೊಡಲಾಗುತ್ತದೆ. ಶ್ರೀ ವೈಷ್ಣವರಲ್ಲಂತೂ ಶ್ರೀದೇವಿಯನ್ನು ವಿಷ್ಣುವಿನ ಪೂರ್ಣರೂಪವೆಂದೇ ಭಾವಿಸಿ, ಅದೇ ರೀತಿಯಲ್ಲಿ ಭಕ್ತಿಯಿಂದ ಅರ್ಚಿಸುತ್ತಾರೆ ಮತ್ತು ದೇವತಾಕಲ್ಪದಲ್ಲಿಯೂ ಆಕೆಗೆ ಅದೇ ಮಹತ್ತ್ವದ ಸ್ಥಾನವನ್ನು ಕೊಡುತ್ತಾರೆ. ಈ ವೈಷ್ಣವ ಶಕ್ತಿಯು ಸೇವಕಿಯಾಗಿ, ಸಹಚರಿಯಾಗಿ, ಹೆಂಡತಿಯಾಗಿ, ಕೆಲವು ಬಾರಿ ಪ್ರತ್ಯೇಕವಾದ ಸ್ವತಂತ್ರ ಅಸ್ತಿತ್ವವುಳ್ಳ ದೇವಿಯಾಗಿ, ಪೂಜೆಯನ್ನು ಕೈಗೊಳ್ಳುತ್ತಾಳೆ. ಕೆಲವು ಬಾರಿ ದೇವನೊಂದಿಗೆ ಆಲಂಕಾರಿಕ ಮೂರ್ತಿಯಾಗಿ ಅಥವ ದೇವನ ರೌದ್ರವನ್ನು ಶಾಂತಿಗೊಳಿಸುವ ಉಪಕರಣವಾಗಿ, ದೇವನ ದಿವ್ಯತೆಗೆ ಪೂರ್ಣತೆಯನ್ನು ಒದಗಿಸುವ ಮಹತ್ತರ ಶಕ್ತಿಯಾಗಿಯೂ ಇರುತ್ತಾಳೆ. ಆದ್ದರಿಂದ ಮೊದಲಿಗೆ ವಿಷ್ಣುವಿಗೆ ಸಂಬಂಧಿಸಿರುವ ಶ್ರೀ, ಭೂ ಮತ್ತು ನೀಲಾದೇವಿಯರ ಲಕ್ಷಣಗಳನ್ನು ಸಂಗ್ರಹವಾಗಿ ತಿಳಿಯೋಣ. ನಂತರ ಇತರ ಕಿರಿಯ ದೇವತೆಗಳ ಬಗ್ಗೆ ಸ್ವಲ್ಪ ವಿವರಗಳನ್ನು ತಿಳಿಯೋಣ.

## ೧. ಶ್ರೀ ದೇವಿ / ಲಕ್ಷ್ಮೀ

ಈಕೆಗೆ ಲಕ್ಷ್ಮೀ, ಕಮಲಾ, ಪದ್ಮಾ, ರಮಾ, ಮಂಗಳಾ ಮುಂತಾದ ಹಲವು ಪರ್ಯಾಯ ನಾಮಗಳಿವೆ. ವಿಷ್ಣುವಿನ ಪತ್ನಿಗಳಲ್ಲಿ ಈಕೆಯು ಪ್ರಧಾನಳು. ಅಮೃತವನ್ನು ಪಡೆಯಲು ದೇವ ದಾನವರು ಕ್ಷೀರಸಾಗರವನ್ನು ಮಥಿಸಿದಾಗ ಉದ್ಭವಿಸಿ ಬಂದ ಅಮೂಲ್ಯವಾದುವುಗಳಲ್ಲಿ ಲಕ್ಷ್ಮೀಯು ಒಬ್ಬಳು. ನಿಜ ಸಂಗತಿ ಎಂದರೆ ಇಂದ್ರನು ಶಾಪಗ್ರಸ್ತನಾಗಿ ಲಕ್ಷ್ಮೀಯನ್ನು (ಸಿರಿದೇವತೆಯನ್ನು) ಕ್ಷೀರ ಸಾಗರದಲ್ಲಿ ಕಳೆದು ಕೊಂಡ ನಂತರ ನಾನಾ ಸಂಕಷ್ಟಗಳಿಗೆ ದೇವತೆಗಳು ತುತ್ತಾದರು. ಆಗ ಲಕ್ಷ್ಮೀಯನ್ನು ಮರಳಿ ಪಡೆಯುವ ಯೋಜನೆಯಿಂದಲೇ ಕ್ಷೀರಸಾಗರ ಮಥನವು ಪ್ರಾರಂಭವಾದದ್ದು. ದಾನವರನ್ನು ಆಕರ್ಷಿಸಲು ಅಮೃತದ ಆಮಿಷ ಒಡ್ಡಲಾಗಿತ್ತು. ದೇವತೆಗಳು ಮೃತ್ಯುವಶರಾಗದಂತೆ ಉಳಿಯಲು ಅಮೃತವು ನೆರವಾಗುವುದರಿಂದ ಅವರಿಗೂ ಅದು ಬೇಕಾಗಿತ್ತು. ಆದ್ದರಿಂದ ಸಾಗರ ಮಥನ ಪ್ರಾರಂಭವಾಯಿತು. ಲಕ್ಷ್ಮೀಯು ಮೊದಲಿಗೆ ಸಿರಿಯ ದೇವತೆಯಾಗಿದ್ದು ನಂತರ ವಿಷ್ಣುವಿನ ಹೆಂಡತಿಯಾದಳು. ಸಮುದ್ರದಿಂದ ಬಂದಾಗ ವಿಷ್ಣುವು ಲಕ್ಷ್ಮೀಯನ್ನು ತನ್ನ ಬಲ ವಕ್ಷದಲ್ಲಿರಿಸಿಕೊಂಡ.

ಈಕೆಯನ್ನು ಎರಡು ತೋಳುಗಳಿರುವಂತೆ, ನಾಲ್ಕು ತೋಳಿರುವಂತೆ ನಾರಾಯಣನೊಂದಿಗೆ ಅಥವ ಪ್ರತ್ಯೇಕವಾಗಿರುವಂತೆ ಹಲವು ಬಗೆಗಳಲ್ಲಿ ವಿವರಿಸಲಾಗಿದೆ. ಈಕೆಯನ್ನು ಹಲವು ರೂಪಗಳಲ್ಲಿ ವರ್ಣಿಸಿರುವುದೂ ಉಂಟು. ಅಷ್ಟ ಲಕ್ಷ್ಮೀಗಳೆಂಬ ರೂಪವು ಬಹು ಜನಪ್ರಿಯವಾದದ್ದು. ಈ ದೇವಿಯ ಕೆಲವು ಧ್ಯಾನ ರೂಪಗಳನ್ನು ಪರಿಶೀಲಿಸೋಣ.

(ಅ) ಕಾರಯೇತ್ಕಮಲಾಂ ದೇವೀಂ ತಪ್ತಕಾಂಚನ ಸನ್ನಿಭಾಮ್

ಸರ್ವಲಕ್ಷಣ ಸಂಯುಕ್ತಾಂ ಪದ್ಮಾಸನ ಸಮನ್ವಿತಾಮ್ ||

ಪದ್ಮಹಸ್ತಾಂ ಶ್ರಿಯಂ ದೇವೀಂ ಪದ್ಮನಾಭಪ್ರಿಯಾಂ ಶುಭಾಮ್

ಮಣಿ ಮೌಕ್ತಿಕ ಸಂಯುಕ್ತಾಂ ಸರ್ವಾಭರಣ ಭೂಷಿತಾಮ್ ||

(ವಿಷ್ವಕ್ಸೇನ ಸಂಹಿತೆ ೧೮ : ೪೮ - ೪೯)

ಬೆಂಕಿಯಲ್ಲಿ ಕಾದಿರುವ ಚಿನ್ನದ ಪ್ರಭೆಯಂತಹ ಮೈಕಾಂತಿಯನ್ನು ಪಡೆದಿರುವ, ಸಕಲ ಮುತ್ತು, ರತ್ನ, ವಜ್ರ, ವೈಢೂರ್ಯಾದಿಗಳಿಂದ ಅಲಂಕೃತಳಾಗಿದ್ದು ಎಲ್ಲಾ ಆಭೂಷಣಗಳನ್ನು ಧರಿಸಿರುವ, ಸರ್ವ ಶುಭ ಲಕ್ಷಣಗಳನ್ನು ಪಡೆದುಕೊಂಡಿರುವ, ಪದ್ಮನಾಭನಾದ ನಾರಾಯಣನ ಪ್ರಿಯಳಾದ ಕಮಲಾದೇವಿಯು ಪದ್ಮಾಸನದಲ್ಲಿ ತನ್ನೆರಡು ಹಸ್ತಗಳಲ್ಲಿ ಪದ್ಮಗಳನ್ನು ಧರಿಸಿ ಮಂಡಿಸಿರುತ್ತಾಳೆ. ಈಕೆಯೇ ಶ್ರೀದೇವಿ. ಈಕೆಯು ಸಕಲ ಮಂಗಳಗಳನ್ನುಂಟು ಮಾಡುತ್ತಾಳೆ.

(ಆ) ಅರುಣ ಕಮಲ ಸಂಸ್ಥಾ ತದ್ರಜಃ ಪುಂಜವರ್ಣಾ

ಕರ ಕಮಲ ಧೃತೇಷ್ಟಾಭೀತಿ ಯುಗ್ಮಾಂಬು ಜಾ ಚ |

ಮಣಿ ಮಕುಟ ವಿಚಿತ್ರಾಲಂಕೃತಾ ಕಲ್ಪ ಜಾತ್ಯೆ

ರ್ಭವತು ಭುವನ ಮಾತಾ ಸಂತತಂ ಶ್ರೀಃ ಶ್ರಿಯೈನಃ ||

ಲೋಕ ಮಾತೆಯಾಗಿರುವ ಶ್ರೀ ಲಕ್ಷ್ಮೀದೇವಿಯು ಕಮಲ ಪುಷ್ಪಗಳ ಪರಾಗದ ಬಣ್ಣದಲ್ಲಿ ಎಂದರೆ ಚಿನ್ನದ ಕಾಂತಿಯಲ್ಲಿದ್ದು, ನಾಲ್ಕು ತೋಳುಗಳನ್ನು ಪಡೆದಿದ್ದು, ಕಲ್ಪವೃಕ್ಷವು ಕೊಟ್ಟಿರುವ ಬಂಗಾರದ ಕಿರೀಟದ, ಆಬರಣ ಪುಷ್ಪ ವಸ್ತ್ರ ಮುಂತಾದುವುಗಳಿಂದ ಅಲಂಕೃತವಾಗಿದ್ದು ಕೆಂಪು ತಾವರೆಯ ಮೇಲೆ ಆಸೀನಳಾಗಿರುತ್ತಾಳೆ. ಆಕೆಯ ಮುಂದಿನ ಹಸ್ತಗಳಲ್ಲಿ ಅಭಯ ಮತ್ತು ವರದ ಮುದ್ರೆಗಳಿದ್ದು ಮೇಲಿನ ಹಸ್ತಗಳಲ್ಲಿ ಪದ್ಮಗಳನ್ನು ಧರಿಸಿರುತ್ತಾಳೆ.

(ಇ) ಮಧ್ಯಾಬ್ಜ ಕರ್ಣಿಕಾ ಮಧ್ಯೇ ಭಾವಾಸನಗತೌ ಸ್ಮರೇತ್

ಪುರುಷಂ ಪುಂಡರೀಕಾಕ್ಷಂ ತದಂಕಸ್ಥಾಂ ಚ ಪಂಕಜಾಮ್ ||

ಪ್ರಾಚ್ಯಾಬ್ಜ ಕರ್ಣಿಕಾ ಮಧ್ಯೇ ಲಕ್ಷ್ಮೀ ದೇಹಾದ್ವಿನಿರ್ಗತಾಮ್

ದ್ವಿಭುಜಾಂ ಭಾವಯೇ ಲ್ಲಕ್ಷ್ಮೀಂ ದ್ವಿನೇತ್ರಾಂ ಚಾರು ಕುಂಡಲಾಮ್ ||

ಶ್ವೇತ ಮಾಲ್ಯಾಂಬರಧರಾಂ ಹಾರಕೇಯೂರ ಭೂಷಿತಾಮ್

ಸರ್ವಲಕ್ಷಣ ಸಂಪನ್ನಾಂ ಪೀನೋನ್ನತ ಪಯೋಧರಾಮ್ ||

ಪ್ರಬುದ್ಧೋತ್ಪಲ ವಿಸ್ತೀರ್ಣಲೋಚನಾಂ ಸುಸ್ಮಿತಾನನಾಮ್

ಚಲದ್ದ್ವಿರೇಫ ಪಟಲ ರಮಣೀಯಾಲಕಾವಲಿಮ್ ||

ಲಸಲ್ಲಲಾಟತಿಲಕಾಮಾರಕ್ತಾಧರ ಪಲ್ಲವಾಮ್

ಕೃಷ್ಣ ಕುಂಚಿತ ಕೇಶಾಂ ಚ ವಂಶಮುಕ್ತಾಫಲ ದ್ವಿಜಾಮ್ ||

ಪದ್ಮಾಸನೋಪವಿಷ್ಟಾಂ ಚ ಪಾಶಾಂಕುಶ ಕರದ್ವಯೀಮ್
ಪದ್ಮ ಗರ್ಭೋಪಮಾಕಾರಾಂ ಸಂಮುಖೀಮಾವಯೋಃ ಸ್ಮರೇತ್ ॥
ಸ್ಮರೇದ್ದಕ್ಷಿಣ ಭಾಗಾಬ್ಜ ಕರ್ಣಿಕೋದರಮಧ್ಯಗಾಮ್
ವೇಷಭೂಷಾದಿ ಭಿಸ್ತುಲ್ಯಾಂ ಲಕ್ಷ್ಮ್ಯಾಃ ಕುಂದನಿಭಾಂ ತು ವಾ ॥

(ಲಕ್ಷ್ಮೀ ತಂತ್ರ ೩೮ : ೨೯ - ೩೫)

ಭಾವ ಪೂಜೆಯನ್ನು ಸಲ್ಲಿಸಬೇಕಾದಾಗ ಪದ್ಮದ ಮಧ್ಯೆಯಲ್ಲಿರುವ ಕರ್ಣಿಕೆಯಲ್ಲಿದ್ದಾಳೆ ಎಂದು ಭಾವಿಸಿ ಪೂಜಿಸಬಹುದಾದ ದೇವಿ ಲಕ್ಷ್ಮೀ. ಈ ಸಕಲ ಸೃಷ್ಟಿಗಳ ಅಧಿನಾಯಕ ಪುರುಷನಾದ ಪುಂಡರೀಕಾಕ್ಷ ಎಂದು ಕರೆಯಲ್ಪಡುವ ನಾರಾಯಣನ ಎಡ ಪಾರ್ಶ್ವದ ತೊಡೆಯಲ್ಲಿ ಕುಳಿತಿರುವಂತಹ ಲಕ್ಷ್ಮೀ ದೇವಿಯು ಕಮಲದ ಕರ್ಣಿಕೆಯಿಂದಲೇ ಹೊರಬಂದವಳು. ಈಕೆಯು ಎರಡು ಭುಜಗಳನ್ನು ಎರಡು ಕಣ್ಣುಗಳನ್ನು ಪಡೆದುಕೊಂಡಿರುತ್ತಾಳೆ. ಸುಂದರವಾದ ಕುಂಡಲಗಳನ್ನು ಧರಿಸಿರುತ್ತಾಳೆ. ಶ್ವೇತ ಪದ್ಮಮಾಲೆಯನ್ನು ಧರಿಸಿದ್ದು, ಹಾರ ಕೇಯೂರಗಳಿಂದ ಅಲಂಕೃತವಾಗಿರುತ್ತಾಳೆ. ಸರ್ವಲಕ್ಷಣ ಸಂಪನ್ನವಾಗಿ ಎತ್ತರವೂ, ತುಂಬಿದ ವಕ್ಷ ಸ್ಥಳವನ್ನು ಹೊಂದಿದ್ದು, ವಿಕಸಿತ ಪದ್ಮದಂತೆ ವಿಶಾಲವಾದ ನೇತ್ರಗಳನ್ನು ಹೊಂದಿದ್ದು, ಬಹು ಸುಂದರವೂ ಆಕರ್ಷಕವೂ ಆದ ಕಣ್ರೆಪ್ಪೆಗಳನ್ನು ಪಡೆದುಕೊಂಡಿರುತ್ತಾಳೆ. ಹಣೆಯಲ್ಲಿ ತಿಲಕವನ್ನು ಧರಿಸಿದ್ದು ಕೆಂಪಾದ ತುಟಿಗಳನ್ನು ಪಡೆದಿರುವವಳು. ದಟ್ಟವಾದ ಕಪ್ಪು ತಲೆಗೂದಲನ್ನು ಪಡೆದಿದ್ದು ಬಯಸಿದ ಫಲಗಳನ್ನು ನೀಡುವ ಈ ದೇವಿಯು ಸರ್ವಶುಭಗಳನ್ನು ದಯಪಾಲಿಸುವವಳು.

ಈಕೆಯ ಇನ್ನೊಂದು ರೂಪವು ಇಂತಿರುತ್ತದೆ : ಪದ್ಮದ ಕೇಸರಗಳ ವರ್ಣದ ಮೈಕಾಂತಿಯಲ್ಲಿರುವ ಈಕೆಯು ಬಹು ಅಂದವಾದ ಅವಯವ ಸೌಷ್ಟವವನ್ನು ಹೊಂದಿದ್ದು ತನ್ನೆರಡು ಕೈಗಳಲ್ಲಿ ಪಾಶಾಂಕುಶಗಳನ್ನು ಧರಿಸಿದ್ದು ಸಕಲಾಭರಣ, ಅಲಂಕರಣ, ವಸ್ತ್ರಾದಿಗಳಿಂದ ಸುಸಜ್ಜಿತಳಾಗಿ ಬಹು ಲಾವಣ್ಯವತಿಯಾಗಿ ಮಲ್ಲಿಗೆಯ ಮೈ ಕಾಂತಿಯಿಂದ ಕಾಣುತ್ತಿರುವ ಈಕೆಯು ಸ್ವಾಮಿ ಬಲಭಾಗದ ತಾವರೆಯ ಪೀಠದಮೇಲೆ (ಅಥವ ತಾವರೆಯಲ್ಲಿಯೇ) ಪದ್ಮಾಸನದಲ್ಲಿ ಮಂಡಿಸಿರುತ್ತಾಳೆ.

(ಈ) ತಪ್ತ ಜಾಂಬೂನದ ಮಯೀಂ ಚತುರ್ಹಸ್ತ ಸಮನ್ವಿತಾಮ್
ಸರ್ವಾವಯವ ಸಂಪೂರ್ಣಾಂ ಸರ್ವಾಭರಣ ಭೂಷಿತಾಮ್ ॥
ಸರ್ವಶಕ್ತಿ ಸಮೋಪೇತಾಂ ಮಕುಟಾದಿ ವಿರಾಜಿತಾಮ್
ಸರ್ವಾಲಂಕಾರ ಸಂಯುಕ್ತಾಂ ಸರ್ವರತ್ನ ವಿರಾಜಿತಾಮ್ ॥
ರಕ್ತ ಪದ್ಮಧರಾಂ ದೇವೀಂ ರಕ್ತಾಂಬರ ಸಮನ್ವಿತಾಮ್
ಪದ್ಮಾಸನ ಸಮಾಯುಕ್ತಾಂ ಸಾಕ್ಷಾದ್ದೇವೀಂ ಹರಿಪ್ರಿಯಾಮ್ ॥
ಶಂಖ ಚಕ್ರಾಂಬುಜ ಧರಾಂ ಲಕ್ಷ್ಮೀಮೇವ ತು ಚಿಂತಯೇತ್
ದಕ್ಷಿಣೋರ್ಧ್ವಕರೇ ಚಕ್ರಮಧಃ ಪದ್ಮ ವಿರಾಜಿತಮ್ ॥
ವಾಮೇ ಶಂಖಮಯಂ ಪದ್ಮಂ ವರದಂ ವಾಭಯಂ ತು ವಾ
ಏವಂ ಧ್ಯಾತ್ವಾ ಮುನಿಶ್ರೇಷ್ಠಾ ಸ್ವತಂತ್ರಾರ್ಚಾವಿಧಾನಕೇ ॥

**ಪರತಂತ್ರೇ ತು ವಕ್ಷ್ಯಾಮಿ ಲಕ್ಷಣಂ ಪುಷ್ಟಿ ಸಂಯುತಮ್**

**ಶಂಖಚಕ್ರಂ ವ್ಯಪೋಹ್ಯೈವ ಶ್ರೀಯಂ ಪುಷ್ಟಿಂ ತು ಕಲ್ಪಯೇತ್ ||**

**ದ್ವಿಭುಜಾಂ ಕನಕಾಭಾಸಾಂ ಶ್ರೀಯಂ ವಿಸ್ಯಸ್ಯ ದಕ್ಷಿಣೇ**

(ವಿಷ್ವಕ್ಸೇನ ಸಂಹಿತೆ, ೨೦ : ೨೫೫ - ೨೬೧)

ನಾಲ್ಕು ಬಾಹುಗಳೊಂದಿಗೆ ಸಕಲ ಅವಯವಗಳನ್ನು ಹೊಂದಿದ್ದು ಪರಿಪೂರ್ಣ ಗಾತ್ರೆಯಾಗಿರುವ ಲಕ್ಷ್ಮೀ- ಶ್ರೀದೇವಿಯು ಸಕಲಶಕ್ತಿಗಳನ್ನು ಒಳಗೊಂಡಿರುತ್ತಾಳೆ. ನವರತ್ನ ಖಚಿತ ಆಭರಣಗಳನ್ನು, ಹಾರಗಳನ್ನು ಧರಸಿದ್ದು ಕೆಂಪು ತುಟಿಗಳ ಈ ದೇವಿಯು ಕೆಂಪುವಸ್ತ್ರಗಳಲ್ಲಿ ಅಲಂಕೃತಳಾಗಿರುತ್ತಾಳೆ. ಶ್ರೀ ಹರಿಗೆ ಪ್ರಿಯಳಾಗಿರುವ ಈ ದೇವಿಯು ಬಲಪಾರ್ಶ್ವದ ಮೇಲಿನ ಹಸ್ತದಲ್ಲಿ ಚಕ್ರವನ್ನು, ಕೆಳಹಸ್ತದಲ್ಲಿ ಪದ್ಮವನ್ನೂ ಅಭಯ ಮುದ್ರೆಯನ್ನೋ, ಎಡಪಾರ್ಶ್ವದ ಮೇಲಿನ ಹಸ್ತದಲ್ಲಿ ಶಂಖವನ್ನು, ಕೆಳಹಸ್ತದಲ್ಲಿ ಪದ್ಮವನ್ನೋ ವರದಮುದ್ರೆಯನ್ನೋ ಧರಿಸಿರಬಹುದು [ಕೆಲವು ಸಿದ್ಧಿಗಳ ಸಂದರ್ಭದಲ್ಲಿ ಕೆಳ ಎಡಹಸ್ತದಲ್ಲಿ ಅಭಯ ಮುದ್ರೆಯನ್ನೂ ರೂಪಿಸಿ ಆರಾಧಿಸುವ ರೂಢಿಯುಂಟು. ಆದರೆ ಇದು ಸಾಧಾರಣ ಆರಾಧನೆಗಳಲ್ಲಿ ಬಳಸುವುದಿಲ್ಲ]. ಈ ದೇವಿಯನ್ನು ಸ್ವತಂತ್ರರೂಪದಲ್ಲಿ ಅರ್ಚಿಸಿ ಪೂಜಿಸಬಹುದು.

ಈ ದೇವಿಯನ್ನು ಎರಡು ಭುಜಗಳಿರುವಂತೆ ರೂಪಿಸಿ ಇತರ ದೇವ - ದೇವಿಯರೊಂದಿಗೆ ಸಂಯುಕ್ತವಾಗಿ ಪೂಜಿಸಲೂಬಹುದು. ಲಕ್ಷ್ಮೀದೇವಿಯನ್ನು ಪುಷ್ಟಿದೇವಿಯೊಂದಿಗೆ ಪೂಜಿಸುವ ರೂಢಿ ಇದೆ. ಈ ಇಬ್ಬರೂ ದೇವಿಯರು ದ್ವಿಭುಜಗಳುಳ್ಳವರು. ಶಂಖ - ಚಕ್ರ ಧರಿಸಿರುತ್ತಾರೆ. ಲಕ್ಷ್ಮೀದೇವಿಯನ್ನು ಬಲಭಾಗದಲ್ಲಿರಿಸಬೇಕು. ಚಿನ್ನದ ಮೈಕಾಂತಿಯ ಈ ದೇವಿಯನ್ನು ಸಕಲವಿಧ ಅರ್ಚನೆಗಳಿಂದ ಪೂಜಿಸಬಹುದು.

(ಉ) **ವೀರ್ಯಲಕ್ಷ್ಮೀಸ್ತು ವೈ ಶೇಷಾ ಪೃಥಗ್ಭವನ ಕಲ್ಪನಮ್**

**ಚತುರ್ಬಾಹು ಸಮಾಯುಕ್ತಾ ಆಸನೀನಾ ವೀರಕಾ ಭವೇತ್ ||**

**ತಥಾಪಿ ಭದ್ರಕಾಸೀನಾ ಜಯಶಕ್ತ್ಯಷ್ಟಕಾ ತತಾ**

**ಅಭಯಂ ವರದಂ ಪೂರ್ವೇ ಅಪರೇ ಪದ್ಮಕೋಭಯಮ್ ||**

**ಆಲಯೇ ವೀರಲಕ್ಷ್ಮೀ ಸ್ಯಾತ್ ಗೃಹೇ ವೀರಂ ನ ಕಾರಯೇತ್**

(ವಿಹಗೇಂದ್ರ ಸಂಹಿತೆ ೨ : ೧೦ - ೧೨)

ವೀರ್ಯಲಕ್ಷ್ಮೀಗಾಗಿ ಪ್ರತ್ಯೇಕ ಮಂದಿರವನ್ನು ನಿರ್ಮಿಸಬೇಕು. ನಾಲ್ಕು ತೋಳುಗಳುಳ್ಳ ಈಕೆಯು ವೀರಾಸನದಲ್ಲಿ ಅಥವ ಭದ್ರಾಸನದಲ್ಲಿ ಕುಳಿತಿರುತ್ತಾಳೆ. ಮುಂದಿನ ಹಸ್ತಗಳಲ್ಲಿ ಅಭಯ ವರದ ಮುದ್ರೆಗಳು, ಮೇಲಿನ ಹಸ್ತಗಳಲ್ಲಿ ಪದ್ಮ ಧರಿಸಿರುತ್ತಾಳೆ. *ಗೃಹಗಳಲ್ಲಿ ವೀರಲಕ್ಷ್ಮೀಯನ್ನು ಪೂಜಿಸಬಾರದು.* ಕೇವಲ ಆಲಯಗಳಲ್ಲಿ, ಅಲ್ಲೂ ಪ್ರತ್ಯೇಕವಾಗಿ ಈಕೆಯ ಪೂಜೆಯು ನಡೆಯಬೇಕು.

ವಾಸುದೇವನ ಮಂದಿರದಲ್ಲಿ ಈಕೆಯನ್ನು ಪ್ರತ್ಯೇಕವಾಗಿ ಸ್ಥಾಪಿಸಿ ಕಾಮ್ಯಾರ್ಥ ಪೂಜೆಗಳನ್ನು ಸಲ್ಲಿಸಬೇಕು. ಅಲ್ಲೂ ಧ್ವಜಸ್ತಂಭ. ಬಲಿಕ್ರಿಯೆ ಇತ್ಯಾದಿಗಳು ಈ ದೇವಿಗೆ ಕೂಡದು. ಭಕ್ತರಿಗೆ ತೀರ್ಥ ಪ್ರದಾನವೂ ಕೂಡ ನಿಷಿದ್ಧ.



ಚಿತ್ರ ೧೧೧ : ಲಕ್ಷ್ಮೀದೇವಿ

(೮೩) ತತ್ರ ಶ್ರಿಯಾದಿ ದೇವಿನಾಂ ರೂಪತ್ರಯಮುದಾ ಹೃತಮ್
ಶ್ರೀವತ್ಸಗಾ ಯೋಗ ಲಕ್ಷ್ಮೀಭೋಗ ಲಕ್ಷ್ಮೀ ಸ್ತು ಪಾರ್ಶ್ವಗಾ ||
ವೀರಲಕ್ಷ್ಮೀಃ ಪೃಥಕ್ ಸ್ಥಾನೇ ಸ್ವಾತಂತ್ರ್ಯೇಣ ಪ್ರತಿಷ್ಠಿತಾ
ಏವಮನ್ಯಾಸು ದೇವೀಷು ರೂಪತ್ರಯ ಮುದಾಹೃತಮ್ ||
ಯೋಗಲಕ್ಷ್ಮೀ ಭೋಗ ಲಕ್ಷ್ಮ್ಯೋ ರ್ದೇವೇನ ಸಹ ಪೂಜನಮ್
ವೀರಲಕ್ಷ್ಮೀಂ ಪೃಥಗ್ಗೇಹೇ ಪೂಜಯೇತ್ ಯಥಾವಿಧಿ ||
ಯತ್ರ ಸಾ ಪೂಜ್ಯತೇ ದೇವೀ ತತ್ರ ಶ್ರೀರ್ನಿಶ್ಚಲಾ ಭವೇತ್
ತದ್ವಿಧಾನಮ್ ಪ್ರವಕ್ಷ್ಯಾಮಿ ಶೃಣುಧ್ವಂ ಮುನಿಪುಂಗವಾಃ ||
ಪ್ರಥಮಾವರಣೇ ವಾಪಿ ದ್ವಿತೀಯಾವರಣೋಽಪಿ ವಾ
ತೃತೀಯಾವರಣಾದೌ ವಾ ಶ್ರೀಯಃ ಸ್ಥಾನಂ ಪ್ರಕಲ್ಪಯೇತ್ ||
ತೃಷ್ಟಿಂ ಪುಷ್ಟಿಂ ಚ ಸಾವಿತ್ರೀಂ ವಾಗ್ದೇವೀಂ ಚ ಮುನೀಶ್ವರಾಃ
ತದ್ವಿಮಾನ ಚತುರ್ದಿಕ್ಷು ದಿಙ್ ಮೂರ್ತೀಃ ಪರಿಕಲ್ಪಯೇತ್ತು ||
ಕೋಣೇಷು ವೈನತೇಯಂ ವಾ ಸಿಂಹಂ ವಾಪಿ ಯಥಾರುಚಿ
ತದಂತ ರ್ಬ್ರಹ್ಮಭಾಗೇ ತು ದಿವ್ಯೇ ವಾ ಸ್ಥಾಪಯೇತ್ ಶ್ರಿಯಮ್ ||
ಚತುರ್ಭುಜಾಮುದಾರಾಂಗೀ ಸರ್ವಲಕ್ಷಣ ಸಂಯುತಾಮ್
ಪದ್ಮಾಸನೇನೋಪವಿಷ್ಟಾಂ ಪದ್ಮಪತ್ರಾಯತೇಕ್ಷಣಾಮ್ ||
ಮುಖ್ಯಾಭ್ಯಾಂ ಚೈವ ಹಸ್ತಾಭ್ಯಾಂ ಅಭೀತಿ ವರದಾಯಿನೀಮ್
ಜಘನ್ಯಾಭ್ಯಾಂ ತು ಹಸ್ತಾಭ್ಯಾಂ ದಿವ್ಯ ಪಂಕಜ ಧಾರಿಣೀಮ್ ||

( ಈಶ್ವರ ಸಂಹಿತೆ, ೭ : ೭ - ೧೫)

ಶ್ರೀದೇವಿಯ ಮೂರು ರೂಪಗಳು ವೀರಲಕ್ಷ್ಮೀ, ಯೋಗಲಕ್ಷ್ಮೀ, ಭೋಗಲಕ್ಷ್ಮೀ ಎಂದು ಹೇಳುತ್ತಾರೆ. ಇವರಲ್ಲಿ ವೀರಲಕ್ಷ್ಮೀಯನ್ನು ಪ್ರತ್ಯೇಕವಾಗಿ ಪ್ರತಿಷ್ಠಾಪಿಸಿ ಪೂಜಿಸಬೇಕು. ಈಕೆ ಸ್ವತಂತ್ರವಾದ ಪೂಜೆಗೆ ಅರ್ಹಳು. ಯೋಗ ಮತ್ತು ಭೋಗಲಕ್ಷ್ಮಿಯರು ದೇವನೊಂದಿಗೆ ಸಹ ಪೂಜೆಯನ್ನು ಕೈಗೊಳ್ಳುತ್ತಾರೆ.

*ವೀರ, ಯೋಗ ಮತ್ತು ಭೋಗ ಲಕ್ಷ್ಮೀದೇವಿಯನ್ನು ಶಕ್ತಿತ್ರಯ* ವೆಂದು ಪರಿಗಣಿಸುತ್ತಾರೆ. ಯೋಗಶಕ್ತಿಯು ದೇವನೊಂದಿಗೇ ಇರುತ್ತಾಳೆ. ಈಕೆಗೆ ಪ್ರತ್ಯೇಕವಾದ ಧ್ಯಾನವಿಲ್ಲ. ಶೈವಾಗಮಗಳಲ್ಲಿ ಈಕೆಯನ್ನು ಪೀಠರೂಪದಲ್ಲಿ ಎಂದರೆ ಶಿವಲಿಂಗದ ಪಾಣಿವಟ್ಟವೆಂದು ಪರಿಗಣಿಸಿ ಪೂಜಿಸ ಬೇಕೆಂಬ ಸೂಚನೆ ಇದೆ. ದೇವನ ಎಡಭಾಗಕ್ಕೆ ಈಕೆಯ ಸ್ಥಾನವೆಂದು ಹೇಳಲಾಗುತ್ತದೆ. ಸಾಧಾರಣವಾಗಿ ಪ್ರತ್ಯೇಕಧ್ಯಾನ ಈ ದೇವಿಗೆ ಇರುವುದಿಲ್ಲ.

ಭೋಗಲಕ್ಷ್ಮೀ ದೇವಿಯ ವಿಗ್ರಹವು ಕುಳಿತ ಅಥವ ನಿಂತಿರುವ ಹಾಗೆ ಎರಡು ರೂಪಗಳಲ್ಲಿ ರೂಪಿಸಬಹುದು. ಆಸನಂ ಸ್ಥಾನಕಂ ಪ್ರೋಕ್ತಂ ದ್ವಿವಿಧಾ ಭೋಗಶಕ್ತಿಕಾ ಎರಡೂ ರೀತಿಗಳಲ್ಲೂ ಆಕೆಯು ದೇವನ ಎಡಭಾಗದಲ್ಲಿರುವುದರಂದಲೇ ಈಕೆಯು ಭೋಗಶಕ್ತಿ ಎಂದು ಹೇಳಲಾಗುತ್ತದೆ.



ಚಿತ್ರ ೧೧೨ : ವೀರ್ಯ ಲಕ್ಷ್ಮೀ

ವೀರಲಕ್ಷ್ಮೀಯನ್ನು ಪ್ರತ್ಯೇಕ ಗುಡಿಯಲ್ಲಿ ವಿಧಿವತ್ತಾಗಿ ಪೂಜಿಸಬೇಕು. ಈಕೆಯು ಪೂಜೆಯನ್ನು ಕೈಗೊಂಡಲ್ಲಿ ಶ್ರೀದೇವಿ ನಿಶ್ಚಿತವಾಗಿ ಸ್ಥಿರವಾಗಿ ನಿಲ್ಲುತ್ತಾಳೆ. ಈ ದೇವಿಗೆ ಮೂರು ಆವರಣಗಳನ್ನು ಕಲ್ಪಿಸಬೇಕು. ಆ ಆವರಣಗಳಲ್ಲಿ ತುಷ್ಟಿ, ಪುಷ್ಟಿ, ಸಾವಿತ್ರೀ ಮತ್ತು ವಾಗ್ದೇವಿಯರನ್ನು ಸ್ಥಾಪಿಸಬೇಕು. ಈ ದೇವಿಯ ಆಲಯದ ವಿಮಾನದಲ್ಲಿ ನಾಲ್ಕು ದಿಕ್ಕುಗಳಲ್ಲೂ ದಿಕ್‌ಪಾಲಕರನ್ನು ಸ್ಥಾಪಿಸಬೇಕು. ಕೋನಗಳಲ್ಲಿ ಗರುಡನನ್ನಾಗಲಿ, ಸಿಂಹವನ್ನಾಗಲಿ ಅಥವ ಸ್ಥಪತಿ ನಿರ್ದೇಶಿಸುವ ಇತರ ರಚನೆಯನ್ನಾಗಲಿ ರೂಪಿಸಬೇಕು. ನಂತರ ಬ್ರಹ್ಮಭಾಗದಲ್ಲಿ ನಾಲ್ಕು ತೋಳುಗಳುಳ್ಳ ವೀರಲಕ್ಷ್ಮೀಯನ್ನು ಸ್ಥಾಪಿಸಬೇಕು. ಪದ್ಮಾಸನದಲ್ಲಿ ಪದ್ಮಪತ್ರದ ಮೇಲೆ ಕುಳಿತಿರುವ ಈ ದೇವಿಯ ಮುಂದಿನ ಹಸ್ತಗಳಲ್ಲಿ ಅಭಯ ವರದಗಳು, ಮೇಲಿನ ಹಸ್ತಗಳಲ್ಲಿ ಪದ್ಮಗಳನ್ನು ಧರಿಸಿರಬೇಕು.

(ಖು) ಲಕ್ಷ್ಮೀ: ಪದ್ಮಾಸನಾಸೀನಾ ದ್ವಿಭುಜಾ ಕಾಂಚನ ಪ್ರಭಾ
ಹೇಮ ರತ್ನೋಜ್ವಲ ದ್ದಿವ್ಯ ಕರ್ಣಕುಂಡಲ ಮಂಡಿತಾ ॥
ಸುಯವ್ವನಾ ಸುರಮ್ಯಾಂಗಾ ಕುಂಚಿತ ಭ್ರೂ: ಸವಿಭ್ರಮಾ
ರಕ್ತೋಷ್ಠೀ ಪೀನಗಂಡಾ ಚ ಕಂಚುಕಾಢ್ಯ ಸ್ಥನದ್ವಯೀ ॥
ಶಿರಸೋ ಮಂಡನಂ ಚೈವ ಹಸ್ತೌ ತು ವರದಾಭಯಾ
ಅಂಬುಜಂ ದಕ್ಷಿಣೇ ಹಸ್ತೇ ವಾಮೇ ಶ್ರೀಫಲಮಿಷ್ಯತೇ ॥
ಸುಮಧ್ಯಾವಿಪುಲ ಶ್ರೋಣೀ ಶೋಭನಾಂಬರ ವೇಷ್ಟಿತಾ
ಮೇಖಲಾ ಕಟಿಸೂತ್ರಾ ಚ ಸರ್ವಾಭರಣ ಭೂಷಿತಾ ॥

(ಶ್ರೀ ಕಾಶ್ಯಪಶಿಲ್ಪ ಶಾಸ್ತ್ರಂ, ೪೮ : ೧೧೮ - ೧೨೧)

ಲಕ್ಷ್ಮೀ ದೇವಿಯು ಪದ್ಮಪೀಠದ ಮೇಲೆ ಕುಳಿತಿರುತ್ತಾಳೆ. ಚಿನ್ನದ ಮೈಕಾಂತಿಯುಳ್ಳ ಸುಪುಷ್ಟವಾದ ಎರಡು ತೋಳುಗಳನ್ನು ಪಡೆದಿರುತ್ತಾಳೆ. ಕಿವಿಗಳಿಗೆ ದಿವ್ಯರತ್ನಕುಂಡಲಗಳನ್ನು ಧರಿಸಿದ್ದು ಅಂದವಾದ ಯೌವದ ಶರೀರದಿಂದ ಶೋಭಾಯಮಾನಳಾಗಿರುತ್ತಾಳೆ. ಕಮಾನಿನಂತೆ ಬಗ್ಗಿರುವ ಕಣ್ಣು ಹುಬ್ಬುಗಳು, ಕೆಂಪಾಗಿರುವ ತುಟಿಗಳನ್ನು ಪಡೆದಿದ್ದು ಕಂಚುಕದಿಂದ ತನ್ನ ವಕ್ಷಸ್ಥಳವನ್ನು ಮರೆಮಾಡಿರುತ್ತಾಳೆ. ಶಿರಸ್ಸಿನಲ್ಲಿ ಶಂಖ ಚಕ್ರಗಳನ್ನು ಧರಿಸಿರುತ್ತಾಳೆ. ಬಲಗೈಯಲ್ಲಿ ಪದ್ಮವನ್ನು, ಎಡೈಯಲ್ಲಿ ಶ್ರೀ ಫಲವನ್ನು (ಬಿಲ್ವದ ಕಾಯಿ) ಅಥವ ವರದ ಅಭಯಮುದ್ರೆಗಳನ್ನೂ ಧರಿಸಿರಬಹುದು. ಕೃಶವಾದ ಸೊಂಟವನ್ನೂ, ವಿಶಾಲವಾದ ಜಘನ ಪ್ರದೇಶವನ್ನು ಪಡೆದಿದ್ದು ಶೋಭನಾಂಬರಗಳನ್ನು, ವಡ್ಯಾಣವನ್ನು, ಕಟಿಸೂತ್ರವನ್ನೂ ಧರಿಸಿರುತ್ತಾಳೆ.

(ಖೂ) ಶ್ರೀಯಂ ದೇವೀಂ ಪ್ರವಕ್ಷ್ಯಾಮಿ ನವಯೌವನ ಶಾಲಿನೀಮ್
ಸುಲೋಚನಾಂ ಚಾರುವಕ್ತ್ರಾಂ ಗೌರಾಂಗಿಮರುಣಾಧರಾಮ್ ॥
ಸೀಮಂತ ಬಿಬುಧೀಶೀರ್ಷೋ ಮಣಿಕುಂಡಲಧಾರಿಣೀಮ್
ಶ್ರೀಫಲಂ ದಕ್ಷಿಣೇ ಪಾಣೌ ವಾಮೇ ಪದ್ಮಂ ತು ಬಿಭ್ರತೀಮ್ ॥
ಪದ್ಮೇ ಪದ್ಮಾಂ ಸಮಾಸೀನಂ ಶ್ವೇತವಸ್ತ್ರ ವಿಭೂಷಿತಾಮ್
ಕಂಚುಕಾಬದ್ಧಗಾತ್ರೀಂ ಮುಕ್ತಾಹಾರ ವಿಭೂಷಿತಾಮ್ ॥



ಚಿತ್ರ ೧೧೩ : ಲಕ್ಷ್ಮೀ

**ಚಾಮರೈರ್ವೀಜ್ಯಮಾನಂ ಚ ಯೋಷಿದ್ಭ್ಯಾಂ ಪಾರ್ಶ್ವಯೋರ್ದ್ವಯೋಃ**

**ಸಮಾಸ್ನೈ ಸ್ನಾಪ್ಯ ಮಾನಂ ಚ ಭೃಂಗಾರ ಸಲಿಲೋತ್ಕರೈಃ ||**

(ಶಿಲ್ಪರತ್ನಂ)

ಶಿಲ್ಪರತ್ನದಲ್ಲಿಯೂ ಕಾಶ್ಯಪ ಶಿಲ್ಪಶಾಸ್ತ್ರದ ವರ್ಣನೆಯೇ ಇರುವ ಲಕ್ಷ್ಮೀ ಇದ್ದರೂ ಇಬ್ಬರು ಚಾಮರಧಾರಿಣಿಯರ ಉಲ್ಲೇಖವಿದೆ.

ವಿಷ್ಣುವಿನ ಬಳಿನಿಂತಿರುವಾಗ ಲಕ್ಷ್ಮಿಗೆ ಎರಡೇ ತೋಳು. ಪ್ರತ್ಯೇಕವಾಗಿ ಲಕ್ಷ್ಮೀ ಒಬ್ಬಳೇ ಇದ್ದರೆ ಆಗ ನಾಲ್ಕು ತೋಳುಗಳಿರಬೇಕು. ಬಲಹಸ್ತದಲ್ಲಿ ಪದ್ಮ, ಶ್ರೀಫಲ (ಬಿಲ್ವವೃಕ್ಷದ ಕಾಯಿ), ಎಡಪಾರ್ಶ್ವದಲ್ಲಿ ಅಮೃತಕುಂಭ ಮತ್ತು ಶಂಖ. ಸಿಂಹಾಸನದ ಮೇಲೆ ಒಂದು ಪದ್ಮ, ಅದರಲ್ಲಿ ಎಂಟು ದಳಗಳು. ಅದರಲ್ಲಿ ಲಕ್ಷ್ಮಿ ಕುಳಿತಿರಬೇಕು. ದೇವಿಗೆ ಸ್ವಲ್ಪ ಹಿಂದೆ ಎರಡೂ ಕಡೆಗಳಲ್ಲೂ ನಿಂತಿರುವ ಆನೆಗಳು ನೀರನ್ನು ಆಕೆಯ ಮೇಲೆ ಸುರಿಯುತ್ತಿರಬೇಕು. ಕೇಯೂರ, ಕಂಕಣಗಳು ಮತ್ತು ಇತರ ಆಭರಣಗಳಿಂದ ಆಕೆ ಅಲಂಕರಿಸಲ್ಪಟ್ಟಿರಬೇಕು.

(ಎ) ಲಕ್ಷ್ಮೀಯು ಮಹಾಲಕ್ಷ್ಮಿಯಾಗಿ ಸೃಷ್ಟಿ ಕ್ರಿಯೆಯಲ್ಲಿ ಪಾಲ್ಗೊಳ್ಳುವಾಗ ಆಕೆಯಲ್ಲಿಯ ಹಲವು ಭಾಗಗಳು ಬೇರೆ ಬೇರೆಯ ರೂಪಗಳನ್ನು ಧರಿಸಿ, ಸೃಷ್ಟಿಕ್ರಿಯೆ ನಡೆಸುವುದನ್ನು ವೈಷ್ಣವ ಶಾಸ್ತ್ರಗಳು ವಿವರಿಸುತ್ತವೆ. ಆಗ ಆಕೆಯ ಸಾತ್ತ್ವಿಕ ಅಂಶವು ಪಡೆದುಕೊಳ್ಳುವ ರೂಪಗಳನ್ನು *ಭಾರತಿ, ವಾಕ್, ಸರಸ್ವತಿ, ಆರ್ಯ, ಬ್ರಾಹ್ಮೀ* ಇತ್ಯಾದಿ ಹೆಸರುಗಳಿಂದ ಕರೆಯುತ್ತಾರೆ. ಅದರಲ್ಲಿ ಆರ್ಯಾ ರೂಪವನ್ನು ಈ ರೀತಿಯಲ್ಲಿ ಧ್ಯಾನಿಸಲಾಗಿದೆ .

**ಪ್ರಾಸಾದಸ್ಯಾನುರೂಪೇಣ ಪ್ರತಿಮಾಂ ಕಾರಯೇದ್ ಬುಧಃ**

**ನವತಾಲೇನ ವಾ ಕುರ್ಯಾದಷ್ಟತಾಲೇನ ವಾ ಪುನಃ ||**

**ಶ್ಯಾಮಾಂ ತ್ರಿಲೋಚನಾಂ ಕುರ್ಯಾಚ್ಛಂಖ ಚಕ್ರ ಧನುರ್ಧರಮ್**

**ಶೂಲೋಪಧ್ಮಾಂಶುಕಧರಾಂ ರಕ್ತಾಂಬರ ವಿಭೂಷಣಾಮ್ ||**

**ರಕ್ತಪಾದಾನನಾಂ ಸೌಮ್ಯಂ ಹಾರನೂಪುರ ಶೋಭಿನೀಮ್**

**ರಕ್ತಶೋಕಸ್ರಜೋಪೇತಾಂ ಮೌಲಿನೀಂ ಸಾವತಂಸಕಾಮ್ ||**

**ತ್ರಯೋದಶಾಬ್ದದೇಶೀಯಾ ಮುತ್ಪಲಾಯತ ಲೋಚನಮ್**

**ಸಕೃಷ್ಣಸಾರಾಂ ತಾಮಾರ್ಯಾಂ ಕುರ್ಯಾತ್ ಸರ್ಪೇಂದ್ರ ಮೇಖಲಾಮ್ ||**

**ಯೋಗನಿದ್ರೇತಿ ಸಾ ಪ್ರೋಕ್ತಾ ವಿಷ್ಣೋರ್ದೇವೇಶ್ವರಸ್ಯ ಹ**

**ಅತಃ ಪರಂ ಬ್ರವೀಮ್ಯಸ್ಯಾಃ ಪರಿವಾರ ಚತುಷ್ಟಯಮ್ ||**

**ಪಶ್ಚಾಚ್ಚಾಮರಧಾರಿಣ್ಯೌ ಜಯಾ ಚ ವಿಜಯಾಪಿ ಚ**

**ಚೂಡಾ ಮಕುಟಧಾರಿಣ್ಯೌ ರಕ್ತಶುಕ್ಲಾಂಬರ ಸ್ರಜೌ ||**

**ದಕ್ಷಿಣೇ ಚೈವ ವಾಮೇ ಚ ಸ್ಥಿತೇ ಕುರ್ಯಾದ್ವಿಚಕ್ಷಣಃ**

**ಪುಷ್ಕಲಾ ಚೈವ ಪೂರ್ಣಾ ಚ ಕಾರ್ಯೇ ಚೋಭಯ ಪಾರ್ಶ್ವಯೋಃ ||**

**ಶುಕ್ಲನೀಲಾಂಬರಧರೇ ಚೂಡಾಮಕುಟ ಶೋಭಿತೇ**

**ದಕ್ಷಿಣೇ ಚೈವ ವಾಮೇ ಚ ಸ್ಥಿತೇ ಕುರ್ಯಾದ್ವಿಚಕ್ಷಣಃ ||**

**ತಾಂಬೂಲ ಪತ್ರ ಹಸ್ತಾ ಸ್ಯಾತ್ ಪುಷ್ಕಲಾ ರೂಪಶಾಲಿನೀ**
**ಪೂರ್ಣಾ ಕಂದುಕ ಹಸ್ತಾ ಸ್ಯಾದುದ್ವಹಂತೀ ಚ ದರ್ಪಣಮ್ ||**
**ಏವಂ ಕುರ್ಯಾತ್ ಸ್ಥಿತಾಂ ದೇವೀಂ ನಾಸೀನಾಂ ತು ಕದಾಚನ**
**ಪಾದಪೀಠಂ ಭವೇತ್ ಪದ್ಮಂ ದೇವ್ಯಾ ನಾನ್ಯತ್ಕದಾಚನ ||**

(ಸನತ್ಕುಮಾರ ಸಂಹಿತೆ, ಶಿವ : ೧ : ೨೧೦ - ೨೧೯)

ದೇವಾಲಯದ ಬಗೆಯ ಅನುಸಾರವಾಗಿ ಪ್ರತಿಮೆಯನ್ನು ನಿರ್ಮಿಸುವುದು ಶಿಲ್ಪಿಯ ಕರ್ತವ್ಯ. ಆರ್ಯಾ ದೇವಿಯನ್ನು ನವತಾಲ ಅಥವ ಅಷ್ಟತಾಲದಲ್ಲಿ ರೂಪಿಸಬೇಕು. ಈ ದೇವಿಯು ಶ್ಯಾಮಲ ವರ್ಣದವಳಾಗಿದ್ದು ಮೂರು ಕಣ್ಣುಗಳನ್ನು ಹೊಂದಿರುತ್ತಾಳೆ. ಶಂಖ - ಚಕ್ರ - ಧನುಸ್ಸು - ತ್ರಿಶೂಲವನ್ನು ಅಥವ ಅಂಕುಶವನ್ನು ಧರಿಸಿರುತ್ತಾಳೆ. ಕೆಂಪು ವಸ್ತ್ರಗಳನ್ನು ಧರಿಸಿರುತ್ತಾಳೆ. ಕೆಂಪು ವರ್ಣದ ಪಾದಗಳುಳ್ಳ ಈಕೆಯು ಸೌಮ್ಯಳಾಗಿರುತ್ತಾಳೆ. ಹಾರಗಳನ್ನು, ನೂಪುರ, ಕೇಯೂರ, ಕಟಕಗಳನ್ನು ಧರಿಸಿರುತ್ತಾಳೆ. ತಾವರೆಯ ಕಣ್ಣುಗಳುಳ್ಳ ಈಕೆಯು ಹದಿಮೂರು ವರ್ಷಗಳ ಜವ್ವನೆಯಾಗಿದ್ದು ಕೃಷ್ಣವರ್ಣದ ಸಾರಂಗವನ್ನು ವಾಹನವಾಗಿ ಪಡೆದಿರುತ್ತಾಳೆ. ಸರ್ಪವನ್ನು ಸೊಂಟದಲ್ಲಿ ಮೇಖಲವಾಗಿ ಪಡೆದಿರುವ ಹಾಗೆ ರೂಪಿಸಬೇಕು. ವಿಷ್ಣು ಯೋಗನಿದ್ರೆಯಲ್ಲಿರುವಂತೆ ರೂಪಿಸಬಹುದು. ಈಕೆಗೆ ನಾಲ್ವರು ಪರಿವಾರ ದೇವತೆಗಳು ಇರಬಹುದು. ಹಿಂಭಾಗದಲ್ಲಿ ಜಯ ಮತ್ತು ವಿಜಯ ಇದ್ದು ಚಾಮರಧಾರಿಣಿಯ ರಾಗಿರುತ್ತಾರೆ. ಇವರು ಚೂಡಾ ಮಕುಟವನ್ನು ಧರಿಸಿ ಕೆಂಪುವಸ್ತ್ರಗಳನ್ನು ಧರಿಸಿರುತ್ತಾರೆ. ಮುಂಭಾಗದಲ್ಲಿ ಇಕ್ಕೆಲಗಳಲ್ಲಿ ಪುಷ್ಕಲಾ ಮತ್ತು ಪೂರ್ಣಾ ದೇವಿಯರು ಇರುತ್ತಾರೆ. ಇವರು ಬಿಳುಪಾದ ಮತ್ತು ನೀಲವರ್ಣದ ವಸ್ತ್ರಗಳನ್ನು ಚೂಡಾ ಮಕುಟವನ್ನು ಧರಿಸಿರುತ್ತಾರೆ. ಎಳೆಯ ವೀಳೆಯದೆಲೆಯಂತಹ ಕೋಮಲ ಹಸ್ತಗಳುಳ್ಳ ಪುಷ್ಕಲಾದೇವಿಯು ರೂಪವತಿ. ಮಲ್ಲಿಗೆಯಂತಹ ಹಸ್ತವಿರುವ ಪೂರ್ಣಾದೇವಿಯು ಕನ್ನಡಿಯನ್ನು ಹಿಡಿದಿರುತ್ತಾಳೆ. ಇವರು ಸದಾ ನಿಂತಿರಬೇಕು. ಧ್ಯಾನದಲ್ಲಿ ಕುಳಿತಿರುವಂತೆ ಸೂಚಿಸದೆ ಇದ್ದರೆ ಇವರನ್ನು ಕುಳಿತಿರುವಂತೆ ರೂಪಿಸಬಾರದು. ಇವರಿಗೆ ಪದ್ಮ ಪಾದಪೀಠ ಮಾತ್ರವೇ ಇರುತ್ತದೆ.

(ಏ) ಲಕ್ಷ್ಮಿಯ ಭಿನ್ನ ರೂಪಗಳಲ್ಲಿ ಅಷ್ಟಲಕ್ಷ್ಮೀ ರೂಪವು ಬಹು ಜನಪ್ರಿಯವಾದುದು. ಇದು ಬಹು ಶುಭ ರೂಪವೆಂದು ಅನೇಕ ಸಂದರ್ಭಗಳಲ್ಲಿ ಆರಾಧಿಸುತ್ತಾರೆ. ಅಷ್ಟಲಕ್ಷ್ಮೀಯರ ಮೂರ್ತಿಗಳನ್ನು ರೂಪಿಸಿರುವ ಕಲಶದ ಚಂಬುಗಳು ಬಹುವಾಗಿ ಬಳಕೆಯಲ್ಲಿವೆ. ಈಗ ನಾವು ಕ್ರಮವಾಗಿ ಅಷ್ಟಲಕ್ಷ್ಮೀಯರ ಧ್ಯಾನಗಳನ್ನು ತಿಳಿದುಕೊಳ್ಳೋಣ.

**(I)** *ಆದಿ ಲಕ್ಷ್ಮೀ*

**ದ್ವಿ ಭುಜಾಂ ಚ ದ್ವಿನೇತ್ರಾಂ ಚ ಪದ್ಮಾಭಯವರಾಂಚಿತಾಮ್**
**ಪುಷ್ಪಮಾಲಾ ಸಮಾಯುಕ್ತಾಂ ಪ್ರಭಾಮಂಡಲ ಮಂಡಿತಾಮ್ |**
**ಸರ್ವಲಕ್ಷಣ ಸಂಪನ್ನಾಂ ಸರ್ವಾಭರಣ ಭೂಷಿತಾಮ್**
**(ಸುಂದರೀ) ವಂದೇಹ ಮಾದಿಲಕ್ಷ್ಮೀಂ (ಚ) ತಾಮಷ್ಟಮಂಗಳ ಸಂಯುತಾಮ್ ||**

ಆದಿ ಲಕ್ಷ್ಮೀದೇವಿಯು ಎರಡು ಹಸ್ತಗಳೊಂದಿಗೆ, ಎರಡು ಕಣ್ಣುಗಳೊಂದಿಗೆ, ಕಾಂತಿ ಪುಂಜಗಳೊಂದಿಗೆ, ಹೂಮಾಲೆಗಳೊಂದಿಗೆ, ಉತ್ತಮವಾದ ಸರ್ವಲಕ್ಷಣಗಳೊಂದಿಗೆ



ಚಿತ್ರ ೧೧೪ : ಆರ್ಯಾ



ಚಿತ್ರ ೧೧೫ : ಆದಿಲಕ್ಷ್ಮೀ

ಸರ್ವಾಭರಣಗಳನ್ನು ಧರಿಸಿಕೊಂಡಿರುತ್ತಾಳೆ. ಬಲಹಸ್ತದಲ್ಲಿ ಅಭಯಮುದ್ರೆಯೊಂದಿಗೆ ಪದ್ಮವನ್ನು ಹಿಡಿದಿರುತ್ತಾಳೆ. ಎಡಹಸ್ತದಲ್ಲಿ ವರದ ಮುದ್ರೆಯನ್ನು ಧರಿಸಿರುತ್ತಾಳೆ.

ಅಷ್ಟ ಮಂಗಳಗಳೊಂದಿಗೆ ಕೂಡಿರುವ ಆದಿಲಕ್ಷ್ಮೀದೇವಿಗೆ ನಾನು ನಮಸ್ಕರಿಸುತ್ತೇನೆ.

**(ii)** ***ಸಂತಾನ ಲಕ್ಷ್ಮೀ***

**ಜಟಾಮಕುಟ ಸಂಯುಕ್ತಾಂ ಸ್ಥಿರಾಸನಸಮಂಚಿತಾಮ್**

**ಅಭಯಂ ಖಡ್ಗ ಖೇಟಂ ಚ ವರದಂ ಚ ಚತುರ್ಭುಜೈಃ ||**

**ಕಂಚುಕಚ್ಛನ್ನ ವೀರೈಶ್ಚ ಮೌಕ್ತಿಕಾಭರಣೋಜ್ಜ್ವಲೈಃ**

**ದೀಪ ಚಾಮರ ಹಸ್ತೈಶ್ಚ (ಧಾರೀಭಿಃ) ಪಾರ್ಶದ್ವಯ ವಿರಾಜಿತಾಮ್ ||**

ಸಂತಾನ ಲಕ್ಷ್ಮೀಯು ನಾಲ್ಕು ತೋಳುಗಳನ್ನು ಪಡೆದಿದ್ದು, ಜಟಾಮುಕುಟ ಧರಿಸಿರುವ ಒಂದು ಮುಖದಿಂದ ಸ್ಥಿರವಾದ ಆಸನದಲ್ಲಿ ಕುಳಿತು, ಕೊರಳಲ್ಲಿ ಮುತ್ತಿನಹಾರವನ್ನು ಧರಿಸಿರುತ್ತಾಳೆ. ದೀಪಗಳನ್ನು, ಚಾಮರಗಳನ್ನು, ಕವಚಗಳನ್ನು ಧರಿಸಿರುವ ವೀರರು ಇಕ್ಕೆಲಗಳಲ್ಲೂ ತೇಜೋವಂತವಾಗಿ ನಿಂತಿರುತ್ತಾರೆ. ಬಲಪಾರ್ಶ್ವದಲ್ಲಿ ಕೆಳಹಸ್ತದಲ್ಲಿ ಅಭಯಮುದ್ರೆ, ಮೇಲಿನ ಹಸ್ತದಲ್ಲಿ ಖಡ್ಗ, ಎಡಪಾರ್ಶ್ವದಲ್ಲಿ ಕೆಳಹಸ್ತದಲ್ಲಿ ವರದಮುದ್ರೆ ಮೇಲಿನ ಹಸ್ತದಲ್ಲಿ ಖೇಟಕ ಗುರಾಣಿ ಧರಿಸಿರುತ್ತಾಳೆ.

**(iii)** ***ಗಜಲಕ್ಷ್ಮೀ***

**ಲಾಕ್ಷಾರಸಸವರ್ಣಾಭಾಂ ಪದ್ಮದ್ವಯ ವಿರಾಜಿತಾಮ್**

**ಅಭಯಂ ವರದಂ ಚೈವ ಕರಂಡ ಮಕುಟಾನ್ವಿತಾಮ್ ||**

**ಪದ್ಮಾಸನಸ್ಥಿತಾಂ ಚೈವ ವ್ಯಾಕೀರ್ಣಕುಂತಲಾನ್ವಿತಾಮ್**

**ಸವ್ಯದಕ್ಷಿಣ ಪಾರ್ಶ್ವೇ ಚ ಗಜತುಂಡಾಭಿಷೇಚನಮ್ ||**

ಗಜಲಕ್ಷ್ಮೀದೇವಿಯು ಕರಗಿಸಿರುವ ಅರಗಿನಂತೆ ಕೆಂಪುವರ್ಣದ ದೇಹ ಛಾಯೆಯಲ್ಲಿ, ಕಿರೀಟ ನಾಲ್ಕು ತೋಳು ಮತ್ತು ಬೆನ್ನಿನ ಮೇಲೆ ಹರಡಿಕೊಂಡಿರುವ ತಲೆಗೂದಲುಗಳಿಂದ ಕಂಗೊಳಿಸುತ್ತಿರುತ್ತಾಳೆ. ಪದ್ಮಾಸನದಲ್ಲಿ ಕುಳಿತಿರುವ ಈಕೆಯು ತನ್ನ ಬಲಪಾರ್ಶ್ವದ ಕೆಳಹಸ್ತದಲ್ಲಿ ಅಭಯಮುದ್ರೆಯನ್ನು, ಮೇಲಿನ ಹಸ್ತದಲ್ಲಿ ಪದ್ಮವನ್ನು, ಎಡ ಪಾರ್ಶ್ವದ ಕೆಳ ಹಸ್ತದಲ್ಲಿ ವರದಮುದ್ರೆಯನ್ನು, ಮೇಲಿನ ಹಸ್ತದಲ್ಲಿ ಪದ್ಮವನ್ನು ಧರಿಸಿರುತ್ತಾಳೆ. ಆಕೆಯ ಇಕ್ಕೆಲಗಳಲ್ಲೂ ಎರಡು ಆನೆಗಳು ತಮ್ಮ ಸೊಂಡಿಲುಗಳಿಂದ ಆಕೆಯ ಮೇಲೆ ನೀರನ್ನು ಅಭಿಷೇಕ ಮಾಡುತ್ತಿರುತ್ತವೆ.

**(iv)** ***ಧನಲಕ್ಷ್ಮೀ***

**ಕಿರೀಟ ಮಕುಟಾಯುಕ್ತಾಂ ಸ್ವರ್ಣಾಭಾಂ ಚ ಸುಯೌವನಾಮ್**

**ಚಕ್ರಂ ಬಾಣಂ ಚ ತಾಂಬೂಲಂ ದಕ್ಷಿಣೇನ ಕರಣೇನ ತು ||**

**ಶಂಖಂ ಚೈವ ಧನುಃ ಕುಂಡೀಂ ದಧಾನಾಂ (ಧಾರಯೇತ್) ಕರವಾಮಕೇ**

**ಸ್ತನಕಂಚುಕ ಸಂಯುಕ್ತಾಂ (ಸರ್ವಾಭರಣ) ವಂದೇ ಭೂಷಾವಿಭೂಷಿತಾಮ್ ||**

ಧನಲಕ್ಷ್ಮೀದೇವಿಯು ಬಂಗಾರದಂತೆ ಹಳದಿಯ ಮೈಕಾಂತಿಯಿಂದ, ಸುಂದರವಾದ ಹಾಗೂ ಪುಷ್ಟವಾದ ಯವ್ವನದ ಶರೀರದಿಂದ, ಆರು ತೋಳುಗಳನ್ನು ಪಡೆದಿದ್ದು, ಸ್ತನಗಳನ್ನು ಆವರಿಸಿರುವ ಕಂಚುಕದೊಡನೆ, ಅಂದವಾದ ಕಿರೀಟದೊಂದಿಗೆ, ಎಲ್ಲಾ ಅವಯವಗಳನ್ನು ಅಲಂಕರಿಸಿರುವ ಆಭೂಷಣಗಳೊಂದಿಗೆ ಕುಳಿತಿರುತ್ತಾಳೆ. ಬಲಪಾರ್ಶ್ವದ ಮೇಲಿನ ಹಸ್ತದಲ್ಲಿ



ಚಿತ್ರ ೧೧೬ : ಸಂತಾನ ಲಕ್ಷ್ಮೀ



ಚಿತ್ರ ೧೧೭ : ಗಜಲಕ್ಷ್ಮೀ

ಚಕ್ರವನ್ನು, ಮಧ್ಯಹಸ್ತದಲ್ಲಿ ಬಾಣವನ್ನು, ಕೆಳ ಹಸ್ತದಲ್ಲಿ ತಾಂಬೂಲವನ್ನು, ಹಾಗೆಯೇ ಎಡಪಾರ್ಶ್ವದ ಮೇಲಿನ ಹಸ್ತದಲ್ಲಿ ಶಂಖವನ್ನು, ಮಧ್ಯಹಸ್ತದಲ್ಲಿ ಧನುಸ್ಸನ್ನು, ಕೆಳ ಹಸ್ತದಲ್ಲಿ ಕಮಂಡಲುವನ್ನು ಧರಿಸಿರುತ್ತಾಳೆ. ಈ ರೀತಿಯ ರೂಪದಲ್ಲಿರುವ ಧನಲಕ್ಷ್ಮೀಯನ್ನು ನಾನು ನಮಸ್ಕರಿಸುತ್ತಿದ್ದೇನೆ.

**(v) *ಧಾನ್ಯಲಕ್ಷ್ಮೀ***

**ಅಭಯಂ ವರದಂ ಚೈವ ಕಿರೀಟ ಮಕುಟಾಂಚಿತಾಮ್**

**ಅಂಬುಜಂ ಚೇಕ್ಷುಶಾಲೀಂ ಚ ದ್ರೋಣಿಕಾಂ ಕದಲೀ ಫಲೈಃ ||**

**ಅಂಗದಂ ದಕ್ಷವಾಮೇ ತು ಶ್ವೇತರೂಪಾಂ ಚ ಧಾರಿಣೀಮ್**

**ಕೃಪಾಮೂರ್ತಿಂ ಗಜಾರೂಢಂ ವಂದೇತಿ (ಸರ್ವಾ)ಲಂಕಾರ ಸಂಯುತಾಮ್ ||**

ಬಿಳುಪಾದ ಮೈ ಬಣ್ಣದಿಂದ ತೇಜೋವಂತವಾಗಿದ್ದು, ಪ್ರಕಾಶಿಸುತ್ತಿರುವ ಕಿರೀಟ, ಆರು ತೋಳುಗಳಲ್ಲಿ ಕಟಕ ಕೇಯೂರಗಳು, ತುಂಬಿರುವ ಮೈಕಟ್ಟು, ಕೃಪಾಪೂರ್ಣ ದೃಷ್ಟಿ, ಗಜವಾಹನದೊಂದಿಗೆ ಧಾನ್ಯಲಕ್ಷ್ಮೀದೇವಿಯು ಸರ್ವಾಲಂಕಾರಗಳೊಂದಿಗೆ ಇರುತ್ತಾಳೆ. ಬಲಪಾರ್ಶ್ವದಲ್ಲಿ ಕೆಳಗಿಂದ ಮೇಲಕ್ಕೆ ಕ್ರಮವಾಗಿ ಅಭಯ ಮುದ್ರೆ, ಭತ್ತದ ಪೈರು ಮತ್ತು ಬಾಳೆಹಣ್ಣು ಅಥವಾ ಬಾಳೆಹಣ್ಣು ತುಂಬಿರುವ ಪಾತ್ರೆ ಇರುತ್ತವೆ. ಹಾಗೆಯೇ ಎಡಪಾರ್ಶ್ವದಲ್ಲಿ ಕೆಳಭಾಗದಿಂದ ಮೇಲಕ್ಕೆ ವರದ ಮುದ್ರೆ, ಪದ್ಮವನ್ನು ಮತ್ತು ಕಬ್ಬಿನ ಜಲ್ಲೆಯನ್ನು ಧರಿಸಿರುತ್ತಾಳೆ.

ಈ ರೂಪದಲ್ಲಿರುವ ಧಾನ್ಯಲಕ್ಷ್ಮಿಯನ್ನು ನಮಸ್ಕರಿಸುತ್ತಿದ್ದೇನೆ.

**(vi) *ವಿಜಯ ಲಕ್ಷ್ಮೀ***

**ಅಬ್ಜ ಹಸ್ತಯುತಾಂ ಲಕ್ಷ್ಮೀಂ ಸಿಂಹಾಸನ ಸುಸಂಸ್ಥಿತಾಮ್**

**(ಸ್ವರ್ಣಾಭಾಂ ಚ ದ್ವಿ ನೇತ್ರಾಂ ಚ ಏಕವಕ್ತ್ರಾಂ ಭುಜಾಷ್ಟಕಾಮ್)**

**ಸ್ವರ್ಣಾಭಾ ಮೇಕ ವಕ್ತ್ರಾಂ ಚ ದ್ವಿನೇತ್ರಾಂ ಚ ಭುಜಾಷ್ಟಕಾಮ್ ||**

**ಖಡ್ಗಂ ಪಾಶಂ ಚ ಚಕ್ರಂ ಚಾಭಯಂ ( ಚ ) ವೈ ಸವ್ಯ ಹಸ್ತಕೇ**

**ಖೇಟಕಂ ಚಾಂಕುಶಂ ಶಂಖಂ ವರದಂ ವಾಮಹಸ್ತಕೇ ||**

**ಹಂಸ ವಾಹನ ಆಸೀನಾಂ ಪುಷ್ಪಮಾಲಾಭಿರಾವೃತಾಮ್**

ವಿಜಯಲಕ್ಷ್ಮೀದೇವಿಯು ಬಂಗಾರದಂತಹ ಹಳದಿ ಮೈಕಾಂತಿಯಿಂದ ಎಂಟು ತೋಳುಗಳಲ್ಲಿ ಪದ್ಮಗಳಂತಹ ಕೋಮಲ ಹಸ್ತಗಳನ್ನು ಪಡೆದಿದ್ದು ಎರಡು ಕಣ್ಣುಗಳಿರುವ ಒಂದು ಮುಖದೊಂದಿಗೆ ಸಿಂಹಾಸನದಲ್ಲಿ ಕುಳಿತಿರುತ್ತಾಳೆ. ಬಲಪಾರ್ಶ್ವದ ಹಸ್ತಗಳಲ್ಲಿ ಕೆಳಗಿನಿಂದ ಮೇಲಕ್ಕೆ ಕ್ರಮವಾಗಿ ಅಭಯಮುದ್ರೆ, ಖಡ್ಗ, ಪಾಶ, ಚಕ್ರ ಮತ್ತು ಎಡಪಾರ್ಶ್ವದ ಹಸ್ತಗಳಲ್ಲಿ ಅದೇ ರೀತಿಯಾಗಿ ಕೆಳಗಿನಿಂದ ಮೇಲಕ್ಕೆ ಕ್ರಮವಾಗಿ ವರದಮುದ್ರೆ, ಖೇಟಕ, (ಗುರಾಣಿ), ಅಂಕುಶ, ಶಂಖವನ್ನು ಧರಿಸಿರುತ್ತಾಳೆ. ಈಕೆಯು ವಾಹನ ಹಂಸ. ಹೂಮಾಲೆಗಳಿಂದಲೂ ಈಕೆ ಆವೃತ್ತಳಾಗಿರುತ್ತಾಳೆ.

ಈ ರೂಪದಲ್ಲಿರುವ ವಿಜಯಲಕ್ಷ್ಮೀಯನ್ನು ನಮಸ್ಕರಿಸುತ್ತೇನೆ



ಚಿತ್ರ ೧೧೮ : ಧನಲಕ್ಷ್ಮೀ



ಚಿತ್ರ ೧೧೯ : ಧಾನ್ಯ ಲಕ್ಷ್ಮೀ



ಚಿತ್ರ ೧೨೦ : ವಿಜಯ ಲಕ್ಷ್ಮೀ



ಚಿತ್ರ ೧೨೧ : ಐಶ್ವರ್ಯ ಲಕ್ಷ್ಮೀ



ಚಿತ್ರ ೧೨೨ : ವೀರ ಲಕ್ಷ್ಮೀ

**(vii) ಐಶ್ವರ್ಯ ಲಕ್ಷ್ಮೀ**

ನಾಲ್ಕು ತೋಳುಗಳಿದ್ದು ಮುಂದಿನ ಹಸ್ತಗಳಲ್ಲಿ ವರದ - ಅಭಯ ಮುದ್ರೆಗಳು, ಮೇಲಿನ ಹಸ್ತಗಳಲ್ಲಿ ಪದ್ಮಗಳನ್ನು ಧರಿಸಿರುವ ಐಶ್ವರ್ಯ ಲಕ್ಷ್ಮಿಯ ವಾಹನ ಕುದರೆ. ಇದು ಲಕ್ಷ್ಮೀಯ ಸಾಧಾರಣ ವರ್ಣನೆ ಆದ್ದರಿಂದ ಇಲ್ಲಿ ಮತ್ತೆ ಹೇಳಿಲ್ಲ.

**(viii) ವೀರ ಲಕ್ಷ್ಮೀ**

**ಅಷ್ಟಬಾಹುಯುತಾಂ ಲಕ್ಷ್ಮೀಂ ಸಿಂಹಾಸನ ಸಂಸ್ಥಿತಾಮ್**

**ಅಭಯಂ ವರದಂ ಚೈವ ಹಸ್ತದ್ವಂದ್ವೇ ಚ ಧಾರಣೀಮ್ ||**

**ಚಕ್ರಂ ಬಾಣಂ ಚ ಶೂಲಂ ಚ ಧನುಃ ಶಂಖಂ ಕಪಾಲಮ್**

**ಸರ್ವಲಕ್ಷಣ ಸಂಪನ್ನಾಂ ಧ್ಯಾಯೇತ್ ತಪ್ತ ಕಾಂಚನ ಸನ್ನಿಭಾಮ್ ||**

ಬಂಗಾರದ ಮೈಕಾಂತಿಯಲ್ಲಿ ಎಂಟುತೋಳುಗಳೊಂದಿಗೆ ಸಕಲ ಶುಭ ಲಕ್ಷಣಗಳೊಂದಿಗೆ ಸಿಂಹಾಸನದ ಮೇಲೆ ಕುಳಿತಿರುತ್ತಾಳೆ. ಬಲಪಾರ್ಶ್ವದ ಹಸ್ತಗಳಲ್ಲಿ ಕೆಳಗಿನಿಂದ ಮೇಲಕ್ಕೆ ಕ್ರಮವಾಗಿ ಅಭಯಮುದ್ರೆ, ಶೂಲ, ಬಾಣ, ಚಕ್ರಗಳು ಅದೇ ರೀತಿಯಾಗಿ ಎಡಪಾರ್ಶ್ವದಲ್ಲಿ ಕೆಳಗಿನಿಂದ ಮೇಲಕ್ಕೆ ಕ್ರಮವಾಗಿ ವರದಮುದ್ರೆ, ಕಪಾಲ, ಧನುಸ್ಸು, ಶಂಖಗಳನ್ನು ಧರಿಸಿರುತ್ತಾಳೆ.

ಈ ರೂಪದಲ್ಲಿರುವ ವೀರಲಕ್ಷ್ಮೀದೇವಿಯನ್ನು ಧ್ಯಾನಿಸಬೇಕು.

(ಐ) ಶ್ರೀವತ್ಸ

ಶ್ರೀವತ್ಸವೆಂಬುದು ವಿಷ್ಣುವಿನ ವಕ್ಷಭಾಗದಲ್ಲಿರುವ ಒಂದು ವಿಶೇಷವಾದ ಚಿಹ್ನೆ. ಇದು ಬಲಕ್ಕೆ ಓರೆಯಾಗಿರುವ ಬಿಳಿಯ ಕೂದಲುಗಳ ಸಮೂಹ ಎಂದು ಶಾಸ್ತ್ರವು ವಿವರಿಸುತ್ತದೆ (**ವಕ್ಷಸ್ಥ ಶುಕ್ಲ ವರ್ಣ ದಕ್ಷಿಣಾವರ್ತ ರೋಮಾವಳಿ**). ಇದು ಕೌಸ್ತುಭದಿಂದ ಪ್ರತ್ಯೇಕವಾದುದು.



ಚಿತ್ರ ೧೨೩ : ಶ್ರೀವತ್ಸ

ಕೌಸ್ತುಭವು ಕ್ಷೀರಸಾಗರ ಮಥನದಲ್ಲಿ ಉದ್ಭವವಾಗಿ ಬಂದ ಒಂದು ವಜ್ರ ಆಭರಣ. ಆದ್ದರಿಂದ ಕೌಸ್ತುಭವು ವಿಷ್ಣುವು ಧರಿಸಿರುವ ಆಭರಣ. ಆದರೆ ಶ್ರೀವತ್ಸ ಶ್ರೇಷ್ಠ ಪುರುಷನ ವಕ್ಷಪ್ರದೇಶದಲ್ಲಿರುವ ಒಂದು ಚಿಹ್ನೆ. ಇದು ದೇಹಕ್ಕೆ ಸೇರಿದ್ದು. ಆದ್ದರಿಂದಲೇ ಶ್ರೀವತ್ಸಾಂಕ ಎಂಬುದು ವಿಷ್ಣುವಿನ ಹೆಸರು. ಇಚ್ಛಾ ಶಕ್ತಿಯ ಮೂರುಶಕ್ತಿರೂಪಗಳು ವೀರಶಕ್ತಿ, ಭೋಗಶಕ್ತಿ, ಯೋಗಶಕ್ತಿ, ಇವುಗಳಲ್ಲಿ ಯೋಗಶಕ್ತಿಯೇ ಶ್ರೀವತ್ಸದ ರೂಪವನ್ನು ಧರಿಸಿ ಭಗವಂತನ ಬಲಭಾಗದ ವಕ್ಷದಲ್ಲಿದೆ (ಭಗವತೋ ದಕ್ಷಿಣವಕ್ಷಸ್ಥಲೇ ಶ್ರೀವತ್ಸಾಕೃತಿಭರ್ೂತ್ವಾ ವಿಶ್ರಾಮಯತಿ).

ಮೂರ್ತಿಶಿಲ್ಪದ ಪ್ರಾರಂಭಿಕಕಾಲದ ವಿಷ್ಣುಮೂರ್ತಿಗಳಲ್ಲಿ ಬಲವಕ್ಷದಲ್ಲಿ ಸಣ್ಣ ತ್ರಿಕೋಣವಾಗಿ ಇದನ್ನು ಸೂಚಿಸಲಾಗುತ್ತಿತ್ತು. ನಂತರದಲ್ಲಿ ಇದನ್ನು ಒಂದು ಆವರಣದಲ್ಲಿ ಎರಡು ತೋಳುಗಳ ಲಕ್ಷ್ಮಿಯನ್ನು ಚಿತ್ರಿಸಲು ಪ್ರಯತ್ನಿಸಲಾಯಿತು.

ಶ್ರೀವತ್ಸ ಚಿಹ್ನೆಯು ಜೈನ ತೀರ್ಥಂಕರರ ಮೂರ್ತಿಗಳಲ್ಲೂ ಕಾಣಬರುತ್ತದೆ. ಬಲಪಾರ್ಶ್ವಕ್ಕೆ ಇರುವುದಕ್ಕೆ ಬದಲಾಗಿ ವಕ್ಷದ ಮಧ್ಯಭಾಗದಲ್ಲಿ ನಾಲ್ಕುದಳಗಳ ಹೂವಿನಂತೆ ರೂಪಿಸಲಾಗುತ್ತದೆ. ಇದನ್ನು ತೀರ್ಥಂಕರರ ಧ್ವಜವೆಂದು (ಅರ್ಹತಾಂ ಧ್ವಜಃ) ಎಂದು ಹೇಳುತ್ತಾರೆ. ಬುದ್ಧವಿಗ್ರಹಗಳಲ್ಲೂ ಈ ಗುರ್ತುಗಳು ಕಾಣಸಿಗುತ್ತವೆ.

## ೨. ಭೂ ದೇವಿ

ಭೂ ಅಥವ ಭೂಮಿ ದೇವಿ ಎಂದರೆ ಭೂಮಿಯೇ. ವಿಷ್ಣುವಿನ ಹೆಂಡತಿಯಾಗಿ ಈಕೆಯನ್ನು ಹೇಳಲು ಮೂಲಕಾರಣ ವರಾಹ ಅವತಾರದಲ್ಲಿ ವಿಷ್ಣು ಭೂಮಿಯನ್ನು ಉದ್ಧರಿಸಿದ ಎಂಬುದೇ. ಭೂದೇವಿಯು ತೆಳು ಹಸಿರು ವರ್ಣದ ಮೈಕಾಂತಿಯಿರುವಂತೆ ಹೇಳಲ್ಪಟ್ಟಿದ್ದಾಳೆ. ಈಕೆಗೆ ಸಂಬಂಧಿಸಿದಂತೆ ಕೆಲವು ಧ್ಯಾನ್ಯ ಶ್ಲೋಕಗಳನ್ನು ಪರಿಶೀಲಿಸೋಣ.

(ಅ) **ಸಸ್ಯಾಂಕುರ ನಿಭಾ ಭೂಮಿಃ ನೀಲಾಲಕ ಸಮನ್ವಿತಾ ||**

**ಕರಂಡ ಮಕುಟೋಪೇತಾಃ ಸರ್ವಾಭರಣ ಭೂಷಿತಾ**

**ಪೀತಾಂಬರ ಧರಾ ಚೈವ ಪ್ರಸನ್ನ ವದನಾನ್ವಿತಾ ||**

**ಪದ್ಮಂ ವಾಪ್ಯುತ್ಪಲಂ ವಾಪಿ ಉಭಯೋರ್ಹಸ್ತಯೋಧೃತಾ**

**ಪದ್ಮಪೀಠೋಪರಿಷ್ಠಾತ್ತು ಆಸೀನಾ ವಾ ಸ್ಥಿತಾಪಿವಾ ||**

(ಶ್ರೀ ಕಾಶ್ಯಪಶಿಲ್ಪ ಶಾಸ್ತ್ರಂ, ೪೮ : ೧೪೦ - ೧೪೨)

ಆಗ ತಾನೇ ಮೊಳಕೆ ಬಂದಿರುವ ಭತ್ತದ ಸಸಿಗಳಂತಹ ಹಸಿರು ಮೈಕಾಂತಿಯಿಂದ ಶೋಭಾಯಮಾನವಾಗಿರುವ ಭೂದೇವಿಯು ತನ್ನ ಎರಡು ಹಸ್ತಗಳಲ್ಲಿಯೂ ನೀಲ ತಾವರೆಗಳನ್ನು ಹಿಡಿದಿರುತ್ತಾಳೆ. ಪ್ರಸನ್ನ ವದನದ ಈಕೆಯು ಸರ್ವಾಭರಣಗಳನ್ನು ಧರಿಸಿರುತ್ತಾಳೆ. ಪೀತಾಂಬರವನ್ನು ಉಟ್ಟಿರುತ್ತಾಳೆ. ಪದ್ಮಪೀಠದ ಮೇಲೆ ಕುಳಿತಿರುವಂತೆ ಅಥವ ನಿಂತಿರುವಂತೆ ಈಕೆಯನ್ನು ರೂಪಿಸಬೇಕು.

(ಆ) ಶ್ಯಾಮ ವರ್ಣನಿಭಾ ಭಾಸ್ವದ್ರಾಜೀವ ಸಮಲೋಚನಾ
ಹೇಮಯಜ್ಞೋಪವೀತಾ ಚ ದ್ವಿಭುಜಾ ಚ ದ್ವಿನೇತ್ರಕಾ ||
ಸರ್ವಾಭರಣ ಸಂಯುಕ್ತಾ ಕರಂಡ ಮಕುಟಾನ್ವಿತಾ
ರಕ್ತಾಂಬರಧರಾ ಚೈವ ದಕ್ಷಹಸ್ತೋತ್ಪಲಾನ್ವಿತಾ ||
ಧರಣ್ಯಾಕೃತಿರೇವಂ ಸ್ಯಾಚ್ಛ್ರೀಸ್ತ್ವಾಯಾಕೃತಿರುಚ್ಯತೇ

(ಪೂರ್ವಕಾರಣಾಗಮ, ೧೨)

ಶ್ಯಾಮವರ್ಣದಲ್ಲಿರುವ ಈ ದೇವಿಯು ಎರಡು ತೋಳು, ಎರಡು ಕಣ್ಣು, ಒಂದು ತಲೆ ಪಡೆದಿದ್ದು ಸಕಲ ಆಭರಣಗಳನ್ನೂ ಧರಿಸಿರುತ್ತಾಳೆ. ಕರಂಡ ಮುಕುಟವನ್ನು ಕೆಂಪು (ರಕ್ತ) ವಸ್ತ್ರಗಳನ್ನು ಧರಿಸಿದ್ದು ತಾವರೆಗಳನ್ನು ಹಿಡಿದಿರುತ್ತಾಳೆ. ಸ್ವರ್ಣ ಯಜ್ಞೋಪವೀತವನ್ನು ಧರಿಸಿರುತ್ತಾಳೆ.

(ಇ) ಶುಕ್ಲವರ್ಣಾ ಮಹೀ ಕಾರ್ಯಾ ದಿವ್ಯಾಭರಣ ಭೂಷಿತಾ
ಚತುರ್ಭುಜಾ ಸೌಮ್ಯವಪುಶ್ಚಂದ್ರಾಂಶು ಸದೃಶಾಂಬರಾ ||
ರತ್ನ ಪಾತ್ರಂ ಸಸ್ಯಪಾತ್ರಂ ಪಾತ್ರ ಮೋಷದಿ ಸಂಯುತಮ್
ಪದ್ಮಂ ಕರೇ ಚ ಕರ್ತವ್ಯಂ ಭುವೋ ಯಾದವ ನಂದನ ||
ದಿಗ್ಗಜಾನಾಂ ಚತುರ್ಣಾಂ ಚ ಕಾರ್ಯಾ ಪೃಷ್ಠಗತಾ ತಥಾ
ಸರ್ವೌಷಧಿಯುತಾ ದೇವೀ ಶುಕ್ಲವರ್ಣಾ ತತಃಸ್ಮೃತಾ ||

(ವಿಷ್ಣುಧರ್ಮೋತ್ತರ ಪುರಾಣ)

ಬಿಳುಪಾದ ಮೈಕಾಂತಿಯಲ್ಲಿರುವ ಈಕೆಯು ಸಕಲ ದಿವ್ಯಾಭರಣಗಳನ್ನು ಧರಿಸಿರುತ್ತಾಳೆ. ನಾಲ್ಕು ಹಸ್ತಗಳನ್ನು ಪಡೆದಿದ್ದು ಸೌಮ್ಯ ಮುಖಕಾಂತಿಯಲ್ಲಿರುತ್ತಾಳೆ. ತಿಂಗಳ ಬೆಳಕಿನಂತಹ ವಸ್ತ್ರಗಳನ್ನು ಧರಿಸಿರುತ್ತಾಳೆ. ನಾಲ್ಕು ಹಸ್ತಗಳಲ್ಲಿ ರತ್ನಪಾತ್ರೆ, ಸಸ್ಯಪಾತ್ರೆ, ಓಷಧಿ (ಮೂಲಿಕೆಗಳು) ಪಾತ್ರೆ ಮತ್ತು ಕಮಲವನ್ನು ಹಿಡಿದಿರುತ್ತಾಳೆ. ಈಕೆಯು ಅಷ್ಟದಿಗ್ಗಜಗಳ ಪೀಠದ ಮೇಲೆ ಕುಳಿತಿರಬೇಕು.

ಇದು ಸ್ಪಷ್ಟವಾಗಿ ಸ್ವಯಂ ಪ್ರಧಾನ ದೇವಿಯ ವರ್ಣನೆ .

(ಈ) ದೇವಸ್ಯ ದಕ್ಷಿಣೇ ಪಾರ್ಶ್ವೇ ಲಕ್ಷ್ಮೀಂ ವಾಮೇ ವಸುಂಧರಾಮ್
ಆಸೀನೇ ಕಲ್ಪಯೇದ್ದೇವ್ಯೌ ಆಸೀನಸ್ಯ ದ್ವಿಜೋತ್ತಮ ||
ಬಿಂಬಷಟ್ಕಸ್ಯ ಕರ್ಮಾದೇಃ ಶ್ರೀಭೂಮಿ ಪಾರ್ಶ್ವಗೇ ಸದಾ
ಏಕಾಸನ ಸ್ಥಿತಸ್ಯಾಗ್ರೇ ದೇವೇನ ಪೃಥಗೇವ ವಾ ||
ಲಕ್ಷ್ಮೀಂ ಸ್ಥಿತಾಂ ವಾ ಸಂಕಲ್ಪ್ಯ ವಾಮಾಂಘ್ರಿಂ ಲಂಬಯೇತ ವಾ
ಅಥಾಸೀನಾಂ ತಥಾ ಪೃಥ್ವೀಂ ಸ್ಥಿತಸ್ಯೋಭೇ ಭಿತಃ ಸ್ಥಿತೇ ||

(ವಿಶ್ವಾಮಿತ್ರ ಸಂಹಿತೆ, ೨೨ : ೫೭ - ೫೮)

ದೇವನ ಬಲಪಾರ್ಶ್ವದಲ್ಲಿ ಲಕ್ಷ್ಮೀಯ ಎಡಪಾರ್ಶ್ವದಲ್ಲಿ ಭೂದೇವಿ ಇರಬೇಕು. ಸ್ವಾಮಿ ಕುಳಿತಿದ್ದರೆ ದೇವಿಯರೂ ಕುಳಿತಿರಬಹುದು. ಆರು ಬಿಂಬಗಳಲ್ಲಿ ಕರ್ಮ ಬಿಂಬವನ್ನು ನಿರ್ಮಿಸುವಾಗ ಲಕ್ಷ್ಮೀ ಭೂಮಿ ದೇವಿಯರು ಸದಾ ಪಾರ್ಶ್ವಗಳಲ್ಲಿಯೇ ಇರಬೇಕು. ದೇವನ ಬಿಂಬವೇ ಪ್ರತ್ಯೇಕವಾಗಿದ್ದರೆ ದೇವಿಗಳ ಮೂರ್ತಿಗಳೂ ಪ್ರತ್ಯೇಕವಾಗಿರಬೇಕು. ಬಲಕ್ಕೆ ಲಕ್ಷ್ಮೀ ನಿಂತಿರುವಾಗ ಆಕೆಯ ಎಡಕಾಲು ಚಾಚಿ ತ್ರಿಭಂಗಿಯಲ್ಲಿರಬೇಕು. ಭೂದೇವಿ ಬಲಗಾಲುಚಾಚಿ

ತ್ರಿಭಂಗಿಯಲ್ಲಿರಬೇಕು. ಇಬ್ಬರೂ ಕುಳಿತಿರುವಾಗಲು ಪರಸ್ಪರ ಹೊಂದಾಣಿಕೆಯಲ್ಲಿರಬೇಕು. ಈಕೆಯು ಪದ್ಮಾಸನದಲ್ಲಿ ಕುಳಿತಿದ್ದು ಬದ್ಧಾಂಜಲಿಯಲ್ಲಿರಬಹುದು **(ಪದ್ಮಾಸನೇನೋಪವಿಷ್ಟಾಂ ಧ್ಯಾಯೇದ್ಬದ್ಧಾಂಜಲಿಂ ಧರಾಂ ಪೌಷ್ಕರ ಸಂಹಿತೆ, ೨೪ : ೨೮)**

**(ಉ) ಶ್ರೀರ್ದಕ್ಷಿಣೇ ಧರಾ ವಾಮೇ ದೇವಸ್ಯ ಪರಿಕಲ್ಪಯೇತ್**
**ಕರ್ಮಾರ್ಚಾ ತು ಸದಾ ತಾಭ್ಯಾಂ ಪಾರ್ಶ್ವಯೋರವಿನಾಭವೇತ್ ||**
**ಶ್ರೀರೇಷಾಂ ತು ಬಿಂಬಾನಾಂ ಸಹಿತಾ ರಹಿತಾ ತು ವಾ**
**ಪತ್ನ್ಯೌ ಪ್ರಭಾ ವಾಪ್ಯೇಕಸ್ಮಿನ್ ವಿಷ್ಟರೇ ಪೃಥಗೇವ ವಾ ||**
**ದೇವೇ ಸ್ಥಿತೇ ತಥಾ ದೇವ್ಯಾವಾಸೀನಸ್ಯಾಪಿ ತೇ ತಥಾ**
**ಬಿಂಬೇ ಯಾನಾಧಿರೂಢೇ ತು ಕರ್ತವ್ಯಾ ತೋರಣ ಪ್ರಭಾ ||**

(ಶ್ರೀ ಪ್ರಶ್ನಸಂಹಿತೆ, ೧೪ : ೨೧ - ೨೩)

ದೇವನ ಬಲ ಪಾರ್ಶ್ವದಲ್ಲಿ ಲಕ್ಷ್ಮೀ, ಎಡಪಾರ್ಶ್ವದಲ್ಲಿ ಭೂದೇವಿ ಇರುವಂತೆ ರೂಪಿಸಬೇಕು. ಕರ್ಮಾರ್ಚ ಬಿಂಬಗಳಾಗಿದ್ದಾಗ ದೇವಿಯರು ಪರಸ್ಪರ ಅವಿನಾಭಾವ ಸಂಬಂಧ ಇರುವಂತೆ ರೂಪುಗೊಳ್ಳಬೇಕು. ದೇವನೊಂದಿಗೆ ಶ್ರೀದೇವಿ ಇಲ್ಲದಿದ್ದರೂ ಭೂದೇವಿಯನ್ನು ರೂಪಿಸಬಹುದು. ಆದರೆ ಆಗಲೂ ಆಕೆ ಎಡಗಡೆಗೆ ಇರಬೇಕು. ದೇವನ ಇನ್ನೊಬ್ಬ ಪತ್ನಿಯಾದ ನೀಲಾದೇವಿಯೊಂದಿಗೆ ಭೂದೇವಿಯನ್ನು ರೂಪಿಸಬಹುದು. ದೇವನು ಕುಳಿತಿದ್ದಾಗಲೂ ದೇವಿಯರು ನಿಂತಿರುವಂತೆ ರೂಪಿತವಾಗಬೇಕು. ಯನಾದಿಬಿಂಬಗಳಲ್ಲೂ ದೇವಿಯರನ್ನು ರೂಪಿಸಬಹುದು.

**(ಊ) ಸ್ವರ್ಣವರ್ಣಾ ದ್ವಿಹಸ್ತಾ ಚ ದಕ್ಷಿಣೇ ನಾಭಯಪ್ರದಾ**
**ದಾಡಿಮೀ ಫಲ ಸಂಯುಕ್ತಾ ವಾಮೇ ಕಲ್ಪತರೋರಧಃ ||**
**ವಾಮಪಾದೇನ ಸಂಸ್ಪೃಷ್ಟಾ ನಿಧಿ ಕುಂಭಾಧರಾ ಮತಾ**
**ಸರ್ವಾಲಂಕಾರ ಭೂಷಾಢ್ಯಾ ಧ್ಯೇಯಾ ಸರ್ವ ಫಲ ಪ್ರದಾ ||**

(ಪಾಂಚರಾತ್ರಾಗಮ)

ಬಂಗಾರದ ಮೈ ಬಣ್ಣದಲ್ಲಿ, ಎರಡು ತೋಳುಗಳೊಂದಿಗೆ ಪುಷ್ಟವಾದ ಸಕಲಾವಯವಗಳನ್ನೂ ಹೊಂದಿದ್ದು ಬಗೆ ಬಗೆಯ ಆಭರಣಗಳಿಂದ ಅಲಂಕೃತಳಾಗಿರುವ ಭೂದೇವಿಯು ಕಲ್ಪವೃಕ್ಷದ ಕೆಳಗೆ ಮಂಡಿಸಿರುತ್ತಾಳೆ. ಆಕೆಯ ಎಡಗಾಲು ನಿಧಿ ಕುಂಭದ ಮೇಲಿರುತ್ತದೆ. ದೇವಿಯು ತನ್ನ ಬಲಹಸ್ತದಲ್ಲಿ ಅಭಯ ಮುದ್ರೆ ಎಡಹಸ್ತದಲ್ಲಿ ದಾಳಿಂಬೆ ಹಣ್ಣು ಧರಿಸಿರುತ್ತಾಳೆ. ಇಂತಹ ಭೂದೇವಿಯನ್ನು ಪ್ರಾರ್ಥಿಸಿದ ಭಕ್ತರಿಗೆ ಸಕಲ ಫಲಗಳನ್ನು ದಯಪಾಲಿಸುತ್ತಾಳೆ.

## ೩. ನೀಲಾ ದೇವಿ

(ಅ) ತುಲಸೀ ರೂಪದಲ್ಲಿರುವ ಈಕೆಯು ವಿಷ್ಣು ಪತ್ನಿ. ಈಕೆಯನ್ನು ವಿಷ್ಣುವಿನೊಂದಿಗೆ ಪತ್ನಿರೂಪದಲ್ಲಿ ರೂಪಿಸುತ್ತರೆ (**ಶ್ರೀಮಚ್ಛ್ಯೇ ತುಲಸೀರೂಪಾಂ ವಿಷ್ಣುಪತ್ನೀಂ ಹರಿಪ್ರಿಯಾಂ| ಸರ್ವಾಭರಣ ಸಂಯುಕ್ತಾಂ ನೀಲಾದೇವೀಮಹಂ ಭಜೇ ||** ಪರಾಶರಸಂಹಿತೆ, ೧೮ : ೪೮).



ಚಿತ್ರ ೧೨೪ : ಶ್ರೀದೇವಿ



ಚಿತ್ರ ೧೨೫ : ಭೂದೇವಿ - ೧



ಚಿತ್ರ ೧೨೬ : ಭೂದೇವಿ - ೨

**ನೀಲಾ ನೀರದವರ್ಣಾಭಾ: ಪ್ರಸನ್ನ ವದನೇಕ್ಷಣಾ:**

**ಪೀತಾಂಬರಧರಾ: ಸರ್ವಾ: ಸ್ರಗ್ವಿ: ಕನಕಕುಂಡಲಾ: ||**

**ಸಿತಚಾಮರಹಸ್ತಾಶ್ಚ ಚಿತ್ರವೇತ್ರಲತಾಕರಾ:**

**ನಿರೀಕ್ಷಮಾಣಾ ವದನಂ ಜಯಾಯಾ ಅಚ್ಯುತಸ್ಯ ಚ ||** (ಲಕ್ಷ್ಮೀತಂತ್ರ ೪೫ : ೬೮ - ೬೯)

ಶ್ಯಾಮಲವರ್ಣದ ಮೈಕಾಂತಿಯ ನೀಲಾದೇವಿಯು ಪ್ರಸನ್ನ ವದನಳಾಗಿದ್ದು ಪೀತಾಂಬರವನ್ನು ಸಕಲಾಭರಣಗಳನ್ನು ಧರಿಸಿದ್ದು ಚಾಮರ ಅಥವ ಲತೆಯನ್ನು ಹಿಡಿದಿರುತ್ತಾಳೆ.

ಈಕೆಗೆ ಎರಡು ಭುಜಗಳು. ಸೌಮ್ಯ ಭಾವದಿಂದಿರುತ್ತಾಳೆ **(ದ್ವಿಭುಜಾ: ಸೌಮ್ಯದರ್ಶನಾ).**

**(ಆ) ನೀಲೋತ್ಪಲದಳಶ್ಯಾಮಾ ನೀಲವಸ್ತ್ರ ವಿಭೂಷಿತಾ**

**ಚತುರ್ಭುಜಾ ಸುಖಾಸೀನಾ ವರಾಭಯ ಕರಾನ್ವಿತಾ ||**

**ಇತರಾಭ್ಯಾಂ ತು ಹಸ್ತಾಭ್ಯಾಂ ಕುಮುದದ್ವಯಧಾರಿಣೀ**

**ಸರ್ವಾಭರಣ ಸಂಯುಕ್ತಾ ನೀಲಾದೇವಿ ಸಮೀರಿತಾ ||**

(ಪಾಂಚರಾತ್ರಾಗಮ)

ನೀಲಾದೇವಿಯು ನೈದಿಲೆಯಂತೆ ಶ್ಯಾಮಲವರ್ಣದ ಮೈಕಾಂತಿಯಲ್ಲಿ ಕಪ್ಪು ವಸ್ತ್ರಗಳನ್ನುಧರಿಸಿದ್ದು ಸಕಲಾವಯವಗಳನ್ನು ಅಲಂಕರಿಸಿರುವ ಆಭರಣಗಳಿಂದ ಬಹು ಸುಂದರವಾಗಿ ಕಾಣಿಸುತ್ತಿರುತ್ತಾಳೆ. ಈಕೆಗೆ ನಾಲ್ಕು ತೋಳುಗಳು. ಸುಖಾಸನದಲ್ಲಿ ಮಂಡಿಸಿರುತ್ತಾಳೆ. ಮುಂದಿನ ಹಸ್ತಗಳಲ್ಲಿ ಬಲದಲ್ಲಿ ಅಭಯ ಮುದ್ರೆಯನ್ನು ಎಡದಲ್ಲಿ ವರದ ಮುದ್ರೆಯನ್ನು ಧರಿಸಿರುತ್ತಾಳೆ. ಮೇಲಿನ ಹಸ್ತಗಳಲ್ಲಿ ಉತ್ಪಲವನ್ನು ಧರಿಸಿರುತ್ತಾಳೆ.

## ೪. ಅಷ್ಟ ದೇವೀ ಮೂರ್ತಿಗಳು

ಈ ದೇವಿಯರು ವೈಷ್ಣವ ಶಕ್ತಿಗಳು. ಇವರೆಲ್ಲರೂ ಶ್ರೀವತ್ಸ ಮತ್ತು ಕೌಸ್ತುಭಗಳನ್ನು ಧರಿಸಿರುತ್ತಾರೆ. ಇವರನ್ನು ಸಾಧಾರಣವಾಗಿ ಒಂದೇ ಗುಂಪಿನಲ್ಲಿ ರೂಪಿಸುತ್ತಾರೆ. ಪ್ರತ್ಯೇಕವಾಗಿ ರೂಪಿಸಿರುವ ಉದಾಹರಣೆಗಳೂ ದೊರೆಯುತ್ತವೆ. ಎಂಟು ಮಂದಿಯನ್ನು ಹೀಗೆ ಹೆಸರಿಸುತ್ತಾರೆ:

**ಅಷ್ಟೌ ವಕ್ಷ್ಯೇ ಪರಾ ಮೂರ್ತಿಸ್ತಾಸು ಬ್ರಾಹ್ಮೀ ಪ್ರಶಸ್ಯತೇ**

**ಪ್ರಾಜಾಪತ್ಯಾ ದ್ವಿತೀಯಾ ತು ತೃತೀಯಾ ವೈಷ್ಣವೀ ಮತಾ**

**ದೈವೀ ಚತುರ್ಥೀ ತದನು ಮೂರ್ತಿರಾರ್ಷೀ ಚತುರ್ಮುಖಿ ||**

**ಷಷ್ಠೀ ತು ಮಾನುಷೀ ಜ್ಞೇಯಾ ಸಪ್ತಮೀ ಮೂರ್ತಿರಾಸುರೀ**

**ಪೈಶಾಚೀ ಮೂರ್ತಿರನ್ಯಾ ಸ್ಯಾತ್ ತಾಸಾಂ ಲಕ್ಷಣಮುಚ್ಯತೇ ||**

(ಪಾದ್ಮಸಂಹಿತೆ, ಕ್ರಿ ೧೬ : ೪೭ - ೪೯)

ಅಷ್ಟ ದೇವೀಮೂರ್ತಿಗಳು (ಅ) ಬ್ರಾಹ್ಮೀ (ಆ) ಪ್ರಾಜಾಪತ್ಯಾ (ಇ) ವೈಷ್ಣವೀ (ಈ) ದೈವೀ (ಉ) ಆರ್ಷೀ (ಊ) ಮಾನುಷೀ (ಋ) ಆಸುರೀ (ೠ) ಪೈಶಾಚೀ. ಇವರ ಲಕ್ಷಣಗಳನ್ನು ಮುಂದೆ ವಿವರಿಸಲಾಗಿದೆ.



ಚಿತ್ರ ೧೨೭ : ನೀಲಾದೇವಿ

(೮) ಬ್ರಾಹ್ಮೀ

**ಪ್ರಥಮಾತಿ ಷ್ಟಭುಜಾ ತಪ್ತ ತಪನೀಯ ಸಮುದ್ಯುತಿಃ**
**ಭುಜೇಷು ಮುಖ್ಯೋ ವರದೋ ದಕ್ಷಿಣೇಷ್ವಿತರೇ ತ್ರಯಃ ||**
**ಚಕ್ರಾಸಿ ಬಾಣೈಃ ಸಂಯುಕ್ತೋ ವಾಮೇ ಹಸ್ತ ಚತುಷ್ಟಯೇ**
**ಶಂಖಂ ಗದಾಂ ತಥಾ ಚರ್ಮ ಶಾರ್ಙ್ಗ ಕುರ್ಯಾತ್ ಚತುರ್ಮುಖ ||**
**ಪೀತಾಂಬರ ಧರೋ ದೇವಃ ವನಮಾಲಾ ವಿಭೂಷಿತಃ**
**ಮರೀಚಿನಾ ಚ ಭೃಗುಣಾ ಪೂಜಿತಶ್ಚ ಮಹರ್ಷಿಣಾ ||**

(ಪಾದ್ಮಸಂಹಿತೆ, ಕ್ರಿ ೧೬ : ೫೦ - ೫೨)

ಕಾದಕೆಂಡದಂತಹ ಮೈಕಾಂತಿಯೊಂದಿಗೆ, ಎಂಟು ತೋಳುಗಳುಳ್ಳ, ಪೀತಾಂಬರ ಮತ್ತು ವನಮಾಲೆಗಳಿಂದ ಅಲಂಕೃತಳಾಗಿದ್ದು ಸರ್ವಾಭರಣ ಭೂಷಿತಳಾಗಿರುವ ದೇವಿಯು ನಾಲ್ಕು ಮುಖಗಳನ್ನು ಪಡೆದಿರುತ್ತಾಳೆ. ಬಲ ಪಾರ್ಶ್ವದ ಹಸ್ತಗಳಲ್ಲಿ ಕೆಳಗಿನಿಂದ ಮೇಲಕ್ಕೆ ಕ್ರಮವಾಗಿ ಗದೆ, ಶಂಖ, ಖೇಟಕ, ಶಾರ್ಙ್ಗ (ಧನುಸ್ಸು) ಇರುತ್ತವೆ. ಎಡ ಪಾರ್ಶ್ವದ ಹಸ್ತಗಳಲ್ಲಿ ಕೆಳಗಿನಿಂದ ಮೇಲಕ್ಕೆ ಕ್ರಮವಾಗಿ ವರದ, ಚಕ್ರ, ಖಡ್ಗ, ಬಾಣ ಇರುತ್ತವೆ.

ಈ ದೇವಿಯನ್ನು ಭೃಗು, ಮರೀಚಿ ಮುಂತಾದ ಮಹರ್ಷಿಗಳು ಪೂಜಿಸುತ್ತಿರುತ್ತಾರೆ.

**ದ್ವಿ ಭುಜಾ ತು ಚತುರ್ವಕ್ತ್ರಾ ವೇಧಸೋ ರೂಪಧಾರಿಣೀ ||**
**ಹಂಸಾರೂಢಾ ಚ ಪದ್ಮಸ್ಥಾ ಸರ್ವಾಭರಣ ಭೂಷಿತಾ**
**ತಸ್ಯಾ ದಕ್ಷಿಣ ಹಸ್ತೇ ತು ಪ್ರದಾತವ್ಯಾ ಗಳಂತಿಕಾ ||**
**ಕುಂಡಿಕಾ ವಾಮ ಹಸ್ತೇ ತು ಯೋಗಪಟ್ಟೇನ ವೇಷ್ಟಿತಾ**

(ಹಯಶೀರ್ಷ ಸಂಹಿತೆ, ಆದಿ ೨೪ : ೨ - ೪)

ನಾಲ್ಕು ಮುಖಗಳಿದ್ದು ಎರಡೇ ತೋಳುಗಳಿರುವ ಈ ದೇವಿಯು ಬಿಳುಪಾಗಿರುತ್ತಾಳೆ. ಹಂಸವನ್ನು ವಾಹನವನ್ನಾಗಿ ಪಡೆದಿರುವ ಈಕೆಯು ಸರ್ವಾಭರಣ ಭೂಷಿತೆಯಾಗಿ ಪದ್ಮದಲ್ಲಿ ಕುಳಿತಿರುತ್ತಾಳೆ. ಈಕೆಯ ಬಲಹಸ್ತದಲ್ಲಿ ಗರಿಕೆ ಹುಲ್ಲು ಇರುತ್ತದೆ. ಎಡಹಸ್ತದಲ್ಲಿ ಕುಂಭವಿರುತ್ತದೆ. ಬದ್ಧ ಪದ್ಮಾಸನದಲ್ಲಿರುವ ಈಕೆಯು ಯೋಗಪಟ್ಟವನ್ನು ಧರಿಸಿರುತ್ತಾಳೆ.

(೯) ಪ್ರಾಜಾಪತ್ಯ

**ಶಂಖ ಕುಂದೇಂದು ವರ್ಣಾಭಃ ಪೀತವಾಸಾಶ್ಚತುರ್ಭುಜಃ**
**ಶಂಖ ಚಕ್ರಗದಾಪಾಣಿರಭಯೇನ ವಿರಾಜಿತಃ ||**
**ವನಮಾಲಾಧರಃ ಸೌಮ್ಯಃ ಸನಕೇನ ಸುಪೂಜಿತಃ**
**ಸನತ್ಕುಮಾರೇಣ ತಥಾ ಮೂರ್ತಿರೇಷಾ ಪ್ರಜಾಪತೇಃ ||**

(ಪಾದ್ಮಸಂಹಿತೆ, ಕ್ರಿ ೧೬ : ೫೩ - ೫೪)

ಶಂಖ ಅಥವ ಮಲ್ಲಿಗೆಯಂತಹ ಬಿಳುಪಾದ ಮೈಕಾಂತಿಯನ್ನು ಪಡೆದಿರುವ ಈ ದೇವಿಯು ನಾಲ್ಕು ತೋಳುಗಳನ್ನು ಪಡೆದಿದ್ದು ಹಳದಿಯ ವಸ್ತ್ರಗಳನ್ನು ಧರಿಸಿರುತ್ತಾಳೆ. ವನಮಾಲಾದಿಗಳಿಂದಲೂ, ಸಕಲ ಆಭರಣ, ವಸ್ತ್ರಗಳಿಂದಲೂ ಅಲಂಕೃತಗೊಂಡಿರುತ್ತಾಳೆ. ಈಕೆಯು ಬಲಮುಂಗೈಯಲ್ಲಿ ಅಭಯ, ಎಡಗೈಯಲ್ಲಿ ಗದೆಯನ್ನು ಹಿಡಿದಿರುತ್ತಾಳೆ. ಮೇಲಿನ

ಹಸ್ತಗಳಲ್ಲಿ ಚಕ್ರ ಮತ್ತು ಶಂಖಗಳು ಇರುತ್ತವೆ. ಸೌಮ್ಯ ಮೂರ್ತಿಯಾಗಿರುವ ಪ್ರಾಜಾಪತ್ಯ ದೇವಿಯನ್ನು ಸನಕ ಮತ್ತು ಸನತ್ಕುಮಾರಾದಿಗಳು ಪೂಜಿಸುತ್ತಿರುತ್ತಾರೆ.

**(ಇ) ವೈಷ್ಣವೀ**

**ನವಯವ್ವನ ಸಂಯುಕ್ತಾ ಭೂಷಿತಾ ಚತುರ್ಲೋಚನೈಃ ||**
**ಚತುರ್ಭುಜಾ ವೈಷ್ಣವೀ ಸ್ಯಾತ್ ಶಂಖಚಕ್ರಗದಾಂಬುಜಾ**
**ಪಕ್ಷಿರಾಜ ಸಮಾರೂಢಾ ಸರ್ವಾಭರಣ ಭೂಷಿತಾ ||**

(ಹಯಶೀರ್ಷ ಸಂಹಿತೆ, ಆದಿ ೨೪ : ೬ - ೭)

ನವಯವ್ವನದ ಮೈಕಟ್ಟನಲ್ಲಿ ಎಲ್ಲಾ ಆಭರಣಾಗಳಿಂದಲೂ ಅಲಂಕೃತವಾಗಿರುವ ನಾಲ್ಕು ತೋಳುಗಳಿರುವ ಈ ದೇವಿಯು ಶಂಖ - ಚಕ್ರ - ಗದೆ - ಪದ್ಮಗಳನ್ನು ಧರಿಸಿದ್ದು ಗರುಡನಮೇಲೆ ಕುಳಿತಿರುತ್ತಾಳೆ. ಈಕೆಗೆ ಮೂರುಕಣ್ಣುಗಳು.

**ಭಿನ್ನಾಂಜನಚಯಃ ಸೌಮ್ಯಃ ಶಂಖಚಕ್ರಗದಾ ಧರಃ**
**ಪೀತಾಂಬರ ಧರೋ ದೇವೋ ವನಮಾಲಾ ವಿಭೂಷಿತಃ ||**
**ವರದೋ ದಕ್ಷಿಣೋ ಹಸ್ತಃ ಸ್ವಾಗತಾಭಯದೋಽಪಿ ವಾ**
**ವಾಮೇನ ಸ್ಪೃಶ್ಯ ಕಟಿಭೂಃ ಶ್ರೀ ಭೂಮಿಭ್ಯಾಂ ಸಹ ಸ್ಥಿತಃ ||**
**ನಾರದೇನಾಪಿ ಭೃಗುಣಾ ವೈಷ್ಣವೀ ಮೂರ್ತಿರರ್ಚಿತಾ**

(ಪಾದ್ಮಸಂಹಿತೆ, ಕ್ರಿ ೧೬ : ೫೫ - ೫೭)

ಸೌಮ್ಯರೂಪಿಯಾಗಿರುವ ವೈಷ್ಣವಿದೇವೀಯು ಪೀತಾಂಬರವನ್ನು ಧರಿಸಿರುತ್ತಾಳೆ. ವನಮಾಲೆಯನ್ನು ಇತರ ಆಭರಣಾಗಳನ್ನು ಧರಿಸಿರುತ್ತಾಳೆ. ನಾಲ್ಕು ತೋಳುಗಳಿರುವ ಈಕೆಯು ಶಂಖ - ಚಕ್ರ - ಗದೆಗಳನ್ನು ಧರಿಸಿದ್ದು ಬಲ ಪಾರ್ಶ್ವದ ಮುಂದಿನ ಹಸ್ತದಲ್ಲಿ ಸ್ವಾಗತಮುದ್ರೆ ಅಥವ ಅಭಯ ಅಥವ ವರದಮುದ್ರೆಯನ್ನು ಧರಿಸಿರುತ್ತಾಳೆ. ಈಕೆಯ ಕಟಿಯನ್ನು ಹಿಡಿದು ಶ್ರೀದೇವಿ ಮತ್ತು ಭೂದೇವಿಯರು ನಿಂತಿರುತ್ತಾರೆ. ನಾರದ ಮತ್ತು ಭೃಗುಗಳು ಈ ದೇವಿಯನ್ನು ಪೂಜಿಸುತ್ತಿರುತ್ತಾರೆ.

**(ಈ) ಧ್ರುವೀ**

**ಶಂಖ ಚಕ್ರಗದಾ ಪದ್ಮಂ ಧಾರಯಂತಂ ಚತುರ್ಭುಜಮ್ ||**
**ಶ್ಯಾಮಲಂ ಪೀತವಸನಂ ವನಮಾಲಾಭೂಷಿತಮ್**
**ಅರ್ಚಿತಂ ಬ್ರಹ್ಮರುದ್ರಾಭ್ಯಾಂ ಧ್ರುವೀ ಮೂರ್ತಿರಸೌ ಭವೇತ್ ||**

(ಪಾದಸಂಹಿತೆ, ಕ್ರಿ ೧೬ : ೫೭ - ೫೮)

ಶ್ಯಾಮಲ ವರ್ಣದಲ್ಲಿದ್ದು, ಹಳದಿ ವಸ್ತ್ರಗಳನ್ನು ಉಟ್ಟು ಎಲ್ಲಾ ಆಭರಣಾಗಳು ಮತ್ತು ವನಮಾಲೆಯನ್ನು ತೊಟ್ಟು ನಾಲ್ಕು ತೋಳಿರುವ ಈಕೆಯು ಶಂಖ - ಚಕ್ರ - ಗದಾ - ಪದ್ಮಗಳನ್ನು ಧರಿಸಿರುತ್ತಾಳೆ. ಈ ದೇವಿಯನ್ನು ಬ್ರಹ್ಮ - ರುದ್ರರು ಅರ್ಚಿಸುತ್ತಿರುತ್ತಾರೆ.

**(ಉ) ಅರ್ಚೀ**

**ಶುದ್ಧಸ್ಫಟಿಕಸಂಕಾಶಾ ಪೀತವಸ್ತ್ರಾ ಚತುರ್ಭುಜಾ**
**ದಕ್ಷಿಣೇ ಜ್ಞಾನಮುದ್ರಾ ಚ ಶಂಖಚಕ್ರಗದಾಧರಾ ||**

ಶ್ರೀವತ್ಸಾಂಕಾ ಪ್ರಸನ್ನಾಸ್ಯಾ ವನಮಾಲಾವಿಭೂಷಿತಾ
ಸನಂದ ಸನಕಾಭ್ಯಾಂ ಚ ಪೂಜಿತಾ ಮೂರ್ತಿರಾರ್ಯಕೀ ॥

(ಪಾದ್ಮಸಂಹಿತೆ, ಕ್ರಿ ೧೬ : ೫೯ - ೬೦)

ಸ್ಫಟಿಕದ ಮೈಕಾಂತಿಯಲ್ಲಿ, ಹಳದಿ ವಸ್ತ್ರವನ್ನು ಧರಿಸಿದ್ದು ನಾಲ್ಕು ತೋಳುಗಳನ್ನು ಪಡೆದಿರುವ ಪ್ರಸನ್ನ ವದನಳಾಗಿರುವ ಆರ್ಯಾ ದೇವಿಯು ಬಲಹಸ್ತದಲ್ಲಿ ಜ್ಞಾನಮುದ್ರೆಯನ್ನು ಧರಿಸಿರುತ್ತಾಳೆ. ಇನ್ನು ಉಳಿದ ಮೂರು ಹಸ್ತಗಳಲ್ಲಿ ಶಂಖ - ಚಕ್ರ - ಗದೆಗಳನ್ನು ಧರಿಸಿಯುತ್ತಾಳೆ. ಶ್ರೀವತ್ಸ ಮತ್ತು ವನಮಾಲೆಗಳಿಂದ ಅಲಂಕೃತರಾಗಿರುವ ಈ ದೇವಿಯನ್ನು ಸನಕ ಸನಂದನಾದಿಗಳು ಪೂಜಿಸುತ್ತಿರುವಂತೆ ರೂಪಿಸಬೇಕು.

(೧೬) ಮಾನುಷೀ

ಮಾನುಷೀ ಮೂರ್ತಿರಧುನಾ ಕಥ್ಯತೇ ಕಮಲಾಸನ
ಚತುರಶ್ರಾಯತೇ ಧಾಮ್ನಿ ದಿವ್ಯೇ ಭಾಗೇ ಭುಜದ್ವಯಮ್ ॥
ಶಂಖ ಚಕ್ರಧರಂ ಸೌಮ್ಯಂ ಸ್ಥಾಪಯೇನ್ಮಕುಟೋಜ್ವಲಮ್
ದೇವಸ್ಯ ದಕ್ಷಿಣೇ ಪಾರ್ಶ್ವೇ ಶ್ರೀಯಂ ದೇವೀಂ ಪರಿಕಲ್ಪಯೇತ್ ॥
ತಸ್ಯ ದಕ್ಷಿಣತೋ ಭಾಗೇ ಬಲಭದ್ರಂ ತು ಕಾರಯೇತ್
ದಕ್ಷಿಣೇ ಬಲಭದ್ರಸ್ಯ ಪ್ರದ್ಯುಮ್ನ ಮಪಿ ಕಾರಯೇತ್ ॥
ದೇವಸ್ಯ ವಾಮಪಾರ್ಶ್ವೇ ತು ಅನಿರುದ್ಧಂ ಪ್ರಕಲ್ಪಯೇತ್
ತಸ್ಯ ಪಾರ್ಶ್ವೇ ತು ವಾಮೇ ತು ಸಾಂಬಂ ಕುರ್ಯಾ ಚ್ಚತುರ್ಮುಖ ॥
ಬ್ರಹ್ಮಾಣಾಂ ದಕ್ಷಿಣೇ ಕುಡ್ಯೇ ಸವ್ಯೇ ವಿನತಾತ್ಮಜಮ್
ಸ್ಥಾನಕೇ ಸ್ಥಾನಕಾಃ ಪ್ರೋಕ್ತಾ ಆಸೀನೇಷ್ವಪಿ ತಥಾ ಭವೇತ್ ॥
ಚತುರ್ಭುಜಾ ತು ಕರ್ಮಾರ್ಥಾ ದ್ವಿಭುಜಾವಾಪಿ ಸಾ ಭವೇತ್
ಉತ್ಸವಾರ್ಥಾ ಪ್ರಕೃತಿಃ ಸರ್ವಾ ಚೈವ ಚತುರ್ಭುಜ ॥
ಮಾನುಷ್ಯಂ ವಾಸುದೇವಸ್ಯ ಪ್ರೋಕ್ತಂ ಸಂಕ್ಷೇಪತೋ ವಿಧಿಃ

(ಪಾದ್ಮಸಂಹಿತೆ, ಕ್ರಿ ೧೬ : ೬೧ - ೬೭)

ಮಾನುಷೀದೇವಿಯ ವಿಶೇಷ ಲಕ್ಷಣವು ಇಂತಿರುತ್ತದೆ. ಗರ್ಭಗುಡಿಯಲ್ಲಿ ಚತುಸ್ರಾಕಾರದ ಒಂದು ಜಗುಲಿಯನ್ನು ನಿರ್ಮಿಸಬೇಕು. ಅದರ ದಿವ್ಯ(ಬ್ರಹ್ಮ)ಭಾಗದಲ್ಲಿ ತೋಳುಗಳಿದ್ದು ಸೌಮ್ಯ ಮುಖ ಭಾವದ ಉಜ್ವಲವಾದ ಕಾಂತಿಯುತವಾದ ಮಕುಟವನ್ನು ಧರಿಸಿರುವ ಎರಡು ಶಂಖ ಚಕ್ರಧಾರಿಯಾಗಿ ದೇವಿಯು ನಿಲ್ಲಬೇಕು. ಸ್ವಾಮಿಯ ಬಲ ಭಾಗದಲ್ಲಿ ಲಕ್ಷ್ಮೀದೇವಿ ನಿಂತಿರಬೇಕು. ಆಕೆಯ ಬಲಭಾಗದಲ್ಲಿ ಬಲಭದ್ರನು ನಿಂತಿರಬೇಕು (ಈತನ ಆಯುಧಗಳ ಹಲ - ಮುಸಲ). ಬಲಭದ್ರನ ಬಲಭಾಗದಲ್ಲಿ ಪ್ರದ್ಯುಮ್ನ ಇರಬೇಕು. ಕೈಯ್ಯಲ್ಲಿ ಕತ್ತಿಹಿಡಿದು ಎಡಗೈಯನ್ನು ಕಟ್ಯಾವಲಂಬಿತಹಸ್ತವನ್ನಾಗಿ ಇರಿಸಿರಬೇಕು. ಮಾನುಷೀ ದೇವಿಯ ಎಡಭಾಗಕ್ಕೆ ಅನಿರುದ್ಧನನ್ನು ರೂಪಿಸಬೇಕು. ಈತನು ಕತ್ತಿ ಗುರಾಣಿ ಹಿಡಿದಿರಬೇಕು. ಆತನ ಎಡಕ್ಕೆ ಸಾಂಬನ ಮೂರ್ತಿಯನ್ನು ಸ್ಥಾಪಿಸಬೇಕು. ಎಡಹಸ್ತದಲ್ಲಿ ದಂಡ ಬಲಹಸ್ತದಲ್ಲಿ ಅಭಯ ವಿರಬೇಕು. ಸಾಂಬನ ಎಡಕ್ಕೆ ಗರುಡ ಇರಬೇಕು.

ಬಲಭಾಗದ ಗೋಡೆಯ ಮೇಲೆ ಬ್ರಹ್ಮನ ಚಿತ್ರವಿರಬೇಕು. ಇದನ್ನು **ಮಾನುಷೀ ವಾಸುದೇವ** ಎನ್ನುತ್ತಾರೆ.

ಮಾನುಷೀ ದೇವಿಯು ನಿಂತಿದ್ದರೆ ಎಲ್ಲಾ ಮೂರ್ತಿಗಳು ನಿಂತಿರಬೇಕು. ಕುಳಿತಿದ್ದರೆ ಎಲ್ಲಾ ಮೂರ್ತಿಗಳು ಕುಳಿತಿರಬೇಕು. ಉತ್ಸವ ಅರ್ಚಾಬಿಂಬಗಳು ಮೂಲಬೇರದಂತೆಯೇ ಇರಬೇಕು.

**(ಋ) ಆಸುರೀ**

**ಆಸುರೀ ಮೂರ್ತಿರುಚಿತಾ ಏಕವಕ್ತ್ರಾ ಚತುರ್ಭುಜಾ ॥**
**ದಂಷ್ಟ್ರಾ ಕರಾಲವದನಾ ಭ್ರುಕುಟೀ ಕುಟಿಲೇಕ್ಷಣಾ**
**ಮುಖ್ಯೇ ಕರದ್ವಯೇ ಬಾಣಂ ಧನುರೂರ್ಧ್ವೇಽರಿ ಶಂಖಕಮ್ ॥**
**ಶಾರ್ಙ್ಗ ಹಸ್ತಂ ಲಲಾಟಾಂತಮುದ್ಧರೇದ್ವಾಗ್ರ ಹಸ್ತಕಮ್**
**ನಾಭ್ಯಂತಂ ಕುಸೂತ್ರಾಂತಂ ಭಂಗತ್ರಯಾ ಸಮನ್ವಿತಮ್ ॥**

(ಪಾದ್ಮಸಂಹಿತೆ, ಕ್ರಿ ೬ : ೬೭ - ೬೯)

ಒಂದು ಮುಖವಿದ್ದು ಬಿಳುಪಾದ ಕಾಂತಿಯಿಂದ ಕಂಗೊಳಿಸುತ್ತಿರುವ ಆಸುರೀದೇವಿಗೆ ಗಂಟುಹಾಕಿದ ಹುಬ್ಬುಗಳು, ಭಯಂಕರವಾದ ಮುಖ ಮತ್ತು ಕೋರೆಗಳು ಇರುತ್ತವೆ. ಮುಂದಿನ ಹಸ್ತಗಳಲ್ಲಿ ಬಾಣ ಬಿಲ್ಲು ಹಿಡಿದಿರುತ್ತಾಳೆ. ಮೇಲಿನ ಹಸ್ತಗಳಲ್ಲಿ ಚಕ್ರ ಶಂಖಗಳು ಇರುತ್ತವೆ. ಧನುಸ್ಸು ಹಿಡಿದಿರುವ ಕೈ ಹಣೆಯಷ್ಟು ಎತ್ತರಕ್ಕೆ ಎತ್ತಿದ್ದು ದೇಹವು ತ್ರಿಭಂಗಿಯಲ್ಲಿರುತ್ತದೆ.

**(ೠ) ಪೈಶಾಚೀ**

**ಪೈಶಾಚೀ ಮೂರ್ತಿರಾದ್ಯಾ ತು ಖಡ್ಗಕೌಮೋದಕೀ ತಥಾ**
**ವರದಾಭಯಂ ಮುಖ್ಯಂ ಕಾಲವರ್ಣಾಂ ಕರದ್ವಯಮ್ ॥**
**ದಂಷ್ಟ್ರಾ ಕರಾಲ ವದನಂ ಭ್ರುಕುಟೀ ಕುಟಿಲೇಕ್ಷಣಾಮ್**

ಕಪ್ಪಾಗಿರುವ ಈ ಮೂರ್ತಿಯು ನಾಲ್ಕು ತೋಳುಪಡೆದಿದ್ದು ಮುಖ್ಯಹಸ್ತಗಳಲ್ಲಿ ವರದ ಅಭಯ ಮುದ್ರೆಗಳನ್ನು ಧರಿಸಿರುತ್ತಾಳೆ. ಮೇಲಿನ ಹಸ್ತಗಳಲ್ಲಿ ಖಡ್ಗ ಮತ್ತು ಕೌಮೋದಕೀ ಗದೆ ಹಿಡಿದಿರುತ್ತಾಳೆ. ಕೋರೆಗಳಿರುವ ಭಯಂಕರ ಮುಖ ಪಡೆದಿರುವ ಪೈಶಾಚೀದೇವಿಯು ಕೌಸ್ತುಭ, ವನಮಾಲೆ ಮತ್ತು ಇತರ ಎಲ್ಲಾ ಆಭರಣಗಳನ್ನೂ ಧರಿಸಿರುತ್ತಾಳೆ.

## ೫. ಪೂರ್ಣಾ ದೇವಿ ಮತ್ತು ಪುಷ್ಕಳಾದೇವಿ

ಪೂರ್ಣಾದೇವಿ ಮತ್ತು ಪುಷ್ಕಳಾದೇವಿಯರು ಲಕ್ಷ್ಮೀದೇವಿಯೊಂದಿಗೆ ಇದ್ದಾಗ ದೇವಿಯ ಪರಿಚರ್ಯೆಯಲ್ಲಿರುತ್ತಾರೆ. ಆಗ ಇವರು ಪರಿಚಾರಿಕೆಯರಂತೆ ನಿಂತಿರುತ್ತಾರೆ. ಅಂತಹ ಸಂದರ್ಭದಲ್ಲಿ ಅಲ್ಲಿ ಹೇಳಿರುವಂತೆಯೇ ಇವರನ್ನು ರೂಪಿಸಬೇಕು. ಸ್ವತಂತ್ರ ದೇವಿಯರಾಗಿಯೂ ಇವರನ್ನು ಅರ್ಚಿಸಬಹುದು. ಆಗ ಇವರು ವೈಷ್ಣವ ಶಕ್ತಿಗಳಾಗಿ ಪೂಜೆಯನ್ನು ಸ್ವೀಕರಿಸಿ ಫಲಗಳನ್ನು ಅನುಗ್ರಹಿಸುತ್ತಾರೆ.

**ಪೂರ್ಣಾಂ ವೈ ಕನಕಾಭಾಸಾಂ ದ್ವಿನೇತ್ರಂ ದ್ವಿಭುಜಾನ್ವಿತಾಮ್**
**ದಕ್ಷಿಣೇ ಲಂಬಿತಂ ಪಾದಂ ವಾಮ ಪಾದಂ ಸುಖಾಸನಮ್ ।**
**ಪುಷ್ಪಂ ವಾಮಕರೇ ಚೈವ ವರದಂ ದಕ್ಷಿಣೇ ಕರೇ**

**ಶ್ಯಾಮವಸ್ತ್ರಧರಾ ಮಿಥೇ ಕರ್ಣೇ ಮಕರ ಕುಂಡಲಾಮ್ ||**

ಪೂರ್ಣಾದೇವಿಯು ಅಪರಂಜಿಯಂತೆ ಹಳದಿಯ ಮೈಬಣ್ಣದ ಕಾಂತಿಯಿಂದ, ಎರಡು ಕಣ್ಣು ಎರಡು ಭುಜಗಳೊಂದಿಗೆ ಇರುತ್ತಾಳೆ. ಕಪ್ಪು ವಸ್ತ್ರಗಳನ್ನು, ಕಿವಿಗಳಲ್ಲಿ ಮಕರ ಕುಂಡಲಗಳನ್ನು ಧರಿಸಿರುತ್ತಾಳೆ. ಈಕೆಯು ಬಲಗಾಲನ್ನು ತೂಗಿಬಿಟ್ಟಿದ್ದು ಎಡಗಾಲನ್ನು ಪೀಠದ ಮೇಲೆ ಅಡ್ಡಲಾಗಿರಿಸಿಕೊಂಡು ಸುಖಾಸನದಲ್ಲಿ ಕುಳಿತಿರುತ್ತಾಳೆ. ಈಕೆಯು ಬಲ ಹಸ್ತದಲ್ಲಿ ವರದ ಮುದ್ರೆಯನ್ನು ಎಡಹಸ್ತದಲ್ಲಿ ಪುಷ್ಪವನ್ನು ಧರಿಸಿರುತ್ತಾಳೆ. ಇಂತಹ ರೂಪದಲ್ಲಿರುವ ಪೂರ್ಣಾದೇವಿಯನ್ನು ನಾನು ಪ್ರಾರ್ಥಿಸುತ್ತೇನೆ.

**ಶ್ಯಾಮದೇಹಂ ದ್ವಿನೇತ್ರಾಂ ಚ ದ್ವಿಭುಜಾಂ ಚ ದ್ವಿಪಾದಕಾಮ್**
**ಕಟಕಂ ವಾಮಹಸ್ತೌ ಚ ಪುಷ್ಪಂ ವೈ ದಕ್ಷಿಣೇ ಕರೇ |**
**ಲಂಬಿತಂ ವಾಮಪಾದಂ ತು ದಕ್ಷಿಣಂ ಚ ಸುಖಾಸನಮ್**
**ಏಕಕುಂಡಲ ಕರ್ಣಾಂ ಚ ಕನಕಾಂಬರಧಾರಿಣೀಮ್ ||**

ಪುಷ್ಕಳಾ ದೇವಿಯು ಎರಡು ಕಣ್ಣು, ಎರಡು ಭುಜ ಮತ್ತು ಎರಡು ಪಾದಗಳನ್ನು ಒಂದು ತಲೆಯನ್ನು ಪಡೆದಿರುತ್ತಾಳೆ. ಈಕೆಯ ಮೈ ಛಾಯೆಯು ಶ್ಯಾಮಲವರ್ಣ. ಈಕೆಯ ಎಡಗಾಲು ತೂಗಿಬಿಟ್ಟಿದ್ದು ಬಲಗಾಲನ್ನು ಪೀಠದಮೇಲೆ ಅಡ್ಡಲಾಗಿರಿಸಿಕೊಂಡು ಸುಖಾಸನದಲ್ಲಿ ಕುಳಿತಿರುತ್ತಾಳೆ. ಈಕೆಯು ಎಡಹಸ್ತದಲ್ಲಿ ಕಟಕ ಮುದ್ರೆಯನ್ನು ಬಲಹಸ್ತದಲ್ಲಿ ಪುಷ್ಪವನ್ನು ಧರಿಸಿರುತ್ತಾಳೆ. ಇಂತಹ ರೂಪದಲ್ಲಿರುವ ಪೂರ್ಣಾದೇವಿಯನ್ನು ನಾನು ಪ್ರಾರ್ಥಿಸುತ್ತೇನೆ.

## ೧೨. ಪರಿಚಾರಕರು

### ೧. ಅನಂತ (ಸರ್ಪ)

ಅಂತ್ಯವಿಲ್ಲದವನು ಅನಂತ. ಈ ಅನಂತನು ಸದಾ ಭಗವಂತ ಸಾನ್ನಿಧ್ಯದಲ್ಲಿಯೇ ಇರುತ್ತಾನೆ. ಆದ್ದರಿಂದ ವೈಷ್ಣವ ಆಗಮಗಳು ಈತನನ್ನು *ನಿತ್ಯಸೂರಿ* ಎಂದರೆ ಎಲ್ಲಾ ಕಾಲಕ್ಕೂ ಮುಕ್ತನಾಗಿರುವವನು ಎಂದು ಪರಿಗಣಿಸುತ್ತವೆ. ಈತನೇ ಭಗವಂತನ ಮೊದಲ ಪರಿಚಾರಕ. ಭಗವಂತನು ಎಲ್ಲಿಗೆ ಹೋದರೆ ಅಲ್ಲಿ ಸಾವಿರ ಹೆಡೆಗಳ ಛತ್ರಿಯಾಗಿ ಸ್ವಾಮಿಗೆ ನೆರಳಾಗಿರುತ್ತಾನೆ. ಭಗವಂತನು ಕುಳಿತಲ್ಲಿ ಸ್ವಾಮಿಗೆ ಈತನೇ ಪೀಠವಾಗುತ್ತಾನೆ. ಸ್ವಾಮಿ ಮಲಗಿದರೆ ಅನಂತನೇ ಹಾಸಾಗುತ್ತಾನೆ. ಕ್ಷೀರಸಾಗರದಲ್ಲಿ ಯೋಗನಿದ್ರಾ ಸಮಯದಲ್ಲಿ ಅನಂತನು ಸ್ವಾಮಿಗೆ ತೇಲುವ ಹಾಸಿಗೆಯಾಗುವುದರೊಂದಿಗೆ ತನ್ನ ಹೆಡೆಯಿಂದ ನೆರಳನ್ನು ಹರಡಿಸುತ್ತಾ ಸ್ವಾಮಿಯನ್ನು ನೋಡಿಕೊಳ್ಳುತ್ತಿರುತ್ತಾನೆ.

ಪಾತಾಳಾಂತ್ಯದಲ್ಲಿರುವ ಕೂರ್ಮನ ಮೇಲೆ ಕುಳಿತಿರುವ ಬಿಳಿಯವರ್ಣದ, ಸಾವಿರ ಹೆಡೆಗಳ ಅನಂತನು ಹಲಾಯುಧನಾಗಿದ್ದು ನಾಗರಾಜ ಎಂಬ ಹೆಸರನ್ನು ಪಡೆದಿದ್ದಾನೆ (**ಪಾತಾಲದಿಗ್ಗತಂ ಧ್ಯಾಯೇತ್ ಕೂರ್ಮಾರೂಢಂ ಹಲಾಯುಧಂ | ಸಿತಂ ಸಹಸ್ರಫಣಾಢ್ಯಮ್ಯೋಽನಂತೋ ನಾಮ ನಾಗರಾಟ್ ||** ಪೌಷ್ಕರ ಸಂಹಿತೆ ೪ : ೧೫೭, ಪಾರಮೇಶ್ವರ ಸಂಹಿತೆ ೧೧ : ೧೦೦ - ೧೦೧, ಈಶ್ವರಸಂಹಿತೆ ೬ : ೬೮) ಎಂದು ಹೇಳಲಾಗುತ್ತದೆ. ಸಾವಿರ



ಚಿತ್ರ ೧೨೮ : ಪೂರ್ಣಾ ದೇವಿ



ಚಿತ್ರ ೧೨೯ : ಪುಷ್ಕಳಾ ದೇವಿ

ಹೆಡೆಗಳ ಸರ್ಪರೂಪೀ ಅನಂತನು ಶಂಖ ಚಕ್ರಗಳನ್ನು ಧರಿಸಿರುವ ಸಕಲಾಲಂಕೃತ ದೇವನು (ಚಕ್ರಶಂಖ ಧರಂ ದೇವಂ ಸಹಸ್ರವದನಂ ವಿಭುಂ। ಸರ್ಪಾಕಾರೇಣ ಸಂಯುಕ್ತಂ ಅನಂತಂ ಸತತಂ ಭಜೇ॥) ಎಂದು ಪರಾಶರ ಸಂಹಿತೆಯು ಹೇಳುತ್ತದೆ.

ಸಾತ್ವತ ಸಂಹಿತೆಯಲ್ಲಿ (೧೨ : ೬ - ೮, ಈಶ್ವರ ಸಂಹಿತೆ ೨೪ : ೧೯೭ - ೧೯೯) ಈ ರೀತಿಯ ವಿವರಣೆ ದೊರೆಯುತ್ತದೆ -

**ತುಹಿನಾಚಲ ಸಂಕಾಶಂ ಪೂರ್ಣಚಂದ್ರಸಮಾನನಮ್**

**ಸ್ವ (ಸು) ಮಣಿ ವ್ಯಂಜನೇನೈವ ಯುಕ್ತಂ ಫಣಗಣೇನ ತು ||**

**ಪ್ರೋದ್ವಹಂತಂ ಹಲಂ ಚಕ್ರಮಪಸವ್ಯದ್ವಯೇನ ತು**

**ವಾಮಹಸ್ತ ದ್ವಯೇನೈವ ಶಂಖ ಮುಸಲ ಮೇವ ಚ ||**

**ನಿತ್ಯ ಸನ್ನಿಹಿತಾಕೇಶ ಶಕ್ತಿಂ ಸರ್ವಜ್ಞಮಚ್ಯುತಮ್**

ಸರ್ವಜ್ಞನಾದ ಅಚ್ಯುತನ ಬಳಿ ಸನ್ನಿಹಿತನಾಗಿ ಎಲ್ಲಾ ಕಾಲದಿಂದಲೂ ಇರುವುದರಿಂದಲೇ ಅದ್ಭುತವಾದ ಅಪಾರಶಕ್ತಿಯನ್ನು ಪಡೆದುಕೊಂಡಿರುವ ಅನಂತನು ಹಿಮಾಚಲದಂತೆ ಬಿಳುಪಾಗಿದ್ದು, ಪೂರ್ಣಚಂದ್ರನಂತೆ ಕಾಂತಿಪೂರ್ಣನಾಗಿರುತ್ತಾನೆ. ಚತುರ್ಭುಜಗಳಿರುವ ಈತನು ಬಲಹಸ್ತಗಳಲ್ಲಿ ಹಲ (ನೇಗಿಲು), ಚಕ್ರವನ್ನು ಎಡ ಹಸ್ತಗಳಲ್ಲಿ ಮುಸಲ (ಒನಕೆ), ಶಂಖವನ್ನು ಧರಿಸಿರುತ್ತಾನೆ.

ಹಲ ಮುಸಲ ಆಯುಧಗಳಿಗೆ ಕಾರಣವೆಂದರೆ ಬಲರಾಮ ಅನಂತನ ಅವತಾರವೆಂದು ಕೆಲವು ಆಕರಗಳು ಹೇಳುತ್ತವೆ. ಬಲರಾಮನಿಗೆ ಹಲ ಮುಸಲಗಳು ಆಯುಧಗಳಾಗಿ ದೊರೆತಿದ್ದು ಅನಂತನಿಂದಲೇ ಎಂಬ ನಂಬಿಕೆಯೂ ಇದಕ್ಕೆ ಕಾರಣವಿರಬೇಕು.

## ೨. ಗರುಡ

ಭಾರತೀಯ ಮೂರ್ತಿಶಿಲ್ಪಗಳಲ್ಲಿ ಗರುಡನಷ್ಟು ಜನಪ್ರಿಯನಾಗಿರುವ ದೇವ ಭಾರತ ಮತ್ತು ಹೊರಗೆ ಬೇರೆ ಯಾರೂ ಇಲ್ಲವೆಂದೇ ಹೇಳಬಹುದು. ಈ ಮೂರ್ತಿಯ ಹುಟ್ಟೂ ವೇದಗಳಿಗೇ ಸೇರಿದೆ.

ವೇದಗಳಲ್ಲಿ ಶ್ಯೇನ ಬಹು ಶಕ್ತಿಶಾಲಿಯಾದ ಪಕ್ಷಿ. ಪ್ರಾಯಶಃ ಇದೇ ಗರುಡನ ಪೂರ್ವರೂಪ ಇರಬಹುದು. ನಂತರ ಕಾಲದಲ್ಲಿಯೇ ಶ್ಯೇನ ಎಂಬುದಕ್ಕೆ ಹದ್ದು ಎಂಬ ಅರ್ಥ ಅನ್ವಯಗೊಂಡಿದೆ.

ಸ್ವರ್ಗದಲ್ಲಿದ್ದ ಅಮೃತವನ್ನು ಶ್ಯೇನ ಭೂಮಿಗೆ ಹೊತ್ತು ತಂದ (ಋಗ್ವೇದ ೩ : ೪೩ : ೭, ೪ : ೨೬ : ೬, ೮ : ೧೫ : ೩....) ಸೋಮನನ್ನು *ಶ್ಯೇನಾಭೃತ* ಎಂದು ಹೇಳಲಾಗಿದೆ (ಋ ೧ : ೧೦ : ೨, ೮ : ೧೫ : ೩). ಗರುಡನು ಸ್ವರ್ಗದಿಂದ ಅಮೃತ ಹೊತ್ತು ತಂದ ಎಂಬುದಾಗಿ ಪುರಾಣಗಳೂ ಹೇಳುತ್ತವೆ. ಕೊನೆಗೆ ವಿಷ್ಣುವಿನ ಸೇವಕ ಮತ್ತು ವಾಹನವಾದ ಎಂಬುದನ್ನೂ ಅವು ತಿಳಿಸುತ್ತವೆ.

ಕಶ್ಯಪ ಮತ್ತು ವಿನತಾ ಇವರ ಮಗನಾಗಿದ್ದ ಗರುಡನು ಅರುಣನ ತಮ್ಮ. ಕಶ್ಯಪನಿಗೆ ಕದ್ರು ಎಂಬ ಇನ್ನೊಬ್ಬ ಹೆಂಡತಿಯೂ ಇದ್ದಳು. ಆಕೆಯ ಮಕ್ಕಳು ಓಡಾಡಿಕೊಂಡು ಚೆನ್ನಾಗಿದ್ದರು. ಕದ್ರುವಿನೊಂದಿಗೇ ಅದೇ ಸಮಯಕ್ಕೆ ಗರ್ಭಧರಿಸಿದ ವಿನತಾ ಸಪತ್ನೀ

ಮತ್ಸರದಿಂದ ತಾನು ಇರಿಸಿದ್ದ ಎರಡು ಮೊಟ್ಟೆಗಳಲ್ಲಿ ಒಂದನ್ನು ಒಡೆದಳು. ಅದರಿಂದ ಸೊಂಟದ ತನಕ ಮನುಷ್ಯಾಕಾರದಲ್ಲಿದ್ದು ಕಾಲುಗಳೇ ರೂಪುಗೊಂಡಿರದ ಅರುಣ ಹೊರಬಂದ. ತನ್ನ ಸ್ಥಿತಿಗೆ ಕಾರಣವಾದ ತನ್ನ ತಾಯಿಯ ಸಪತ್ನೀಮಾತ್ಸರ್ಯಕ್ಕೆ ಕೃದ್ಧನಾಗಿ ' ನಿನ್ನ ಅಸೂಯೆಯ ಫಲವನ್ನು ನಾನು ಅನುಭವಿಸುತ್ತಿದ್ದೇನೆ. ನೀನು ಐನೂರು ವರ್ಷಗಳಕಾಲ ನಿನ್ನ ಸಪತ್ನಿಯ ದಾಸಿಯಾಗಿರು. ಎರಡನೆಯ ಮೊಟ್ಟೆ ಪಕ್ವವಾಗಿ ಒಡೆಯಲು ಬಿಟ್ಟರೆ ಅದರಿಂದ ಹೊರಬರುವ ನನ್ನ ತಮ್ಮ ನಿನ್ನನ್ನು ದಾಸ್ಯದಿಂದ ಮುಕ್ತಮಾಡಬಲ್ಲ'. ಎಂದು ನಿಶ್ಯಾಪವನ್ನೂ ಅರುಣನೇ ಸೂಚಿಸಿದ. ವಿನತಾಳು ಈ ಶಾಪದ ಪ್ರಕಾರ ಕದ್ರುವಿನ ದಾಸಿಯಾಗಿದ್ದಳು. ಮೊಟ್ಟೆಯನ್ನು ಒಡೆದುಕೊಂಡು ಹೊರಬಂದ ಗರುಡನು ವೇಗವಾಗಿ ಚಲಿಸುತ್ತಾ ಮೇಲೆ ಹಾರಿಹೋದನು.

ಗರುಡನು ಹಾರುತ್ತಿದ್ದಾಗ ವಾಲಾಖಿಲ್ಯ ಮಹರ್ಷಿಗಳು ಈತನನ್ನು ಇಂದ್ರನನ್ನಾಗಿ ಅಭಿಷೇಕಮಾಡಿದರು. ಬಹು ಕಾಂತಿವಂತನಾದುದರಿಂದ ಜನರೆಲ್ಲಾ ಭೀತರಾದರು. ಆ ತೇಜಸ್ಸಿಗೆ ಈತನನ್ನೇ ಅಗ್ನಿಎಂದು ಭಾವಿಸಿ ಸ್ತುತಿಮಾಡತೊಡಗಿದರು. ಆಗ ಗರುಡ ತನ್ನ ತೇಜಸ್ಸನ್ನು ಕಡಿಮೆ ಮಾಡಿಕೊಂಡ. ಅಣ್ಣನಾದ ಅರುಣನನ್ನು ತನ್ನ ಬೆನ್ನಿನ ಮೇಲೆ ಕೂರಿಸಿ ಕೊಂಡು ಹೋಗಿ ಪೂರ್ವದಿಕ್ಕಿನಲ್ಲಿ ಇರಿಸಿದ.

ಕದ್ರುವಿನ ದಾಸಿಯಾಗಿ ದುಡಿಯುತ್ತಿದ್ದ ತನ್ನ ತಾಯಿ ವಿನತಾಳನ್ನು ಗರುಡ ಸಮೀಪಿಸಿದ. ಅಲ್ಲಿ ವಿನತಾ ಬಹುವಾಗಿ ಶ್ರಮಿಸುತ್ತಾ ಅಪಾರವಾದ ದುಃಖವನ್ನು ಅನುಭವಿಸುತ್ತಿದ್ದಳು. ಕದ್ರು ನಾಗರ ವನಕ್ಕೆ ಹೋಗಬೇಕೆಂದು ವಿನತಾಳ ಭುಜದ ಮೇಲೆ ಕುಳಿತು ತನ್ನ ಅನುಚರ ನಾಗರನ್ನು ಭುಜದ ಮೇಲೆ ಕೂರಿಸಿಕೊಂಡು ಹೋಗ ಬೇಕೆಂದು ಗರುಡನಿಗೆ ಆಜ್ಞಾಪಿಸಿದಳು. ಹಾರುತ್ತಾ ಗರುಡ ಮೇಲೇರಿದ. ಸೂರ್ಯನ ತಾಪವನ್ನು ಸಹಿಸಲಾರದೆ ನಾಗರೆಲ್ಲಾ ಕೆಳಕ್ಕೆ ಬಿದ್ದರು. ಆಗ ಇಂದ್ರನ ಸ್ತುತಿ ಮಾಡಿ ಕದ್ರು ಮಳೆ ತರಿಸಿದಳು. ಆಗ ನಾಗರು ಗರುಡನಿಗೆ ಬಗೆ ಬಗೆಯಾದ ಆಜ್ಞೆಗಳನ್ನು ಕೊಡ ತೊಡಗಿದರು. ಗರುಡನು ಈ ಉಪಟಳವನ್ನು ತನ್ನ ತಾಯಿ ವಿನತಾಳಿಗೆ ವಿವರಿಸಿದ. ಆಗ ಆಕೆ ದಾಸೀಭವನದ ಹಿಂಸೆ, ನಾಗರ ಕಪಟವರ್ತನೆ ಎಲ್ಲಾ ಸವಿಸ್ತಾರವಾಗಿ ತಿಳಿಸಿದಳು. ತನ್ನ ತಾಯಿಯ ದಾಸ್ಯವನ್ನು ಹೋಗಲಾಡಿಸಲು ಕದ್ರುವನ್ನೇ ಉಪಾಯ ಸೂಚಿಸಲು ಕೋರಿದ ಗರುಡ. ಆಕೆ ಅಮೃತವನ್ನು ತಂದುಕೊಟ್ಟರೆ ವಿನತಾಳನ್ನು ಮುಕ್ತಳನ್ನಾಗಿ ಮಾಡುವುದಾಗಿ ಹೇಳಿದಳು.

ಅಮೃತವನ್ನು ತರಲು ತಾಯಿಯ ಅನುಮತಿಯನ್ನು ಪಡೆದುಕೊಂಡು ಗರುಡ ಹಾರಿ ಹೊರಟ. ದಾರಿಯಲ್ಲಿ ತನ್ನ ತಂದೆ ಕಶ್ಯಪ ಮಹರ್ಷಿ ತಪಸ್ಸುಮಾಡುತ್ತಿದ್ದ ಸ್ಥಳವನ್ನು ಸೇರಿದ. ತಂದೆಯನ್ನು ತನ್ನ ಹಸಿವು ತಣಿಯಲು ಏನಾದರೂ ಕೊಡಬೇಕೆಂದಾಗ ಅಲ್ಲಿಯ ಸರೋವರದಲ್ಲಿ ಜಗಳವಾಡುತ್ತಿದ್ದ ಒಂದು ಆನೆ ಮತ್ತು ಆಮೆಯನ್ನು ತೋರಿ ಅವನ್ನು ತಿನ್ನಲು ಹೇಳಿದ. ಪೂರ್ವಜನ್ಮದಲ್ಲಿ ಸೋದರರಾಗಿ ಜಗಳವಾಡುತ್ತಿದ್ದ ಅವರು ಈಗಲೂ ಆ ಜಗಳವನ್ನು ಮುಂದುವರಿಸುತ್ತಿದ್ದರು. ಇಬ್ಬರನ್ನೂ ತನ್ನ ಪಂಜಾಗಳಲ್ಲಿ ಹಿಡಿದು ಹಾರುತ್ತಾ ಒಂದುನೂರು ಯೋಜನ ವಿಸ್ತಾರವಾಗಿದ್ದ ವಟವೃಕ್ಷದ ಬಳಿಗೆ ಬಂದು ಅದರ ಒಂದು ಕೊಂಬೆಯಮೇಲೆ ಗರುಡ ಕುಳಿತ. ಇದ್ದಕ್ಕಿದ್ದಂತೆಯೇ ಆ ಕೊಂಬೆ ಮುರಿಯಿತು. ಆ ಕೊಂಬೆಗೆ ವಾಲಾಖಿಲ್ಯಋಷಿಗಳು ತಲೆ ಕೆಳಗಾಗಿ ಸಿಲುಕಿಕೊಂಡು ತಪಸ್ಸು ಮಾಡುತ್ತಿದ್ದರು. ಇದನ್ನು

ಕಂಡ ಗರುಡ ಆ ಕೊಂಬೆಯನ್ನು ತನ್ನ ಕೊಕ್ಕಿನಿಂದ ಹಿಡಿದು ಆನೆ, ಆಮೆ ಮತ್ತು ವಾಲಾಖಿಲ್ಯರೊಂದಿಗೆ ಮತ್ತೆ ತನ್ನ ತಂದೆ ಕಶ್ಯಪರ ಬಳಿಗೆ ಬಂದ. ಕಶ್ಯಪರು ವಾಲಾಖಿಲ್ಯರ ಕ್ಷೇಮವನ್ನು ವಿಚಾರಿಸಿ ಅವರ ಕೋಪವನ್ನು ಉಪಶಮನಗೊಳಿಸಿದರು. ಅವರು ತಪಸ್ಸಿಗೆಂದು ಹಿಮಾಲಯಕ್ಕೆ ಹೋದರು. ಗರುಡನು ಆ ಕೊಂಬೆಯನ್ನು ಬೆಟ್ಟದ ಮೇಲೆ ಇರಿಸಿದ. ಅಲ್ಲಿಯೇ ಆನೆ ಮತ್ತು ಆಮೆಗಳನ್ನೂ ತಿಂದು ಮುಗಿಸಿದ. ನಂತರ ಅಮೃತವನ್ನು ಪಡೆಯಲೆಂದು ಹೊರಟ.

ಅಮೃತವನ್ನು ತೆಗೆದುಕೊಂಡು ಹೋಗಲು ಗರುಡ ಬರುತ್ತಿದ್ದಾನೆ ಎಂಬ ವಿಷಯ ಗೊತ್ತಾಗುತ್ತಲೇ ದೇವತೆಗಳು ಯುದ್ಧಕ್ಕೆ ಸನ್ನದ್ಧರಾದರು. ನಂತರದಲ್ಲಿ ಯಕ್ಷ-ಗಂಧರ್ವ-ದೇವತೆಗಳು ಸಂಯುಕ್ತವಾಗಿ ಗರುಡನ ಮೇಲೆ ಯುದ್ಧ ಮಾಡಿದರು. ಆದರೂ ಅವರಿಂದ ಗರುಡನನ್ನು ಜಯಿಸುವುದು ಸಾಧ್ಯವಾಗಲಿಲ್ಲ. ಇಂದ್ರನ ವಜ್ರಾಯುಧಕ್ಕೂ ಗರುಡನನ್ನು ತಡೆಯುವುದು ಸಾಧ್ಯವಾಗಲಿಲ್ಲ. ನೇರವಾಗಿ ಅಮೃತವು ಸಂರಕ್ಷಿಸಲ್ಪಟ್ಟಿದ್ದ ಗುಹೆಯತ್ತ ಹೊರಟ.

ಗುಹೆಯನ್ನು ರಕ್ಷಿಸಲು ಸುದರ್ಶನ ಚಕ್ರದಂತಹ ಚಕ್ರ ಮತ್ತು ಇತರ ದಿಕ್ಕುಗಳಲ್ಲೆಲ್ಲಾ ಅಗ್ನಿಶಿಖೆಗಳು ಕಾವಲಾಗಿದ್ದವು. ಗರುಡನು ತೀರಾ ಸೂಕ್ಷ್ಮರೂಪವನ್ನು ಧರಿಸಿದ ಚಕ್ರದ ಮಧ್ಯೆ ಇರುವ ರಂಧ್ರದ ಮುಖಾಂತರ ಹಾದು ಗುಹೆಯನ್ನು ಪ್ರವೇಶಿಸಿದ. ಆದರೆ ಅಮೃತವನ್ನು ಎರಡೂ ಕಡೆಗಳಿಂದಲೂ ಇಬ್ಬರು ನಾಗರು ಕಾಯುತ್ತಿದ್ದರು. ಅವುಗಳ ದೃಷ್ಟಿಗೆ ಬಿದ್ದವರು ಅಲ್ಲಿಯೇ ಭಸ್ಮವಾಗುತ್ತಿದ್ದರು. ಅವರ ಕಣ್ಣುಗಳಿಗೆ ಧೂಳೆರಚಿ ಅವರು ಕಣ್ಮುಚ್ಚುವಂತೆ ಮಾಡಿ ತಾನು ಅಮೃತ ಕುಂಭದೊಂದಿಗೆ ಹೊರಕ್ಕೆ ಓಡಿಬಂದ. ಅಷ್ಟರಲ್ಲಿ ವಿಷ್ಣುವು ಕಾಣಿಸಿಕೊಂಡ. ಅಮೃತ ಕುಂಭವೇ ಪೂರ್ಣವಾಗಿ ಬಳಿ ಇರಿಸಿಕೊಂಡಿದ್ದರೂ ಸ್ವಲ್ಪವೂ ತಾನು ತೆಗೆದುಕೊಂಡಿರಲಿಲ್ಲ. ಇದನ್ನು ಕಂಡು ಸಂಪ್ರೀತನಾದ ವಿಷ್ಣುವು ಎರಡು ವರಗಳನ್ನು ಕೋರಿಕೊಳ್ಳುವಂತೆ ಸೂಚಿಸಿದ. ಗರುಡನು 'ನಿಮ್ಮೊಂದಿಗೆ ನಾನು ಬಹು ಎತ್ತರದಲ್ಲಿರಬೇಕು. ಅಮೃತವನ್ನು ಕುಡಿಯದೆಯೇ ನಾನು ಅಮರನಾಗಿರಬೇಕು' ಎಂದು ಬೇಡಿದ. ನಂತರ 'ನಾನು ನಿಮ್ಮ ಸೇವೆಯನ್ನು ಹೇಗೆ ಮಾಡಬಹುದು ?' ಎಂದು ವಿಷ್ಣುವನ್ನೇ ಕೇಳಿದ.

ವಿಷ್ಣು 'ನೀನು ನನ್ನ ವಾಹನವಾಗಿರು. ನಿನ್ನ ಮೊದಲ ವರದ ಸಂಪೂರ್ತಿಗಾಗಿ ನಾನು ರಥದಲ್ಲಿ ಕುಳಿತಾಗ ನೀನು ಆ ರಥ ಧ್ವಜದಲ್ಲಿರು' ಎಂದು ಹೇಳಿದ.

ನಂತರ ಬದರಿಕಾಶ್ರಮದಲ್ಲಿ ಕಶ್ಯಪರ ಬಳಿಗೆ ಬಂದ. ಅಲ್ಲಿ ಋಷಿಗಳು ಗರುಡನಿಗೆ ನಾರಾಯಣ ಮಹಾತ್ಮ್ಯೆಯನ್ನು ಉಪದೇಶಿಸಿದರು. ನಂತರ ಗರುಡನು ಇಂದ್ರನ ಮಿತ್ರನಾದ. ಇಂದ್ರನು ಅಮೃತವನ್ನು ತೆಗೆದುಕೊಂಡು ಹೋಗಬೇಕಾಗಿರುವ ಕಾರಣವನ್ನು ಕೇಳಿದ. ಆಗ ಗರುಡ ತನ್ನ ತಾಯಿ ದಾಸಿಯಾಗಿರುವುದನ್ನು ತಿಳಿಸಿದ. ಇಂದ್ರನು 'ನಿನ್ನ ತಾಯಿಯು ದಾಸಿಯಾಗಿರುವದು ಕೇವಲ ಕಪಟಕ್ಕೆ ತುತ್ತಾಗಿ. ಆದ್ದರಿಂದ ನಾವೂ ಕಪಟ ನಾಟಕದಿಂದಲೇ ಆಕೆಯನ್ನು ಮುಕ್ತಿಗೊಳಿಸೋಣ 'ಎಂದು ಹೇಳಿದ' ಇನ್ನು ಮುಂದೆ ಸರ್ಪಗಳು ನಿನ್ನ ಆಹಾರವಾಗಲಿ' ಎಂದು ಆಶೀರ್ವದಿಸಿದ.

ಗರುಡನು ಅಮೃತ ಕುಂಭವನ್ನು ತಂದು ಕದ್ರುವಿಗೆ ಕೊಟ್ಟ. ಆಕೆ ಅದನ್ನು ದರ್ಭೆಯ ಮೇಲೆ ಇರಿಸಿದಳು. ವಿನತಳನ್ನು ಮುಕ್ತಳನ್ನಾಗಿ ಮಾಡಿದಳು. ತಾನೂ ಮತ್ತು ತನ್ನ ಮಕ್ಕಳಾದ ನಾಗರು ಸ್ನಾನಮಾಡಿ ಬರಲು ಹೊರಟರು. ಅದೇ ಸಮಯಕ್ಕೆ ಬಂದ ಇಂದ್ರನು ಅಮೃತ

ಕುಂಭವನ್ನು ದೇವಲೋಕಕ್ಕೆ ಕೊಂಡೊಯ್ದ. ಸರ್ಪಗಳು ಬಂದು ನೋಡಿದಾಗ ಕುಂಭ ಇರಲಿಲ್ಲ. ಬದಲಿಗೆ ಸ್ವಲ್ಪ ಅಮೃತ ದರ್ಭೆಯ ಮೇಲೆ ಚೆಲ್ಲಿತ್ತು. ಅದನ್ನೇ ಅವರು ನೆಕ್ಕಿದಾಗ ದರ್ಭೆಯ ಎಸಳು ಅವರ ನಾಲಿಗೆಯನ್ನು ಸೀಳಿತು. ಆದ್ದರಿಂದ ಸರ್ಪಗಳ ನಾಲಿಗೆಯಲ್ಲಿ ಸೀಳಿದೆ.

ಗರುಡನ ಹೆಂಡತಿಯರು ಭಾಸೀ, ಕ್ರೌಂಚೀ, ಶುಕೀ, ಧೃತರಾಷ್ಟ್ರೀ ಮತ್ತು ಶ್ಯೇನೀ (ಬ್ರಹ್ಮಾಂಡ ಪುರಾಣ ೩ : ೭ : ೪೪೮ - ೪೫೯)

ಇಂದ್ರನು ಒಮ್ಮೆ ಸುಮುಖ ಎಂಬ ನಾಗನಿಗೆ ಅಮರತ್ವವನ್ನು ದಯಪಾಲಿಸಿದ. ಆಗ ಗರುಡನು 'ನನ್ನಿಂದ ನನ್ನ ಆಹಾರವನ್ನೇಕೆ ಕಸಿಯುತ್ತೀಯೇ? ವಿಷ್ಣುವನ್ನೇ ಸುಲಭವಾಗಿ ಹೊರುವ ನನ್ನ ಶಕ್ತಿಯ ಪರಿಚಯ ನಿನಗಿಲ್ಲ. ವಿಷ್ಣುವನ್ನು ಹೊರುವ ನಾನು ವಿಷ್ಣುವಿಗಿಂತಲೂ ಬಲಶಾಲಿ ಎಂಬುದು ನಿನಗೆ ಗೊತ್ತಾಗಿಲ್ಲವೇ?' ಎಂದು ಪ್ರಶ್ನಿಸಿದ. ಈ ಗರ್ವವನ್ನು ಕಂಡ ವಿಷ್ಣು ತನ್ನ ಒಂದು ತೋಳನ್ನು ಗರುಡನ ಮೇಲೆ ಇರಿಸಿದ. ಆ ಭಾರವನ್ನು ಹೊರಲಾರದೆ ಭೂಮಿಕುಸಿದ ಗರುಡ ನಡುಗತೊಡಗಿದ. ವಿಷ್ಣುವನ್ನು ಪ್ರಾರ್ಥಿಸಿದ. ವಿಷ್ಣು ತನ್ನ ಅಂಗುಷ್ಠದಿಂದ ಸುಮುಖನನ್ನು ಚಿಮ್ಮಿದ. ಅವನು ಗರುಡನ ವಕ್ಷದ ಮೇಲೆ ನಿಂತ. ಅಂದಿಂದ ಸುಮುಖ ಗರುಡನ ವಕ್ಷದ ಮೇಲೆಯೇ ಇದ್ದಾನೆ (ಮಹಾಭಾರತ, ಉದ್ಯೋಗಪರ್ವ, ೧೦೩).

ಗರುಡನಿಗೆ ಸುಮುಖ, ಸುನಾಮನ್, ಸುನೇತ್ರ, ಸುವರ್ಚಸ್, ಸುರುಚಿ ಮತ್ತು ಸುಬಲ ಎಂಬ ಆರು ಪುತ್ರರು. (ಮ. ಉ. ೯೯ : ೨ - ೩). ಮಹಾಭಾರತದಲ್ಲಿ ಬೇರೆಯ ಕಡೆ ಇನ್ನೊಂದು ನಾಮಾವಳಿಯನ್ನು ಕೊಡಲಾಗಿದೆ. ಅದರ ಪ್ರಾರಂಭದಲ್ಲಿ ಗರುಡ ಕುಲದ ಅನ್ಯನಾಮಗಳು ಎಂದೇ ಹೇಳಲಾಗಿದೆ. ಕೊನೆಯಲ್ಲಿ ಇವರೆಲ್ಲರೂ ಗರುಡನ ಸುಪುತ್ರರು ಎಂದೂ ಹೇಳಿದೆ.

ವಿಭಿನ್ನ ಕಾರ್ಯಗಳಿಂದಾಗಿ ಈತನಿಗೆ ಬೇರೆ ಬೇರೆ ಹೆಸರುಗಳು ಲಭ್ಯವಾಗಿವೆ. *ಕಾಶ್ಯಪಿ* ಎಂಬುದು ಪೈತೃಕ ನಾಮ. ವೈನತೇಯ ಮಾತೃಕ ನಾಮ. *ಸುಪರ್ಣ, ತಾರ್ಕ್ಷ್ಯ, ಸಿತಾನನ, ರಕ್ತಪಕ್ಷ ಸುವರ್ಣಕಾಯ, ಗಗನೇಶ್ವರ, ಖಗೇಶ್ವರ, ನಾಗಾಂತಕ, ಪನ್ನಗಾಶನ, ಸರ್ಪಾರಾತಿ, ವಿಷ್ಣುರಥ, ಅಮೃತಹರಣ, ಸುಧಾಹರ, ಸುರೇಂದ್ರಜಿತ್, ವಜ್ರಜಿತ್, ಗರುತ್ಮತ್, ತರಸ್ವಿನ್, ರಸಾಯನ್ ಕಾಮಚಾರಿನ್, ಕಾಮಾಯುಷ, ಚಿರಾದ* ಹೀಗೆ ಅನೇಕ ಹೆಸರುಗಳುಂಟು.

ಈತನಿಗೆ ರೆಕ್ಕೆಗಳು, ಕೊಕ್ಕು ಮತ್ತು ನಖಗಳು ಗರುಡ ಪಕ್ಷಿಯಂತೆಯೂ ಶರೀರ ಮತ್ತು ಇತರ ಇಂದ್ರಿಯಗಳು ಮನುಷ್ಯನಂತೆಯೂ ಇದ್ದವು.

ಈತನ ವಂಶದವರು ಶ್ವಾಸವನ್ನು ಬಂಧಿಸಿ ವೇದಪಾಠವನ್ನು ಮಾಡುತ್ತಿದ್ದರು. ಈತನೇ ಗರುಡ ಪುರಾಣವನ್ನು ಕಶ್ಯಪನಿಗೆ ವಿವರಿಸಿದ್ದು (ಗರುಡ ಪುರಾಣ ೧ : ೨). ಗರುಡೋಪಾಸನೆಯು ಬಹು ಪ್ರಾಚೀನವಾದುದು. ಗರುಡ ಗಾಯತ್ರಿಯು ಪ್ರಸಿದ್ಧವಾದುದು (ಮಹಾನಾರಾಯಣೋಪನಿಷದ್, ೩ : ೧೫)

ಅರ್ಧಮಾನವ ಅರ್ಧ ಪಕ್ಷಿಯ ಈ ಮೂರ್ತಿಯು ವಿಷ್ಣುದೇವಾಲಯದಲ್ಲಿ ಕಡ್ಡಾಯವಾಗಿ ಇದ್ದೇ ಇರುತ್ತದೆ. ಸ್ವತಂತ್ರ ಆಲಯ ಇರುವ ಮೂರ್ತಿ. ಗರುಡ ಗಂಬದ ಬಳಿ ಇರುವ ಮೂರ್ತಿ ಮತ್ತು ವಿಷ್ಣು ಉತ್ಸವಮೂರ್ತಿಗೆ ವಾಹನವಾಗಿರುವ ಗರುಡ ಮೂರ್ತಿ. ಈ ಮೂರು ಮೂರ್ತಿಗಳು ಮುಖ್ಯವಾದುದರಿಂದ ಇವಕ್ಕೆ ಪ್ರತ್ಯೇಕ ಲಕ್ಷಣಗಳನ್ನು ವೈಷ್ಣವ

ಶಾಸ್ತ್ರಗಳಲ್ಲಿ ಹೇಳಲಾಗಿದೆ. ಮಾನಸಾರ ಶಿಲ್ಪಶಾಸ್ತ್ರ (೬೧) ದಲ್ಲಿ ಗರುಡ ಲಕ್ಷಣಂ (ಪ್ರತ್ಯೇಕ ಅಧ್ಯಾಯ) ವಿದೆ. ವೈಷ್ಣವ ಶಾಸ್ತ್ರಗಳಲ್ಲಿ ಇರುವ ವಿವರಗಳನ್ನು ಮಾತ್ರವೇ ಇಲ್ಲಿ ಸಂಗ್ರಹಿಸಲಾಗಿದೆ.

ನಾಲ್ಕು ತೋಳಿರುವ ಈ ಮೂರ್ತಿಯನ್ನು ಪ್ರಥಮ ಆವರಣದಲ್ಲಿ, ದ್ವಿತೀಯ ಆವರಣದಲ್ಲಿ ಅಥವ ಮೂಲ ಅರ್ಚಾಮೂರ್ತಿಗೆ ಎದುರಾಗಿ ಮಂಟಪದಲ್ಲಿ ಪ್ರಾಂಜಲನಾಗಿ ಕೈಮುಗಿದು ನಿಂತಿರುವಂತೆ ಅಥವ ಪೀಠಮಂಡಿಯಲ್ಲಿ ಕುಳಿತಿರುವಂತೆ, ಎರಡೇ ಬಾಹುಗಳಿರುವಂತೆ, ಕರಂಡ ಮಕುಟ ಧರಿಸಿರುವಂತೆ ಲೋಹ ಅಥವ ಶಿಲೆಯಲ್ಲಿ ರೂಪಿಸಬೇಕು (**ದಂಡಹಸ್ತಾ ವಿರೂಪಾಕ್ಷಾಶ್ಚತುರ್ಬಾಹು ಸಮನ್ವಿತಾಃ। ಪ್ರಾಂಗಣೇ ಪ್ರಥಮೇ ವಾಥ ದ್ವಿತೀಯೇ ವಾಪಿ ಮಂಟಪೇ॥ ಅಗ್ರ ದೇಶೇ ಪ್ರಕುರ್ವೀತ ಮೂಲಾರ್ಚಾಭಿಮುಖಂ ರಮೇ। ಪ್ರಾಂಜಲಿಂ ದ್ವಿಭುಜಂ ವೀರಂ ಕರಂಡಿಮಕುಟಾನ್ವಿತಂ॥ ಸಂಸ್ಥಾಪಯೇದ್ವೈನತೇಯಂ ಲೋಹೇನ ಶಿಲಾಯಾಪಿ ವಾ।** ಶ್ರೀಪ್ರಶ್ನ ಸಂಹಿತೆ, ೧೫ : ೧೩ - ೧೫). ಹೀಗೆ ನಿರ್ಮಿತವಾಗುವ ಮಂಟಪವು ನಾಲ್ಕು ದ್ವಾರಗಳನ್ನು, ವರ್ಗತ್ರಯವನ್ನೋ ಅಥವ ವರ್ಗಷಟ್ಕವನ್ನೋ ಪಡೆದುಕೊಂಡಿರಬೇಕು. ಮೂಲಗರ್ಭಗುಡಿಯ ಎತ್ತರದಲ್ಲಿ ಮೂರು ಭಾಗಗಳಲ್ಲಿ ಒಂದು ಭಾಗದ, ಅಥವ ಅರ್ಧಭಾಗದ ಎತ್ತರ ಇರಬಹುದು. ಗರುಡಮೂರ್ತಿಯನ್ನು ಬ್ರಹ್ಮ ಅಥವ ದಿವ್ಯಭಾಗದಲ್ಲಿ ಅಥವ ದಿವ್ಯಭಾಗವುಳ್ಳ ಮಾನುಷ ಭಾಗದಲ್ಲಿ ಸ್ಥಾಪಿಸಬೇಕು. ಹೀಗೆ ಸ್ಥಾಪಿಸಲ್ಪಡುವ ಮೂರ್ತಿಯು ಶಿಲೆ ಅಥವ ಲೋಹದಲ್ಲಿ ತಯಾರಿಸಿದ್ದಾಗಿರಬೇಕು. ಈ ಮೂರ್ತಿಗೆ ಮುಖ್ಯಮೂರ್ತಿಗೆ ಅರ್ಚನೆ ನಡೆಯುವಾಗಲೆಲ್ಲಾ ತ್ರಿಕಾಲಗಳಲ್ಲೂ ಅರ್ಚನೆಯು ನಡೆಯಬೇಕು (**ಚತುರ್ದ್ವಾರ ಸಮೋಪೇತಂ ವರ್ಗತ್ರಯ ಸಮನ್ವಿತಮ್। ವರ್ಗಷಟ್ಕಾನ್ವಿತಂ ವಾಥ ಸರ್ವಾಲಂಕಾರ ಶೋಭಿತಮ್॥ ಮೂಲಗೇಹಾತ್ ತ್ರಿಭಾಗೋಚ್ಚಮರ್ಧೋಚ್ಚಂ ವಾ ಸವಿಸ್ತರಮ್। ತಸ್ಮಿನ್ ಬ್ರಾಹ್ಮೋಥ ದಿವ್ಯೇ ವಾ ದಿವ್ಯಯುಕ್ತೇನ ಮಾನುಷೇ॥ ಸಂಸ್ಥಾಪ್ಯ ಲೋಹಜಾಂ ವಾಽಥ ಶೈಲೀಮರ್ಚಾಂ ಯಥೋದಿತಾಮ್। ತ್ರಿಕಾಲಮರ್ಚಯೇನ್ನಿತ್ಯಂ ಮುಖ್ಯ ಮೂರ್ತ್ಯರ್ಚನಾಂತಿಮೇ॥** ಈಶ್ವರ ಸಂಹಿತೆ ೮ : ೭ - ೯).

(ಅ) ಪಾದ್ಮಸಂಹಿತೆ (ಕ್ರಿ, ೨೨ : ೮ - ೧೧) ಯಲ್ಲಿ ಈ ರೀತಿಯ ಧ್ಯಾನವಿದೆ :

**ಗರುಡಂ ಕನಕಪ್ರಖ್ಯಂ ನೀಲನಾಸಾಗ್ರ ಸಂಯುತಮ್**
**ದಕ್ಷಿಣೋತ್ತರ ವಿಸ್ತೀರ್ಣಂ ವಿಚಿತ್ರ ಪೃಥು ವಕ್ಷಸಮ್ ॥**
**ದಂಷ್ಟ್ರಾ ಕರಾಲವದನಂ ಭ್ರುಕುಟೀಕುಟಿಲೇಕ್ಷಣಮ್**
**ಕರಂಡಿಕಾಮಕುಟಿನಂ ಸರ್ವಾಭರಣ ಭೂಷಿತಮ್ ॥**
**ವಿಚಿತ್ರ ಕಂಚುಕಧರಂ ಭುಜಗೇಂದ್ರೈರಲಂಕೃತಮ್**
**ಹೃದಿಪ್ರಾಂಜಲಿಧರಂ ಸ್ಥಿತಮಾಸೀನ ಮೇವ ವಾ ॥**
**ದಕ್ಷಿಣೇತರಯೋರೇಕ ಪಾದಯೋಃ ಕುಂಚಿತಂ ಭವೇತ್**
**ಪೃಷ್ಠ ತೋಕಿ ನ್ಯೋ ಯಥಾಯೋಗಂ ಯದ್ವಾ ಪದ್ಮಾಸನಂ ಭವೇತ್ ॥**

ಬಂಗಾರದ ಮೈ ಬಣ್ಣದ ಕಾಂತಿಯಿಂದಲೂ, ನೀಲವರ್ಣದ ಕೊಕ್ಕುಮೂಗಿನಿಂದಲೂ, ಬಲ ಎಡಗಳಲ್ಲಿ ವಿಸ್ತಾರವಾಗಿರುವಂತಹ ರೆಕ್ಕೆಗಳನ್ನು ಪಡೆದಿರುವ ವಕ್ಷ ಭಾಗದಿಂದಲೂ

ಶೋಭಾಯಮಾನವಾಗಿರುವ ಗರುಡಮೂರ್ತಿಯು ಕೋರೆಗಳನ್ನು ಪಡೆದು, ಗಂಟುಹಾಕಿದ ಹುಬ್ಬುಗಳೊಂದಿಗೆ ಅಲಂಕೃತನಾಗಿರುತ್ತಾನೆ. ನಾಗಗಳಿಂದ ಅಲಂಕೃತನಾಗುವ ಈ ಮೂರ್ತಿಯು ತನ್ನ ಹೃದಯದ ಬಳಿ ಪುಷ್ಪಾಂಜಲಿಯನ್ನು ಧರಿಸಿರುತ್ತಾನೆ. ಈ ಮೂರ್ತಿಯು ನಿಂತಿರುವಂತೆ ಅಥವಾ ಎಡಗಾಲನ್ನು ಮಡಚಿ ಪೀಠದಮೇಲೆ ಊರಿ ಗರುಡಾಸನದಲ್ಲಿ ಕುಳಿತಿರುವಂತೆ ಅಥವಾ ಪದ್ಮಾಸನದಲ್ಲಿ ಯೋಗಮುದ್ರೆಯಲ್ಲಿ ಕುಳಿತಿರುವಂತೆ ರೂಪಿಸಬಹುದು.

(೬) ಹಯಶೀರ್ಷ ಸಂಹಿತೆ (ಆದಿ ೧೮ : ೧ - ೬)ಯು ಈ ವಿವರಗಳನ್ನು ಸೇರಿಸುತ್ತದೆ:

**ಖಗೇಶಸ್ಯ ಪ್ರವಕ್ಷ್ಯಾಮಿ ತತ್ತ್ವರೂಪಂ ಸುಶೋಭನಮ್**
**ನರತುಲ್ಯಂ ಭವೇದಂಗಂ ನಾಸಿಕಾ ಚಂಚುಸನ್ನಿಭಮ್ ॥**
**ಷಡಂಗುಲೋಚ್ಛ್ರಯಾ ಸಮ್ಯಕ್ ಚಂಚುರೂಪೇಣ ಕಲ್ಪಿತಾ**
**ಮಸ್ತಕೇ ಕುಟಿಲಂಕೇಶಃ ನೇತ್ರೇ ಚೈವಾಸ್ಯ ವರ್ತುಲೇ ॥**
**ಆಯತೌ ದ್ವಿಭುಜೌ ಚಾಸ್ಯ ಪಕ್ಷೌ ಕಾರ್ಯೌ ಸುಶೋಭನೌ**
**ಕಕ್ಷಪ್ರದೇಶ ಸಂಲಗ್ನೌ ಜ್ವಲದಗ್ನಿ ಸಮಪ್ರಭೌ ॥**
**ಪಾದಯೋರ್ನಖರಾಃ ಕಾರ್ಯಾಃ ಸರ್ಪಕುಂಡಲಮಂಡಿತಾಃ**
**ನೂಪುರೌ ತಸ್ಯ ನಾಗೇಶೌ ಕೇಯೂರೌ ಪದ್ಮಕಂಬಲೌ ॥**
**ಕಟಿದೇಶೇತಸ್ಯ ಕುಲಿಕಾಃ ಪಂಧಾನಸ್ಯ ವೇಷ್ಟನಾಃ**
**ವೃಶ್ಚಿಕೈಃ ಕಂಠಿಕಾ ಕಾರ್ಯಾ ಗರುಡಸ್ಯ ಮಹಾತ್ಮನಾ ॥**

ಖಗೇಶ್ವರನೆಂದು ಪ್ರಖ್ಯಾತನಾಗಿರುವ ತತ್ತ್ವಾರ್ಥವಮೂರ್ತಿಯಾದ ಗರುಡನು ಅಂಗರೂಪದಿಂದ ಮನುಷ್ಯರಂತೆ ಇದ್ದು ಕೊಕ್ಕುಮೂಗನ್ನು ಪಡೆದಿರುತ್ತಾನೆ. ಈ ಮೂಗು ಆರು ಅಂಗುಳ ಎತ್ತರವಾಗಿದ್ದು ಕೊಕ್ಕಿನಂತೆಯೇ ರೂಪಿಸಬೇಕು. ಉಬ್ಬಿದ ಹಣೆಯಲ್ಲಿ ಗಂಟುಹಾಕಿದ ಹುಬ್ಬು ಮತ್ತು ಗುಂಡಾಗಿರುವ ಕಣ್ಣಗಳು ಆಯತಾಕಾರದ ವಕ್ಷದೇಶಕ್ಕೆ ಎರಡು ರೆಕ್ಕೆಗಳು ಬಹು ಸುಂದರವಾಗಿರುವಂತೆ ರೂಪಿಸಬೇಕು. ಪಾದಗಳಲ್ಲಿ ನಖಗಳು ಮೊನಚಾಗಿರಬೇಕು. ನೂಪುರ ಧರಿಸಿರಬೇಕು. ಹಸ್ತ ಕಂಕಣಗಳು, ಕೇಯೂರಗಳು ಇರಬೇಕು. ಈ ಸ್ವಾಮಿಗೆ ಎರಡೇ ಭುಜಗಳಿರಬೇಕು. ಕಿವಿಯಲ್ಲಿ ಸರ್ಪಕುಂಡಲಗಳಿರಬೇಕು. ಕಟಿಪ್ರದೇಶದಲ್ಲಿ ವಸ್ತ್ರಧರಿಸಿದ್ದು ಅದನ್ನೂ ನಾಗಗಳಿಂದ ಬಿಗಿರಬೇಕು. ಕೊರಳಿನಲ್ಲಿ ಚೇಳುಗಳ ಹಾರವೊಂದಿರಬೇಕು.

ಗರ್ಭಗೃಹದ ದ್ವಾರಾಗ್ರದಲ್ಲಿ ಗರುಡಮೂರ್ತಿ ಇರಬಹುದು. ಆಗ ಕೇವಲ ದ್ವಿಭುಜ ಮಾತ್ರವಿದ್ದು ಅಂಜಲಿಬದ್ಧನಾಗಿರುತ್ತಾನೆ.

(೭) **ಪುರತೋ ವೈನತೇಯಂ ಚ ಸುವರ್ಣಾಭಂ ಕೃತಾಂಜಲಿಮ್ ॥**
**ಕರಂಡ ಮಕುಟಂ ನೀಲವಾಸಸಂ ಪ್ರಿಯದರ್ಶನಮ್**
**ಶಂಖ ಚಕ್ರಗದಾಪಾಣಿಂ ತ್ರಿನೇತ್ರಂ ರಕ್ತಲೋಚನಮ್ ॥**
**ಏವಂ ರೂಪಂ ತು ಸಚಂಸ್ಯ ಪ್ರಚಂಡಂ ತು ತತಃ ಶೃಣು**
**ಶಂಖ ಚಕ್ರಗದಾಪಾಣಿಂ ರಕ್ತವರ್ಣಂ ಚತುರ್ಭುಜಮ್ ॥**
**ನೀಲಾಗ್ರನಾಸಿಕಯುಕ್ತಂ ನಾಗಾಭರಣಭೂಷಿತಮ್**

**ಏವಂ ತು ಗರುಡಂ ಚಂಕ್ಯ ಬಲರಾಮಸ್ಯ ಮೂರ್ತಿಮತ್ ||**
**ಯೋ ಭಕ್ತ್ಯಾ ದೇವ ಮಭ್ಯರ್ಚೇತ್ತಥೈವ ಗರುಡಂ ಭಜೇತ್**
**ಭಗವತ್ಪ್ರಮುಖಂ ಪಶ್ಚಾದ್ ಗರುತ್ಮಂತಂ ನಿಯೋಜಯೇತ್ ||**

(ವಿಷ್ವಕ್ಸೇನ ಸಂಹಿತೆ ೨೦ : ೧೪೯ - ೧೫೩)

ಗರ್ಭಗುಡಿಯ ಮುಂಭಾಗದಲ್ಲಿ ವಿನತಾಪುತ್ರನಾದ ಗರುಡನು ಕೃತಜ್ಞತೆಯಿಂದ ಜೋಡಿಸಿರುವ ಹಸ್ತಗಳೊಂದಿಗೆ ಸುವರ್ಣ ಮೈಕಾಂತಿಯಲ್ಲಿ ಮೆರೆಯುತ್ತಿರುತ್ತಾನೆ. ಕರಂಡ ಮಕುಟವನ್ನು ಧರಿಸಿರುವ ಈತನು ತನ್ನ ಪ್ರೀತಿಯ ನೀಲ ಮೇಘವರ್ಣದ ತನ್ನ ಸ್ವಾಮಿಯನ್ನು ಸದಾ ನೋಡುತ್ತಲೇ ಇರುತ್ತಾನೆ. ಈತನ ಸ್ವಾಮಿಯು ತ್ರಿನೇತ್ರನಾಗಿದ್ದು ಶಂಖ ಚಕ್ರ ಗದೆ ಪದ್ಮಗಳನ್ನು ಧರಿಸಿರುತ್ತಾನೆ. ಈ ಚತುರ್ಭುಜಮೂರ್ತಿಯ ನಿತ್ಯ ಸ್ಮರಣೆಯಿಂದ ಈತನೂ ಆ ಸ್ವಾಮಿಯ ರೂಪವನ್ನೇ ಪಡೆದಿರುತ್ತಾನೆ. ಚತುರ್ಭುಜಗಳು, ನೀಲವರ್ಣದ ನಾಸಿಕ, ನಾಗಾಭರಣ ಧರಿಸಿರುವ ಗರುಡ ಮೂರ್ತಿಯು ಬಲರಾಮಮೂರ್ತಿಯಂತೆಯೇ ಇರುತ್ತಾನೆ. ಯಾರು ವಿಷ್ಣುವನ್ನು ಭಜಿಸುತ್ತಾರೆಯೋ ಅವರೆಲ್ಲರೂ ಗರುಡನನ್ನೂ ಭಜಿಸಿದಂತೆಯೇ. ಮೊದಲ ಮುಖ್ಯ ದೇವನು ವಿಷ್ಣುವಾದರೆ ನಂತರದವನೇ ಗರುಡ. ಅದೇ ರೀತಿಯಾಗಿ ಈ ಎರಡೂ ಮೂರ್ತಿಗಳನ್ನು ಯೋಜಿಸಬೇಕು.

ಇಲ್ಲಿ ಗರುಡ ಮತ್ತು ವಿಷ್ಣುಮೂರ್ತಿಯನ್ನು ಸಮೀಕರಿಸಿ ಅದೇ ಆಯುಧಗಳನ್ನು ಗರುಡನಿಗೆ ಆರೋಪಿಸಲಾಗಿದೆ. ಇಬ್ಬರೂ ಸಮಾನವೆಂಬುದನ್ನು ಸ್ಪಷ್ಟವಾಗಿ ಹೇಳಿದೆ.

(ಈ) ದೇವಾಲಯದಲ್ಲಿ ಗರುಡನನ್ನು ನಾಲ್ಕು ಮೂಲೆಗಳಲ್ಲೂ ನಿರ್ಮಿಸುವ ಪದ್ಧತಿ ಇದೆ. ಈ ಬಗ್ಗೆ ವೈಷ್ಣವ ಆಗಮಗಳಾದ ಈಶ್ವರ ಸಂಹಿತೆ, (೮ : ೪೦ - ೫೬), ಸಾತ್ವತ ಸಂಹಿತೆ (೧೨ : ೧೬೮ - ೧೮೪) ಗಳಲ್ಲಿ ಈ ವಿವರಣೆ ದೊರೆಯುತ್ತದೆ :

**ಸತ್ಯ: ಸುಪರ್ಣೋ ಗರುಡಸ್ತಾರ್ಕ್ಷ್ಯಶ್ಚ ವಿಹಗೇಶ್ವರ:**
**ಪಂಚಾತ್ಮಕಸ್ಯ ಪ್ರಾಣಸ್ಯ ವಿಕಾರಸ್ತ್ವೇಷ ಪಂಚಧಾ ||**
**ಪ್ರಾಚ್ಯಾದ್ಯಾ ದಿಕ್ಷು ಚತ್ವಾರ: ಕೋಣೇಷು ವಿಹಗೇಶ್ವರ:**
**ಧ್ಯಾನಮೇಷಾಂ ವಿಶೇಷೇಣ ಸಮಾಸಾತ್ಕಥ್ಯತೇಽಧುನಾ ||**
**ಅಚಾಂಕ್ಷ್ಯಗೋಚರಾ: ಸರ್ವೇ ಯಸ್ಯ ದೇಹಸ್ತು ಪೌರುಷ:**
**ದ್ವಿಭುಜಸ್ತು ಹೀನಬಾಹುಸ್ತು ಸ ಸತ್ಯ: ಪ್ರಾಗದ್ಯವತಮ್ ||**
**ಸುಪರ್ಣ: ಪದ್ಮರಾಗಾಭೋ ನಿರ್ಮಲಸ್ವರ್ಣಲೋಚನ:**
**ಗರುಡ: ಕಾಂಚನಾಭಸ್ತು ಕುಟಿಲ ಭ್ರುಕುಟೀಕ್ಷಣ: ||**
**ಕೀರಾಕ್ಷಸ್ತು ತಾರ್ಕ್ಷ್ಯೋ ವೈ ಪ್ರಾವೃಟ್‌ಜಲದಸನ್ನಿಭ:**
**ದ್ರವತ್ಕನಕನೇತ್ರಸ್ತು ಶಬಲಾಭಶ್ಚ ಪಂಚಮ: ||**
**ಚತುರ್ಭುಜಾ: ಸುಪರ್ಣಾದ್ಯಾ: ಸೌಮ್ಯರೂಪಾ ಹ್ಯನಾಕುಲಾ:**
**ಪತತ್ರಿಚರಣಾ: ಸರ್ವೇ ಪಕ್ಷಮಂಡಲ ಮಂಡಿತಾ: ||**
**ಲಂಬೋದರಾ: ಸುಪೀನಾಂಗಾ: ಕುಂಡಲಾದ್ಯೈರ್ವಿಭೂಷಿತಾ:**
**ಕುಟಿಲ ಭ್ರೂಸುವೃತ್ತಾಕ್ಷಾ ವಕ್ರ ತುಂಡಾ: ಪಿತಾನನಾ: ||**
**ಅಪಾನಾದಿ ಸಮೀರಾಣಾಮಾಧಿಪತ್ಯೇನ ಸಂಸ್ಥಿತಾ:**
**ಮಹಾಬಲಾ ಮಹಾಕಾಯಾ ರಕ್ತ ತುಂಡೋಽತ್ರ ಪಂಚಮ: ||**



ಚಿತ್ರ ೧೩೦ : ಗರುಡ - ೧

ಸ್ವಸ್ವಾಂಗುಷ್ಠದ್ವಯ ಪ್ರೋತಾಗ್ರ ಪ್ರೋಭಯ ಪಾಣಿನಾ
ಪುಷ್ಪಾಂಜಲಿಧರಾಃ ಸರ್ವೇ ಮುಖ್ಯೇನ ವಿಹಗೋತ್ತಮಾಃ ॥
ಸುಪರ್ಣಃ ಪಕ್ಷಿಮಾಭ್ಯಾಂ ತು ಪಾಣಿಭ್ಯಾಂ ದಕ್ಷಿಣಾದಿತಃ
ಮಂದಾರಪುಷ್ಪಸ್ತಬಕಂ ದಧದ್ವಿಸ್ಮಯ ಮುದ್ರಿಕಾಮ್ ॥
ತಥಾ ವಿಧಾಭ್ಯಾಂ ಗರುಡಶ್ತ್ರೇ ಧತ್ತೇ ವ್ಯತ್ಯಯೇನ ತು
ತಾರ್ಕ್ಷ್ಯಃ ಪಕ್ಷಿಮಯೋರ್ನಿತ್ಯಂ ಧತ್ತೆ ದಕ್ಷಿಣವಾಮಯೋಃ ॥
ಪದ್ಮಂ ತಥಾಮೃತಂ ಕುಭಂ ಪಂಚಮೋ ವಿಹಗೇಶ್ವರಃ
ದಕ್ಷಿಣೇನ ಸುಧಾಕುಂಭಂ ವಾಮೇನ ತು ಫಣೀಶ್ವರಮ್ ॥
ನಿತ್ಯೋದಿತಸ್ಯ ವ್ಯೂಹಸ್ಯ ತಥಾ ಶಾಂತೋದಿತಸ್ಯ ಚ
ಪ್ರಾಣಾಪಾನಾದಿವಾಯೂನಾಂ ಪಂಚಾನಾಮಪಿ ನಾಮಭಾಕ್ ॥
ಗರುಡಃ ಪರಿವಾರತ್ವೇ ಧ್ವಜತ್ವೇಽಪಿ ವಿಶೇಷತಃ
ಯೋಜನೀಯಸ್ತಥಾ ನ್ಯೇಷು ಸುಷು ಪ್ರಾದಿ ಪದೇಷು ಚ ॥
ವಾಸುದೇವಾದಿ ಮೂರ್ತೀನಾಂ ಚತುರ್ಣಾಂ ಕ್ರಮಶಸ್ತ್ವಮೀ
ಸತ್ಯಾದ್ಯಾ ಸ್ತಾರ್ಕ್ಷ್ಯ ಪರ್ಯಂತಾಃ ತತ್ತನ್ಮೂರ್ತ್ಯಂತರೇಷು ಚ ॥
ತ್ರಿಷು ತ್ರಿಷು ಸಮಾದೇಯಾಃ ಸತ್ಯಾದ್ಯಾಃ ಕೇಶವಾದಿಷು
ಪದ್ಮನಾಭಾದಿಮೂರ್ತೀನಾಂ ಪಂಚಮೋ ವಿಹಗೇಶ್ವರಃ ॥
ಪರಾತ್ಪರ ಪರವ್ಯೂಹ ವ್ಯೂಹಾಂತರ ತನೋರ್ವಿಭೋಃ
ಪ್ರಾದುರ್ಭಾವ ತನೋಶ್ಚಾಪಿ ಜಗದ್ರಕ್ಷಣಕಾಂಕ್ಷಿಣಃ ॥
ಖಗಾನಾಂ ಕಾರಣತ್ವಾಚ್ಚ ಪ್ರಾಗುಕ್ತೋ ವಾ ಖಗೇಶ್ವರಃ
ಇತಿ ತೇ ಗರುಡವ್ಯೂಹ ಪ್ರಭಾವಃ ಸಂಪ್ರಕಾಶಿತಃ ॥

ಗರುಡಮೂರ್ತಿಯಲ್ಲಿ ಸತ್ಯ, ಸುಪರ್ಣ, ಗರುಡ, ತಾರ್ಕ್ಷ್ಯ, ವಿಹಗೇಶ್ವರ ಎಂಬ ಐದು ಭೇದಗಳಿವೆ. ಇವರನ್ನು ಪಂಚಾತ್ಮಕ ಗರುಡಮೂರ್ತಿ ಎನ್ನುತ್ತಾರೆ. ನಾಲ್ಕು ಮೂಲೆಗಳಲ್ಲೂ ನಾಲ್ವರು ಭೇದ ಮೂರ್ತಿಗಳಿರುತ್ತಾರೆ. ಇವರ ರೂಪಧ್ಯಾನವು ವಿಶೇಷವಾಗಿದ್ದು ಆ ವಿವರಣೆಯನ್ನು ಮುಂದೆ ಕೊಡಲಾಗಿದೆ. ಇವರೆಲ್ಲರೂ ಬಹು ಪೌರುಷವಂತರಾದುದರಿಂದ ದೃಢವಾದ ದೇಹ ಪುಷ್ಟಿ ಇರುವವರು. ಮಂದವಾದ ದೇಹ ಕಾಂತಿಯಲ್ಲಿ ಪ್ರಾಣವಾಯುವನ್ನೇ ಪ್ರಧಾನವಾಗಿ ಉಳ್ಳ ಸತ್ಯನಿಗೆ ಎರಡು ತೋಳುಗಳು. ಸುಪರ್ಣನು ಪದ್ಮರಾಗದ ಕಾಂತಿಯಲ್ಲಿ ನಿರ್ಮಲವಾದ ಬಂಗಾರದಂತೆ ಹೊಳೆಯು ಕಣ್ಣುಳ್ಳವನು. ಬಂಗಾರದ ಬಣ್ಣದ ಗರುಡನು ಗಂಟುಹಾಕಿದ ಕಣ್ಣುಹುಬ್ಬು ಪಡೆದಿರುತ್ತಾನೆ. ತಾರ್ಕ್ಷ್ಯನು ನೀರಿನಂತೆ ನೀಲವರ್ಣನಾಗಿರುತ್ತಾನೆ. ಕನಕವರ್ಣದ ನೇತ್ರಗಳನ್ನು ಪಡೆದಿರುವ ಐದನೆಯವನಾದ ವಿಹಗೇಶ್ವರನು ಹಲವು ವರ್ಣಗಳ ಚುಕ್ಕೆಗಳನ್ನು ಮೈಮೇಲೆ ಪಡೆದುಕೊಂಡಿರುತ್ತಾನೆ.

ಸುಪರ್ಣಾದಿಗಳಿಗೆ ನಾಲ್ಕು ತೋಳುಗಳು ಇರುವಂತೆ ರೂಪಿಸಬಹುದು. ಇವರೆಲ್ಲರೂ ರೆಕ್ಕೆಗಳನ್ನು ಪಡೆದಿರುತ್ತಾರೆ ಮತ್ತು ಹಕ್ಕಿಯ ಚರಣಗಳನ್ನು ಹೊಂದಿರುತ್ತಾರೆ. ದೊಡ್ಡದಾದ ಹೊಟ್ಟೆ, ಅಂದವಾದ ವಕ್ಷಪ್ರದೇಶ, ಕುಂಡಲಾದಿ ಆಭರಣಗಳಿಂದ ಅಲಂಕೃತವಾಗಿದ್ದು ಗುಂಡಾದ



ಚಿತ್ರ ೧೩೧ : ಗರುಡ - ೨

ಕಣ್ಣುಗಳನ್ನು ಹೊಂದಿರುತ್ತಾರೆ. ಮುಖವು ಬಿಳುಪಾಗಿದ್ದು ಬಹಳ ಬಲವಾದ ಬಾಯಿ ಪಡೆದಿರುತ್ತಾರೆ. ಇವರು ಕ್ರಮವಾಗಿ ಪಂಚ ಪ್ರಾಣವಾಯುಗಳಾದ ಪ್ರಾಣ, ಅಪಾನ, ವ್ಯಾನ, ಸಮಾನ, ಉದಾನಗಳ ಅಧಿಷ್ಠಾತೃಗಳು. ಐದೂ ಮಂದಿಯು ಮಹಾಬಲಕಾಯರು. ಬಾಯಿ ಕೆಂಪಾಗಿರುತ್ತದೆ. ಎರಡೂ ಹಸ್ತಗಳಲ್ಲಿ ಇವರು ಪಾತ್ರೆಯನ್ನು ಹಿಡಿದಿರುತ್ತಾರೆ. ಅಥವ ಪುಷ್ಪಾಂಜಲಿಯಲ್ಲಿರುತ್ತಾರೆ.

ಗರ್ಭಗೃಹದ ಗೋಡೆಗಳ ನಾಲ್ಕು ಮೂಲೆಗಳಲ್ಲೂ ಗರುಡಮೂರ್ತಿಗಳನ್ನು ರೂಪಿಸುವ ಪದ್ಧತಿಯುಂಟು. ಪಶ್ಚಿಮ ದಿಕ್ಕಿನ ಗೋಡೆಯ ದಕ್ಷಿಣಾಂತ್ಯಕ್ಕೆ ಸುಪರ್ಣಮೂರ್ತಿಯನ್ನೂ, ಮಂದಾರ ಪುಷ್ಪಗುಚ್ಛವನ್ನೂ ಒಂದು ಹಸ್ತದಲ್ಲಿ ಹಿಡಿದಿರುವಂತೆ, ಇನ್ನೊಂದು ಹಸ್ತದಲ್ಲಿ ವಿಸ್ಮಯಮುದ್ರೆ ಇರುವಂತೆ ರೂಪಿಸಬೇಕು. ಅದೇ ಗೋಡೆಯ ಉತ್ತರಾಂತ್ಯದಲ್ಲಿ ಈ ಹಸ್ತಗಳು ವಿರುದ್ಧವಾಗಿರುವಂತೆ ಗರುಡನನ್ನು ರೂಪಿಸಬೇಕು. ಈಶಾನ್ಯದಲ್ಲಿ ತಾರ್ಕ್ಷ್ಯನು, ಆಗ್ನೇಯದಲ್ಲಿ ಸತ್ಯನೂ ಇರಬೇಕು. ಐದನೆಯವನಾದ ವಿಹಗೇಶ್ವರನು ಬಲಹಸ್ತದಲ್ಲಿ ಸುಧಾ ಕುಂಭವನ್ನು ಎಡಹಸ್ತದಲ್ಲಿ ನಾಗನನ್ನು ಹೊತ್ತಿರಬೇಕು.

*ಈ ಐದು ಮಂದಿ ಗರುಡಮೂರ್ತಿಗಳನ್ನು ಗರುಡವ್ಯೂಹವೆನ್ನುತ್ತಾರೆ.* ಸತ್ಯನು ಪ್ರಾಣವಾಯುವಿಗೂ, ಸುಪರ್ಣನು ಅಪಾನವಾಯುವಿಗೂ, ಗರುಡನು ವ್ಯಾನವಾಯುವಿಗೂ, ತಾರ್ಕ್ಷ್ಯನು ಸಮಾನವಾಯುವಿಗೂ, ವಿಹಗೇಶ್ವರನು ಉದಾನವಾಯುವಿಗೂ ಅಧಿಷ್ಠಾತೃಗಳಾಗಿರುತ್ತಾರೆ. ಗರುಡನು ಪರಿವಾರದೊಂದಿಗೆ ಧ್ವಜವನ್ನು ಇರಿಸಿಕೊಂಡಿರಬಹುದು. ವ್ಯೂಹಮೂರ್ತಿಗಳಿಗೆ ನಾಲ್ಕು ಮಂದಿಗೆ ಈ ಗರುಡರು ಸತ್ಯನಿಂದ ತಾರ್ಕ್ಷ್ಯನ ತನಕ ಒಬ್ಬೊಬ್ಬಮೂರ್ತಿಗೆ ಒಬ್ಬೊಬ್ಬರು ಸೇರುತ್ತಾರೆ. ಎಂದರೆ ವ್ಯೂಹವಾಸುದೇವನಿಗೆ ಸತ್ಯನು, ಸಂಕರ್ಷಣನಿಗೆ ಸುಪರ್ಣನೂ, ಪ್ರದ್ಯುಮ್ನನಿಗೆ ಗರುಡನೂ, ಅನಿರುದ್ಧನಿಗೆ ತಾರ್ಕ್ಷ್ಯನೂ ಸೇರುತ್ತಾರೆ. ಪರಾವಾಸುದೇವನಿಗೆ ಐದನೇಯವನಾದ ವಿಹಗೇಶ್ವರನು ಸೇರುತ್ತಾನೆ. ಎಂದರೆ ಇವರು ಆಯಾಮೂರ್ತಿಗಳಿಗೆ ಭೃತ್ಯರಾಗಿರುತ್ತಾರೆ.

ದ್ವಾದಶ ಮೂರ್ತಿಗಳಿಗಾಗಲಿ, ಚತುರ್ದಶ ಮೂರ್ತಿಗಳಿಗಾಗಲಿ ನಾಲ್ವರು ಗರುಡರನ್ನು ಸತ್ಯನಿಂದ ತಾರ್ಕ್ಷ್ಯನವರೆವಿಗೂ ಮೂರ್ತಿಗಳ ಕ್ರಮದಲ್ಲಿಯೇ ಹಂಚಿಕೆಮಾಡಿ ಆ ಮೂರ್ತಿಯ ಗರುಡವಾಹನವನ್ನು ನಿರ್ಣಯಿಸಬೇಕು. ಅದನ್ನು ಹೀಗೆ ಪಟ್ಟಿಮಾಡಬಹುದು.

| ಕ್ರಮ | ಗರುಡ ವ್ಯೂಹ ಮೂರ್ತಿ | ಚತುರ್ವಿಂಶತಿ ಮೂರ್ತಿಗಳು | | | | | |
|---|---|---|---|---|---|---|---|
| ೧. | ಸತ್ಯ | ಕೇಶವ | ವಿಷ್ಣು | ಶ್ರೀಧರ | ಸಂಕರ್ಷಣ | ಪುರುಷೋತ್ತಮ | ಜನಾರ್ದನ |
| ೨. | ಸುಪರ್ಣ | ನಾರಾಯಣ | ಮಧುಸೂದನ | ಹೃಷೀಕೇಶ | ವಾಸುದೇವ | ಅಧೋಕ್ಷಜ | ಉಪೇಂದ್ರ |
| ೩. | ಗರುಡ | ಮಾಧವ | ತ್ರಿವಿಕ್ರಮ | ಪದ್ಮನಾಭ | ಪ್ರದ್ಯುಮ್ನ | ನರಸಿಂಹ | ಹರಿ |
| ೪. | ತಾರ್ಕ್ಷ್ಯ | ಗೋವಿಂದ | ವಾಮನ | ದಾಮೋದರ | ಅನಿರುದ್ಧ | ಅಚ್ಯುತ | ಶ್ರೀಕೃಷ್ಣ |

ಐದನೇಯವನಾದ ವಿಹಗೇಶ್ವರನು ವ್ಯೂಹಗಳನ್ನು, ಮೂರ್ತಿಗಳನ್ನು ಮೀರಿನಿಂತಿರುವ

ಪರಾ ವಾಸುದೇವನಿಗೆ ವಾಹನವಾಗಿರುತ್ತಾನೆ. ಅವನೂ ಪರಾವಾಸುದೇವನಂತೆ ಜಗದ್ರಕ್ಷಾಂಕ್ಷೆಯಿಂದಲೇ ತುಂಬಿರುತ್ತಾನೆ. ಆದ್ದರಿಂದ ಗರುಡವ್ಯೂಹ ಪ್ರಭಾವವು ಆಯಾಮೂರ್ತಿಗಳಿಗೆ ಸಮಾನವಾಗಿರುತ್ತದೆ.

(ಉ) ದ್ವಾರದ ಮುಂದೆ ಇರುವ ಗರುಡನು ಹೇಗಿರಬೇಕೆಂಬುದು ಪಾರಮೇಶ್ವರ ಸಂಹಿತೆ (೧೧ : ೨೧ - ೨೮)ಯಲ್ಲಿ ಈ ರೀತಿಯಾಗಿ ವಿವರಿಸಲಾಗಿದೆ :

**ಧ್ಯಾಯೇದ್ ದ್ವಾರಾಗ್ರದೇಶೇ ತು ಗರುಡಂ ಕಾಂಚನ ಪ್ರಭಮ್**
**ಕುಟಿಲ ಭ್ರೂ ಸುವೃತ್ತಾಕ್ಷಂ ಪಕ್ಷಮಂಡಲ ಮಂಡಿತಂ ॥**
**ಲಂಬೋದರಂ ಸುಪೀನಾಂಗಂ ಸರ್ವಭೂಷಣ ಭೂಷಿತಂ**
**ಮಕುಟಾದ್ಯೈರಲಂಕಾರೈರ್ನೂಪುರಾದ್ಯೈ ವಿರಾಜಿತಂ ॥**
**ನೀಲಂ ವಾಸಸಂ ವಸನಂ ನಾನಾಮಾಲ್ಯೋಪಶೋಭಿತಮ್**
**ಸಮ್ಮುಖಂ ದೇವದೇವಸ್ಯ ಭೂಗತಂ ವಿಧೃತಾಂಜಲಿಮ್ ॥**
**ದ್ವಿಭುಜಂ ತುಹಿನಾಭಂ ತು ಸತ್ಯಾಖ್ಯಂ ವಿಹಗಾಧಿಪಮ್**
**ಪ್ರಾಣಾಧಿದೈವತಂ ಚಕ್ರೇ ಬಲಿಮಂಡಲ ಮಧ್ಯಗೇ ॥**
**ಸಂಸ್ಥಿತಂ ಸರ್ವರೇತ್ಸರ್ವೈರಂಗೈ: ಪುರುಷರೂಪಿಣಮ್**
**ಪ್ರಲಂಬಮಾನ ಜಠರಂ ಪಕ್ಷಾಜವಿರಾಜಿತಮ್ ॥**
**ದಕ್ಷಿಣೇನ ಕರೇಣೈವ ಧಾರಯಂತಂ ಗಣತ್ರಕಮ್**
**ಉತ್ತಾನಿತೇತರಕರಂ ಕುಂಡಲಾದ್ಯೈರ್ವಿಭೂಷಿತಮ್ ॥**
**ನೀಲ ಕೌಶೇಯ ವಸನಂ ನೀಲಮಾಲ್ಯಾನುಲೇಪನಮ್**
**ಆನಾಸು ಕೋಲಾಭ್ಯಾಂ ನೇತ್ರಾಭ್ಯಾಂ ವೀಕ್ಷಮಾಣಂ ಸದಾ ವಿಭುಂ ॥**

ದ್ವಾರದ ಮುಂದೆ ಇರುವ ಗರುಡಮೂರ್ತಿಯು ಬಂಗಾರದ ಬಣ್ಣದ ಮೈಕಾಂತಿಯಿಂದ ಶೋಭಾಯಮಾನವಾಗಿರುತ್ತಾನೆ. ಪೊದರಾಗಿರುವ ಹುಬ್ಬುಗಳು, ಗುಂಡಾಗಿರುವ ಕಣ್ಣುಗಳು, ರೆಕ್ಕೆಗಳು ದೊಡ್ಡದಾಗಿ ಹೊಟ್ಟೆ, ಸುಂದರವಾದ ದೇಹವಿದ್ದು ಮಕುಟದಿಂದ ಅಲಂಕೃತನಾಗಿರುತ್ತಾನೆ. ನೂಪುರ, ಕಡಗ, ಬಳೆ, ಕೇಯೂರ ಇತ್ಯಾದಿ ಆಭರಣಗಳಿಂದ ಅಲಂಕೃತನಾಗಿರುತ್ತಾನೆ. ಬಗೆ ಬಗೆಯ ಮಾಲೆಗಳನ್ನು ಧರಿಸಿದ್ದು ನೀಲವರ್ಣದ ವಸ್ತ್ರಗಳನ್ನು ಧರಿಸಿರುತ್ತಾನೆ. ದೇವದೇವನಾದ ಮಹಾವಿಷ್ಣುವಿನ ಮುಂದೆ ಆತನನ್ನೇ ನೋಡುತ್ತಾ ಕೈಜೋಡಿಸಿಕೊಂಡು ನಿಂತಿರುತ್ತಾನೆ.

ಆಲಯದ ಬಲಿಮಂಡಲದ ಮಧ್ಯಭಾಗದಲ್ಲಿ ಪ್ರಾಣವಾಯುವಿನ ಅಧಿದೇವತೆಯಾದ ಸತ್ಯಎಂಬ ಹೆಸರಿನ ಗರುಡನು ಎರಡು ಭುಜಗಳನ್ನು ಹೊಂದಿದ್ದು ಮಂಜಿನ ಬಣ್ಣದ ದೇಹವನ್ನು ಪಡೆದಿದ್ದು ಎಲ್ಲಾ ಅಂಗಾಂಗಗಳಿಂದಲೂ ಪೂರ್ಣವಾದ ನರರೂಪವನ್ನು ಹೊಂದಿರುತ್ತಾನೆ. ಉದ್ದವಾದ ಜಠರ, ಬಲವಾದ ರೆಕ್ಕೆಗಳು, ಮೊನಚಾಗಿರುವ ಮೂಗು ಇರುತ್ತವೆ. ಬಲಹಸ್ತದಲ್ಲಿ ನೀರಿನ ಕಲಶವನ್ನು ಎಡಹಸ್ತವನ್ನು ಮೇಲಕ್ಕೆತ್ತಿ ಮೇಲ್ಮೊಗವಾಗಿರಿಸಿಕೊಂಡಿರುತ್ತಾನೆ. ಕುಂಡಲಗಳಿಂದ, ಬಗೆಬಗೆಯ ಆಭರಣಗಳಿಂದ ಅಲಂಕೃತನಾಗಿರುವ ಈ ಮೂರ್ತಿಯು ನೀಲ ವಸ್ತ್ರಗಳನ್ನು ಧರಿಸಿದ್ದು ನೀಲವರ್ಣದ

ಮಾಲೆಗಳನ್ನು ಧರಿಸಿರುತ್ತಾನೆ. ಈತನು ಯಾವದೇ ಕಡೆಗಿದ್ದರೂ ಈತನ ಕಣ್ಣು ಸದಾ ಸ್ವಾಮಿಯನ್ನೇ ನೋಡುತ್ತಿರುತ್ತದೆ.

(ಊ) ಗರುಡ ಮೂರ್ತಿಯ ಲಕ್ಷಣ ಮತ್ತು ತೋಳುಗಳ ಸಂಖ್ಯೆ ಮತ್ತು ಆಯುಧಗಳ ಬಗ್ಗೆ ಹಲವು ಬಗೆಯ ಧ್ಯಾನಗಳಿವೆ. ಕಾಶ್ಯಪ ಸಂಹಿತೆ (೨ : ೨ - ೨೬)ಯಲ್ಲಿ ವಿವರಗಳನ್ನು ನಾವು ಪರಿಶೀಲಿಸೋಣ

ಚಿಂತ ಯೇನ್ಮಧ್ಯಮಂ ದೇವಂ ಮಹಾಮೇರು ಸಮಪ್ರಭಮ್ ॥
ಆಜಾನುತಸ್ಸುವರ್ಣಾಭಮಾಕಟ್ಯಾಸ್ತುಹಿನ ಪ್ರಭಮ್
ಕುಂಕುಮಾರುಣಮಾಕಂಠಾದಾಕೇಶಾಂತಂ ಸಿತೇತರಮ್ ॥
ಸ್ವಸ್ತಿಕಂ ದಕ್ಷಿಣಂ ಪಾದಂ ವಾಮಪಾದಂ ತು ಕುಂಚಿತಮ್
ಪಾತಾಲಸ್ಪರ್ಶಿಪಾದಾಗ್ರಂ ಬ್ರಹ್ಮಾಂಡಗತಮೌಲಿನಮ್ ॥
ನೀಲೋಗ್ರನಾಸಿಕಾವಕ್ತ್ರಂ ತ್ರಿಯಕ್ಷಂ ಚಾರುಕುಂಡಲಮ್
ದಂಷ್ಟ್ರಾ ಕರಾಲವದನಂ ಕಿರೀಟಮಕುಟೋಜ್ವಲಮ್ ॥
ಸರ್ವಾಭರಣ ಸಂಯುಕ್ತಂ ಸರ್ವಾವಯವ ಸುಂದರಮ್
ಕಪಿಲಾಕ್ಷಂ ಗರುತ್ಮಂತಂ ಸುವರ್ಣಸದೃಶ ಪ್ರಭಮ್ ॥
ದೀರ್ಘ ಬಾಹುಂ ಬೃಹತ್ ಸ್ಕಂಧಂ ನಾಗಾಭರಣ ಭೂಷಿತಮ್
ಅನಂತೋ ವಾಮ ಕಟಕೋ ಯಜ್ಞಸೂತ್ರಂ ತು ವಾಸುಕಿಃ ॥
ತಕ್ಷಃ ಕಟಿಸೂತ್ರಂ ತು ಹಾರಃ ಕಾರ್ಕೋಟಕ ಸ್ಮೃತಃ
ಪದ್ಮೋ ದಕ್ಷಿಣಕರ್ಣೇ ತು ಮಹಾಪದ್ಮಸ್ತು ವಾಮತಃ ॥
ಶಂಖಃ ಶಿರಃ ಪ್ರದೇಶೇ ತು ಗುಲಿಕಾಸ್ತು ಭುಜಂತರೇ
ಇತ್ಯೇವಂ ಭೂಷಣೈರ್ಯುಕ್ತಂ ಮಹಾಪದ್ಮಸ್ಥಿತಂ ಪ್ರಭುಮ್ ॥
ಮಹಾಪಕ್ಷಂ ಮಹಾಸತ್ತ್ವಂ ಮಂದಸ್ಮಿತ ಮುಖಾಂಬುಜಮ್
ಅಷ್ಟ ಬಾಹುಧರಂ ದೇವ ಮಷ್ಟಾಯುಧ ವಿಭೂಷಿತಮ್ ॥
ಶಂಖಂ ಚಕ್ರಂ ಸುಧಾಕುಂಭಂ ನಾಗಮುಷ್ಟಿಂ ಗದಾಮಸಿಮ್
ಭಗವತ್ಪಾದ ವಿನ್ಯಸ್ತ ಕರಮಷ್ಟಭುಜಂ ಕ್ರಮಾತ್ ॥
ಸ್ಕಂಧೇ ನಿಧಾಯ ಲಕ್ಷ್ಮೀಶಂ ಕಾಲಮೇಘಮಿವೋತ್ಥಿತಮ್
ಚತುರ್ಬಾಹು ಮುದಾರಾಂಗಂ ಪುಂಡರೀಕಾಯತೇಕ್ಷಣಮ್ ॥
ಸರ್ವಾಭರಣ ಸಂಪನ್ನಂ ಶಂಖಚಕ್ರಗದಾಧರಮ್
ವರದಾಭಯ ಹಸ್ತಂ ಚ ಪೀತಾಂಬರಧರಂ ವಿಭುಮ್ ॥
ವಾಮಾಂಕೇ ಸಂಸ್ಮರೇಲ್ಲಕ್ಷ್ಮೀಂ ಪೀತವರ್ಣಾಂ ಶುಚಿಸ್ಮಿತಾಮ್
ಆಲಿಂಗಯ ದಕ್ಷಿಣಕರೇ ವಾಮೇ ಪಂಕಜಧಾರಿಣೀಮ್ ॥
ಶುಕ್ಲಮಾಲ್ಯಂಬರಧರಾಂ ಸರ್ವಾಭರಣ ಭೂಷಿತಾಮ್
ಉದಿಯಾಯ ಯಥಾ ಮೇರುಃ ಸವಿದ್ಯುದ್ವಾರಿದಂ ವಹನ್ ॥
ಧ್ಯಾತ್ವೈವಂ ಮಧ್ಯಮೇ ಭಾಗೇ ಸ್ಥಿತಮಾಸೀನ ಮೇವ ವಾ

ದ್ವಿಭುಜಂ ಪೂರ್ವದಿಗ್ಭಾಗೇ ಕೃತಾಂಜಲಿಪುಟಂ ವಿಭುಮ್ ||
ಪೀತಾಭಂ ಶುಕ್ಲವಸನಂ ಸರ್ವಾಭರಣ ಭೂಷಿತಮ್
ಸುಪರ್ಣಾಂ ಸುಮುಖಂ ಪೂರ್ಣಾಂ ಸ್ಥಿತಮಾಸೀನಮೇವ ವಾ ||
ದಕ್ಷಿಣೇ ಷೋಡಶಭುಜಂ ಗರುಡಂ ಭೀಮವಿಗ್ರಹಮ್
ಭೀಮಾಕ್ಷಂ ಭೀಮವದನಂ ರಕ್ತಾಭಂ ಕೃಷ್ಣವಾಸಸಮ್ ||
ಭೀಮಾಟ್ಟಹಾಸ ಸಂಯುಕ್ತಂ ದಂಷ್ಟ್ರಾದಿ + ಭಯಾನಕಮ್
ಕೃಷ್ಣ ಮಾಲ್ಯಾನುಲೇಪಂ ಚ ಸ್ಥಿತಮಾಸೀನಮೇವ ವಾ ||
ಪ್ರೊಧ್ಯದ್ಧಸ್ತೈರ್ದಧಾನಂ ರಥ ಚರಣಹವೀ ಸೋಮಕುಂಭಂ ಪಿನಾದ್ರಿಂ
ಸ್ಸಕ್ತ ತ್ಪರ್ಣಂ ಚ ಖೇಟಂ ಮುಸಲಮಪಿ ಸ್ವಣೀಂ ದಕ್ಷಿಣೇ ಲಂಬಿತಾ ಗ್ರ್ಯಃ ||
ವಾಮೈ ಶ್ಯಂಖಂ ಶತಾಶ್ರಂ ಪ್ರಚಲಿತ ತುಪಿಂ ಚಾಯಸಂ ದಂಡಮುಗ್ರಂ
ಶ್ಯೇನಾಸ್ಯಂ ಮುಷ್ಟಿಮುದ್ರೇ ಗುಣಮಪಿ ಜವನಂ ಚಿಂತ ಯೇದ್ರಕ್ತಪದ್ಮೇ ||
ಪಶ್ಚಿಮೇ ವೈನತೇಯಾಖ್ಯಂ ಸಿತಂ ಬಾಹು ಚತುಷ್ಟಯಮ್
ಶ್ವೇತಾಂಬರಧರಂ ಸೌಮ್ಯಂ ಶ್ವೇತಮಾಲ್ಯಾನು ಲೇಪನಮ್ ||
ನಾಗಪಾಶಂ ಸುಧಾಕುಂಭಂ ಶಂಖಚಕ್ರೇ ವಹನ್ ಭುಜೈಃ
ಸಿತ ಪಂಕಜಮಧ್ಯಸ್ಥಂ ಸ್ಥಿತಮಾಸೀನಮೇವ ವಾ ||
ಉತ್ತರೇ ಸಂಸ್ಮರೇತ್ ತಾರ್ಕ್ಷ್ಯಂ ರಕ್ತಾಭಂ ಚಿತ್ರವಾಸಸಮ್
ಷಡ್ಭುಜಂ ಶಂಖ ಚಕ್ರೇ ಚ ಶತಪತ್ರಾಗ್ನಿಮೇವ ಚ ||
ಶ್ವೇತಾಚಲಂ ತರ್ಜನೀಂ ಚ ತಲಪ್ರಹರಮೇವ ಚ
ಮುಕುಟಾದಿವಿಭೂಷಾಂಗಂ ಚಿತ್ರಮಾಲ್ಯಾನು ಲೇಪನಮ್ ||
ಧ್ಯಾಯೇತ್ ಪಂಕಜ ಮಧ್ಯಸ್ಥಂ ಸ್ಥಿತಮಾಸೀನ ಮೇವ ವಾ

ಮಹಾಮೇರುವಿನಂತೆ ಕಾಂತಿವಂತನಾಗಿರುವ ಮಧ್ಯಮ ವರ್ಗದ ದೇವನಾಗಿರುವ ಗರುಡಮೂರ್ತಿಯನ್ನು ಧ್ಯಾನಿಸು. ಮೊಣಕಾಲುಗಳವರೆವಿಗೂ ಬಂಗಾರದ ಬಣ್ಣ. ಸೊಂಟದತನಕ ಮಂಜಿನ ಬಣ್ಣ. ಅಲ್ಲಿಂದ ಕಂಠದ ವರೆವಿಗೂ ಕೆಂಪುಬಣ್ಣ. ಮುಖದಿಂದ ಕೇಶಾಂತದವರೆವಿಗೂ ಬಿಳಿಬಣ್ಣ. ಬಲ ಪಾದವನ್ನು ಸ್ವಸ್ತಿಕದಲ್ಲಿರಿಸಿ ಎಡ ಪಾದದಲ್ಲಿ ಸ್ವಲ್ಪ ಬಗ್ಗಿಸಿ ಇರಿಸಿದ್ದು ಗರುಡಾಸನದಲ್ಲಿರುವ ಈ ಮೂರ್ತಿಯ ಪಾದಗಳು ಪಾತಾಳವನ್ನೂ, ತಲೆಯು ಆಕಾಶವನ್ನು ಸ್ಪರ್ಶಿಸುತ್ತಿರುತ್ತವೆ. ಮೂಗು ಮೊನಚಾಗಿ ಕೊಕ್ಕಿನಂತಿದ್ದು ನೀಲವರ್ಣದಲ್ಲಿರುತ್ತದೆ. ಮೂರು ನೇತ್ರಗಳು, ಸುಂದರವಾದ ಕುಂಡಲಗಳು, ಕೋರೆಯಹಲ್ಲುಗಳು, ಕರಾಳವಾದ ಮುಖ, ಕಿರೀಟ ಎಲ್ಲಾ ಆಭರಣಗಳು ಧರಿಸಿ ಅಲಂಕೃತನಾಗಿದ್ದು ಸಕಲ ಅವಯವಗಳನ್ನು ಪಡೆದುಕೊಂಡು ಸುಂದರವಾಗಿರುತ್ತಾನೆ. ನೀಳವಾದ ಬಾಹುಗಳು. ವಿಸ್ತಾರವಾದ ಭುಜಗಳು. ನಾಗಗಳನ್ನು ಆಭರಣಗಳಾಗಿ ಧರಿಸಿರುತ್ತಾನೆ. ಎಡ ಮುಂಗೈ ಕಟಕವಾಗಿ ಅನಂತನೂ, ವಾಸುಕಿಯು ಯಜ್ಞೋಪವೀತವಾಗಿಯೂ, ಕಟಿಸೂತ್ರವಾಗಿ ತಕ್ಷಕನೂ, ಕಾರ್ಕೋಟಕನು ಮಾಲೆಯಾಗಿಯೂ, ಎಡಗಿವಿಯಲ್ಲಿ ಮಹಾಪದ್ಮನನ್ನು, ಬಲಗಿವಿಯಲ್ಲಿ ಪದ್ಮನನ್ನು ಕುಂಡಲಗಳಾಗಿ ತೂಗಿಹಾಕಿಕೊಂಡಿರುತ್ತಾನೆ. ಶಂಖನು ಶಿರ

ಪ್ರದೇಶದಲ್ಲಿರುತ್ತಾನೆ. ಗುಳಿಕನನ್ನು ಭುಜಗಳಮೇಲೆ ಧರಿಸಿರುತ್ತಾನೆ. ಸ್ವಾಮಿಯು ಈ ರೀತಿ ಅಲಂಕೃತನಾಗಿರುತ್ತಾನೆ.

ಬಹು ಬಲಶಾಲಿಯಾದ ಈತನು ಬಲವಾದ ರೆಕ್ಕೆಗಳನ್ನು ಪಡೆದಿರುತ್ತಾನೆ. ಕಿರುನಗೆಯಿರುವ ಮುಖ ಪದ್ಮದ ಈ ಸ್ವಾಮಿಯು ಅಷ್ಟಬಾಹುಗಳನ್ನು ಪಡೆದಿದ್ದು ಎಂಟು ಆಯುಧಗಳನ್ನು ಧರಿಸಿರುತ್ತಾನೆ. ಶಂಖ, ಚಕ್ರ, ಅಮೃತಕುಂಭ, ನಾಗ, ಮುಷ್ಟಿ, ಗದೆ, ಕತ್ತಿ, ಭಗವಂತನ ಪಾದದತ್ತ ಚಾಚಿರುವ ಒಂದು ಹಸ್ತ ಹೀಗೆ ಎಂಟು ಹಸ್ತಗಳಿರುತ್ತವೆ.

ನಾಲ್ಕು ತೋಳುಗಳನ್ನು ಪಡೆದು ಪುಂಡರೀಕಾಕ್ಷನನ್ನು ನೋಡುತ್ತಿರುವ ಈ ಮೂರ್ತಿಯು ಸರ್ವಾಭರಣಾಲಂಕೃತನಾಗಿದ್ದು ವರದ ಅಭಯ ಹಸ್ತಗಳನ್ನು ಪಡೆದಿದ್ದು ಶಂಖ ಚಕ್ರ ಗದೆಗಳನ್ನು ಪಡೆದಿರಬಹುದು.

ಎರಡೇ ತೋಳುಗಳನ್ನು ಪಡೆದಿರುವಾಗ ಕೈಜೋಡಿಸಿಕೊಂಡು ಪೂರ್ವಭಾಗದಲ್ಲಿ ಬಂಗಾರದ ಮೈಬಣ್ಣದ ಕಾಂತಿಯಲ್ಲಿ, ಬಿಳಿಯ ವಸ್ತ್ರಗಳನ್ನು ತೊಟ್ಟು ಸಕಲಾಭರಣಗಳಿಂದ ಅಲಂಕೃತನಾಗಿರುತ್ತಾನೆ.

ಸುಪರ್ಣನು ಹದಿನಾರು ತೋಳುಗಳನ್ನು ಪಡೆದಿದ್ದು ನಿಂತು ಅಥವ ಕುಳಿತಿರುತ್ತಾನೆ. ಗರುಡನು ಮಹಾಕಾಯನಾಗಿರುತ್ತಾನೆ. ಕಣ್ಣು, ಮುಖಗಳು ಬಹು ದೊಡ್ಡದಾಗಿದ್ದು ರಕ್ತವರ್ಣದ ಕಾಂತಿಯಿಂದ ಹೊಳೆಯುತ್ತಿರುತ್ತಾನೆ. ಕಪ್ಪುವರ್ಣದ ಬಟ್ಟೆಗಳನ್ನು ಧರಿಸಿರುತ್ತಾನೆ. ಭಯಂಕರವಾದ ಅಟ್ಟಹಾಸದಿಂದ ಕೋರೆಗಳಿಂದ ಭಯವನ್ನು ಹುಟ್ಟಿಸುವಂತಹ ಭೀಮಾಕಾರದಲ್ಲಿರುತ್ತಾನೆ. ಕಪ್ಪುಬಣ್ಣದ ಮಾಲೆಗಳನ್ನು ಧರಿಸಿರುತ್ತಾನೆ. ಈ ಮೂರ್ತಿಯು ಧರಿಸಿರುವ ಆಯುಧಗಳು ಇವು : ವಜ್ರ, ಸೋಮಕುಂಭ, ಶ್ವೇತ ಪರ್ವತ, ಸರ್ಪ, ಖೇಟಕ, ಮುಸಲ, ಅಂಕುಶಗಳು ಬಲಹಸ್ತಗಳಲ್ಲಿರುತ್ತವೆ. ಎಡಪಾರ್ಶ್ವದಲ್ಲಿರುವ ಹಸ್ತಗಳಲ್ಲಿ ಶಂಖ,ಮಿಂಚಿನ ಗೊಂಚಲು, ಈಟಿ, ದಂಡ, ಗಿಡುಗನ ಮುಖ, ಮುಷ್ಟಿ ಮುದ್ರೆ, ಪಾಶ ಮತ್ತು ಕೆಂಪು ಪದ್ಮ ಇರುತ್ತವೆ.

ಪಶ್ಚಿಮದಲ್ಲಿ ವೈನತೇಯನೆಂಬ ಹೆಸರಿನ ನಾಲ್ಕು ತೋಳುಗಳುಳ್ಳ ಬಿಳಿಬಣ್ಣದ ಕಾಂತಿಯಿಂದ ಶೋಭಾಯಮಾನವಾಗಿರುವ ಬಿಳಿಯ ಉಡುಪು ಧರಿಸಿರುವ ಸೌಮ್ಯರೂಪದ ಮೂರ್ತಿಇರುತ್ತಾನೆ. ಈ ಮೂರ್ತಿಯು ನಾಗ, ಪಾಶ, ಸುಧಾಕುಂಭ, ಶಂಖ, ಚಕ್ರಗಳನ್ನು ಕೈಗಳಲ್ಲಿ ಧರಿಸಿರುತ್ತಾನೆ. ಈತನು ಪದ್ಮದ ಮಧ್ಯೆ ನಿಂತಿರಬಹುದು ಅಥವ ಕುಳಿತಿರಬಹುದು.

ಉತ್ತರಭಾಗದಲ್ಲಿ ಕೆಂಪುವರ್ಣದ ಮೈಕಾಂತಿಯಿಂದ ಶೋಭಾಯಮಾನವಾಗಿರುತ್ತಾನೆ. ತಾರ್ಕ್ಷ್ಯನು. ಈತನಿಗೆ ಆರು ಭುಜಗಳು. ಶಂಖ, ಚಕ್ರ, ಅಗ್ನಿ, ಶ್ವೇತಾಚಲ, ತರ್ಜನೀಹಸ್ತ ಮತ್ತು ಎತ್ತಿರುವ ಕೈ. ಈ ಕೈಯ ಹಸ್ತತಲವು ಮೇಲ್ಮುಖವಾಗಿರಬೇಕು. ಮುಕುಟಾದಿ ಆಭರಣಗಳಿಂದ, ಮಾಲೆಗಳಿಂದ ಅಲಂಕೃತ ನಾಗಿರುತ್ತಾನೆ.

**(ಕು) ಧ್ವಜ ಮಧ್ಯೇ ಲಿಖೇದ್ವೇವಂ ಗರುಡಂ ಸರ್ಪಭೂಷಣಮ್**
**ಗಗನೇ ಗಮನಾಕಾರಂ ಪಕ್ಷವಿಕ್ಷೇಪಣಾನ್ವಿತಮ್ ||**
**ಕುಂಚಿತಂ ವಾಮಪಾದಂ ತು ದಕ್ಷಿಣಂ ಪೃಷ್ಠತಃ ಸ್ಥಿತಮ್**
**ಪುಷ್ಪಾಂಜಲಿ ಪುಟಂ ರೌದ್ರ ವೃತ್ತಾಕ್ಷಂ ಕಿಂಚಿದಾಯತಮ್ ||**

**ನೀಲಾಗ್ರ ನಾಸಿಕಯುಕ್ತಂ ಶಾಂತಂ ಪ್ರಹಸಿತಾನನಮ್**
**ಕರಂಡಮಕುಟಂ ಚೈವ ಹಾರಕೇಯೂರ ಸಂಯುತಮ್ ||**
**ಕೃತ + + ಕಟಿಸೂತ್ರಂ ಪಾದ ಕಿಂಕಿಣಿ ಶೋಭಿತಮ್**
**ಅಂಗುಲೀವಲಯಂ ಚೈವ ಪ್ರಕೋಷ್ಠ ವಲಯಂ ತಥಾ ||**
**ಮಂಡಲೇ ಚೋಪವೀತಂ ಚ ಪುಷ್ಪ ಮಾಲಾಸಮಾವೃತ್ತಮ್**
**ತಪ್ತ ಹಾಟಕ ವರ್ಣಾಭಂ ಗರುಡಂ ನವತಾಲಕಮ್ ||**
**ಪಿಂಗಲಾಕ್ಷಂ ಗರುತ್ಮಂತಂ ಸುವರ್ಣ ಸದೃಶಪ್ರಭಮ್**
**ದೀರ್ಘಬಾಹುಂ ಬೃಹತ್ಸ್ಕಂಧಂ ನಾಗಾಭರಣ ಭೂಷಿತಮ್**
**ಅನಂತೋ ವಾಮಕಟಕಂ ಯಜ್ಞಸೂತ್ರಂ ವಾಸುಕಿಃ ||**
**ತಕ್ಷಃ ಕಟಿಸೂತ್ರಂ ತು ಹಾರಃ ಕರ್ಕೋಟಕಸ್ತಥಾ**
**ಪದ್ಮೋ ದಕ್ಷಿಣ ಕರ್ಣೇ ತು ಮಹಾಪದ್ಮಸ್ತು ವಾಮತಃ**
**ಶಂಖಃ ಶಿರಃ ಪ್ರದೇಶೇ ತು ಗುಲಿಕಸ್ತು ಭುಜಾಂತರೇ ||**

(ವಸಿಷ್ಠ ಸಂಹಿತೆ, ೧೨ : ೫೭ - ೬೪)

ಆಲಯದ ಧ್ವಜಸ್ತಂಭದಲ್ಲಿ ಸರ್ಪಭೂಷಣನಾದ ಗರುಡಮೂರ್ತಿಯನ್ನು ರೂಪಿಸಬಹುದು. ಗಗನದಲ್ಲಿ ಹಾರಿಹೋಗುತ್ತಾ ರೆಕ್ಕೆಗಳನ್ನು ಆಡಿಸುತ್ತಿರುವಂತೆ ರೂಪಿಸಬಹುದು.

ಎಡ ಮೊಣಕಾಲನ್ನು ಮಡಚಿ ಪಾದವನ್ನು ನೆಲದ ಮೇಲೆ ಊರಿಕೊಂಡು ಬಲ ಮೊಣಕಾಲನ್ನು ನೆಲದದಮೇಲೆ ಊರಿ ನಿಂತಿರುವ ಮುಂಗಾಲು ಮತ್ತು ಪಾದ ಹಿಂದೆ ಇರುತ್ತವೆ ಈ ಆಸನವನ್ನು ಗರುಡಾಸನವೆಂದೇ ಕರೆಯುತ್ತಾರೆ. ಗರುಡನು ಈ ರೀತಿಯ ಗರುಡಾಸನದಲ್ಲಿರುತ್ತಾನೆ.

ಈ ಮೂರ್ತಿಯು ಪುಷ್ಪಾಂಜಲಿಯಲ್ಲಿರುತ್ತಾನೆ. ಕಣ್ಣು ರೌದ್ರ ಭಾವದಿಂದ ತುಂಬಿದ್ದು ವೃತ್ತಾಕಾರವಾಗಿ ವಿಶಾಲವಾಗಿರುತ್ತದೆ. ಮೊನಚಾಗಿರುವ ಕೊಕ್ಕು ಮೂಗು ನೀಲಿಯಾಗಿರುತ್ತದೆ. ಕಿರುನಗೆ ತುಂಬಿರುವ ಶಾಂತ ಮುಖಮುದ್ರೆಯ ಈ ಮೂರ್ತಿ ಕರಂಡ ಮಕುಟವನ್ನು ಧರಿಸಿರುತ್ತಾನೆ. ಹಾರ, ಕೇಯೂರಗಳಿಂದ, ಕಟಿಸೂತ್ರ, ಪಾದ ಕಿಂಕಿಣಿಗಳಿಂದ ಉಂಗುರ, ಕಡಗ, ಅಂದಿಗೆಗಳಿಂದ, ಪುಷ್ಪಮಾಲೆ, ಯಜ್ಞೋಪವೀತಗಳಿಂದ ಅಲಂಕೃತನಾಗಿರುತ್ತಾನೆ. ಕಾದಿರುವ ಚಿನ್ನದ ಬಣ್ಣದಲ್ಲಿರುವ ಗರುಡ ಮೂರ್ತಿಯನ್ನು ನವತಾಲದಲ್ಲಿ ರೂಪಿಸಬೇಕು. ಈತನ ಕಣ್ಣಿನ ಬಣ್ಣ ಪಿಂಗಳ. ಮೈ ಬಂಗಾರದ ಬಣ್ಣ, ಉದ್ದವಾದ ಬಾಹುಗಳು, ಬಲವಾದ ವಿಶಾಲ ಭುಜಗಳು ಇದ್ದು ನಾಗಾಭರಣದಿಂದ ಅಲಂಕೃತನಾಗಿರುತ್ತಾನೆ. ವಾಸುಕಿಯನ್ನು ಯಜ್ಞೋಪವೀತವನ್ನಾಗಿಯೂ, ಅನಂತನನ್ನು ಎಡ ಮುಂಗೈಯಲ್ಲಿ ಕಟಕವಲಯವಾಗಿಯೂ, ಕಟಿಸೂತ್ರಕ್ಕೆ ತಕ್ಷಕನನ್ನೂ, ಕಾರ್ಕೋಟಕನನ್ನು ಹಾರವನ್ನಾಗಿಯೂ, ಬಲಗಿವಿಯಲ್ಲಿ ಕುಂಡಲವಾಗಿ ಪದ್ಮನನ್ನು, ಎಡಗಿವಿಯಲ್ಲಿ ಕುಂಡಲವಾಗಿ ಮಹಾಪದ್ಮನನ್ನು, ಶಿರೋಭಾಗದಲ್ಲಿ ಶಂಖನನ್ನು, ಗುಲಿಕನನ್ನು ಭುಜಗಳ ಮೇಲೂ ಧರಿಸಿರುತ್ತಾನೆ.



ಚಿತ್ರ ೧೩೨ : ಗರುಡ - ೩

(ಪೂ) ಧ್ವಜಂ ತು ಗರುಡಾಕಾರ ಮೇಕ ಮೂರ್ತೇಸ್ತು ಸತ್ತಮಾ:
ಸತ್ಯ: ಸುಪರ್ಣೋ ಗರುಡಸ್ತಾರ್ಕ್ಷ್ಯಶ್ಚ ಚತುರಾತ್ಮನ: ॥
ಪಂಚಮೂರ್ತ್ಯೇಸ್ತು ಚತ್ವಾರೋ ವಿಹಗೇಶ್ವರ ಸಂಯುತಾ:
ಸುಪರ್ಣಾಕಾಲಮಕರರೂಪಾ ವಾ ಚತುರಾತ್ಮನ: ॥
ತತ ಊರ್ಧ್ವಂ ತು ಸರ್ವೇಷಾಂ ವ್ಯೂಹಾನಾಂ ಗರುಡೋ ಧ್ವಜ:
ಪಟಮಧ್ಯೇ ತು ಗರುಡಂ ದ್ವಿಭುಜಂ ವಿಧೃತಾಂಜಲಿಮ್ ॥
ಪುಷ್ಪಾಂಜಲಿ ಪುಟಂ ಚಾಥ ಸುವರ್ಣಾಚಲ ಸನ್ನಿಭಮ್
ಗಗನೇ ಗಮನಾರಂಭ ಪಕ್ಷ ವಿಕ್ಷೇಪಣಾನ್ವಿತಮ್ ॥
ಕುಂಚಿತೋ ವಾಮಪಾದಸ್ತು ದಕ್ಷಿಣ: ಪೃಷ್ಠತ: ಸ್ಥಿತ:
ಕಿಂಚಿದಾಯತ ವೃತ್ತಾಕ್ಷಂ ನೀಲದೀರ್ಘಾಗ್ರ ನಾಸಿಕಮ್ ॥
ಅತೀವ ಶಾಂತವೇಷಂ ತು ತಥಾ ಪ್ರಹಸಿತಾನನಮ್
ಬಾಲಚಂದ್ರ ಸಮಾಕಾರಂ ದಂಷ್ಟ್ರಾದ್ವಯ ವಿರಾಜಿತಮ್ ॥
ಕುಟಿಲ ಭ್ರುಕುಟಿಭಂಗಂ ಭಂಗುರಾಲಕಶೋಭಿತಮ್
ಕಂಬುಗ್ರೀವಂ ಬೃಹದ್ಬಾಹುಂ ಪೀನಾಸಂ ದೃಢವಕ್ಷಸಮ್ ॥
ಪೃಥುದರಂ ನಿಮ್ನ ನಾಭಿಂ ರೋಮರಾಜಿವಿರಾಜಿತಮ್
ಸುವೃತ್ತಕ ನಕಸ್ತಂಭ ಪೀವರೋರುದ್ವಯಾನ್ವಿತಮ್ ॥
ಹೇಮ ರಂಭಾಸಮಾಕಾರ ಜಂಘಾಕಾಂತ ಪದದ್ವಯಮ್
ಕರಂಡ ಮುಕುಟಾಕ್ರಾಂತ ಪುಷ್ಪಾಪೀಡವಿರಾಜಿತಮ್ ॥
ವೃತ್ತೇ ವೈಪುಲ್ಯಮಾನೇನ ಲೋಚನೇ ಪದ್ಮಪತ್ರವತ್
ಭ್ರೂಯುಗ್ಮಂ ತಾರಸಿಂಹೋತ್ಥಂ ಘ್ರಾಣಾಗ್ರಂ ಶುಕತುಂಡವತ್ ॥
ಸಿಂಹವನ್ಮಧ್ಯದೇಶಸ್ತು ತದ್ವಂಶಂ ಗಜಪೃಷ್ಠವತ್
ತದೇವಂ ದ್ವೈವ ದೀರ್ಘೇಣ ವಿಸ್ತೃತಂ ಹಂಸ ಪಕ್ಷವತ್ ॥
ಸ್ವಪಕ್ಷಮಾನಾದಿ ಗುಣಂ ತತ್ಪುಚ್ಛಂ ಶತಶಾಖಿನಮ್
ಸರ್ವೇಷಾಮೇವ ಸಾಮಾನ್ಯಂ ವಿಶೇಷಾಖ್ಯಮಥೋಚ್ಯತೇ ॥

(ಈಶ್ವರ ಸಂಹಿತೆ, ೧೦ : ೨೩೬ - ೨೬೧)

ಧ್ವಜಸ್ತಂಭದಲ್ಲಿ ಒಬ್ಬನೇ ಗರುಡಮೂರ್ತಿ ಇರಬಹುದು. ಅಥವ ನಾಲ್ವರು ಗರುಡಮೂರ್ತಿಗಳನ್ನೂ ಸತ್ಯನಿಂದ ತಾರ್ಕ್ಷ್ಯನವರೆಗೆ ಧ್ವಜಸ್ತಂಭದ ಮೇಲೆ ಮೂಡಿಸಬಹುದು. ಆಗ ಅದನ್ನು ಗರುಡ ಚತುರ್ವ್ಯೂಹ ಎನ್ನುತ್ತಾರೆ.

ಧ್ವಜದ ಮೇಲೆಯೇ ಐದೂ ಮೂರ್ತಿಗಳನ್ನು ರೂಪಿಸಬಹುದು. ಪೂರ್ವೋಕ್ತ ನಾಲ್ವರೊಂದಿಗೆ ಐದನೆಯ ವಿಹಗೇಶ್ವರನನ್ನು ಸೇರಿಸಿ ರೂಪಿಸಬಹುದು. ನಾಲ್ವರು ನಾಲ್ಕು ದಿಕ್ಕುಗಳಿಗೆ ಮುಖಮಾಡಿದ್ದರೆ ಐದನೆಯ ವಿಹಗೇಶ್ವರನು ಊರ್ಧ್ವದಿಕ್ಕಿನಲ್ಲಿದ್ದು (ಮೇಲಿದ್ದು) ನಾಲ್ವರಿಗೂ ಅಧಿಷ್ಠಾತೃವಾಗಿರುತ್ತಾನೆ. ಮಧ್ಯದಲ್ಲಿರುವ ಗರುಡನು ಎರಡೇ ತೋಳುಗಳನ್ನು ಪಡೆದಿದ್ದು ಪುಷ್ಪಾಂಜಲಿಬದ್ಧನಾಗಿ ಬಂಗಾರದ ಮೈ ಬಣ್ಣದಲ್ಲಿರುತ್ತಾನೆ.

ಆತನು ರೆಕ್ಕೆಗಳನ್ನು ಆಡಿಸುತ್ತಾ ಆಕಾಶದಲ್ಲಿ ಹಾರುತ್ತಿರುವಂತೆ ಭಾಸವಾಗಬೇಕು. ಬಲಮೊಣಕಾಲೂರಿಕೊಂಡು ಎಡಗಾಲನ್ನು ಮಡಚಿ ಎತ್ತಿ ಪಾದವನ್ನು ಊರಿರುತ್ತಾನೆ. ಈ ಆಸನವನ್ನು ಗರುಡಾಸನ ಎಂದೇ ಕರೆಯುತ್ತಾರೆ. ಆಯತಾಕಾರದಲ್ಲಿರುವ ಕಣ್ಣುಗಳು ದೊಡ್ಡದಾಗಿರುತ್ತವೆ. ಮೂಗು ಉದ್ದವಾಗಿ ನೀಲವಾಗಿರುತ್ತವೆ. ಬಹು ಶಾಂತವಾಗಿರುವ ಮುಖದಲ್ಲಿ ಕಿರುನಗೆಯು ಮಿಂಚಿರುತ್ತದೆ. ಎರಡು ಕೋರೆಹಲ್ಲುಗಳು ಬಾಲಚಂದ್ರನಂತೆ ಮುಖ ಮಂಡಲದಲ್ಲಿ ಬೆಳಗುತ್ತಿರುತ್ತವೆ. ಹುಬ್ಬುಗಳು ಪೊದರಾಗಿರುತ್ತವೆ. ಕಂಠವು ಶಂಖದಂತೆ ಇರುತ್ತದೆ. ಬಾಹುಗಳು ಬೃಹತ್ತಾಗಿಯೂ, ವಕ್ಷಗಳು ಧೃಢವಾಗಿಯೂ, ನಾಭಿಯ ಅಡಿಭಾಗವು ರೋಮದಿಂದ ತುಂಬಿರುತ್ತದೆ. ದೊಡ್ಡದಾದ ಎರಡು ಬಂಗಾರದ ಸ್ತಂಭಗಳಂತೆ ತೊಡೆಗಳು ಕಾಣಿಸುತ್ತವೆ. ತಲೆಯ ಮೇಲೆ ಕರಂಡ ಮಕುಟವಿರುತ್ತದೆ. ಪಾದಗಳ ಅಡಿಯಲ್ಲಿ ಪದ್ಮಪೀಠ ಇದ್ದು ಶೋಭಾಯಮಾನನಾಗಿರುತ್ತಾನೆ. ಕಣ್ಣೆವೆಯು ತಾವರೆಯ ಎಲೆಯಂತೆ ಕಾಣುತ್ತಿರುತ್ತದೆ. ಹುಬ್ಬುಗಳು ಸಿಂಹದ ಹುಬ್ಬುಗಳಂತೆಯೂ, ಮೂಗು ಗಿಣಿಯ ಮೂಗಿನಂತೆಯೂ, ಸೊಂಟವು ಸಿಂಹದ ಸೊಂಟದಂತೆಯೂ, ಪೃಷ್ಠಗಳು ಆನೆಯ ಪೃಷ್ಠಗಳಂತೆಯೂ ಇದ್ದು, ರೆಕ್ಕೆಗಳು ಹಂಸದ ರೆಕ್ಕೆಗಳಂತೆ ಇರುತ್ತವೆ. ಬಾಲವು ಅದರ ಅಳತೆಗೆ ಅನುಗುಣವಾಗಿದ್ದು ನೂರು ಶಾಖೆಗಳನ್ನು ಹೊಂದಿರುತ್ತದೆ. ವಿಶೇಷಗಳನ್ನು ಮಾತ್ರವೇ ಹೇಳಿದೆ ಸಾಮಾನ್ಯವಾದುದೆಲ್ಲಾ ಯಥಾಕ್ರಮ ಅನುಸರಿಸ ಬೇಕು.

(ಎ) ಆಜಾನುತ್ತಪ್ತ ಹೇಮಪ್ರಭಮಥ ಹಿಮಪ್ರಖ್ಯ ಮಾನಾಭಿ ಸಾಕ್ಷಾ
ದಾಕಂಠಾತ್ಕುಂಕುಮಾಭಂ ಭ್ರಮರ ಕುಲಸಮಶ್ಯಾಮಲಂ ಮೂರ್ಧ್ನೀ ಶಾಂತಮ್ ।
ವ್ಯಾಪ್ತ ಬ್ರಹ್ಮಾಂಡಗರ್ಭಂ ದ್ವಿಭುಜಮಭಯದಂ ಪಿಂಗನೇತ್ರೋಗ್ರತಾರಂ
ತಾರ್ಕ್ಷ್ಯ ನೀಲಾಗ್ರನಾಸಾದ್ಯುತಿವಿವಿಧ ಮಹಾಪಕ್ಷಲಕ್ಷ್ಮಂ ನಮಾಮಿ ॥

(ಶಿಲ್ಪರತ್ನಂ)

ಪಾದದಿಂದ ಮೊಣಕಾಲುಗಳ ತನಕ ಬಂಗಾರದ ಬಣ್ಣ. ಅಲ್ಲಿಂದ ನಾಭಿಯವರೆವಿಗೂ ಮಂಜಿನ ಬಿಳುಪು. ನಾಭಿಯಿಂದ ಕೊರಳಿನತನಕ ಕುಂಕುಮವರ್ಣ. ಕಂಠದಿಂದ ಮುಖದವರೆವಿಗೂ ಕಪ್ಪು. ಕಣ್ಣುಗಳು ಹಳದಿ. ಕೊಕ್ಕುಮೂಗು ನೀಲಿ. ಗರುಡನ ಮುಖದಲ್ಲಿ ಬಹುಕ್ರೂರವಾದ ನೋಟ ಇರಬೇಕು. ಎರಡೇ ಬಾಹುಗಳಿದ್ದು ಅದರಲ್ಲಿ ಬಲಹಸ್ತದಲ್ಲಿ ಅಭಯಮುದ್ರೆ ಇರುತ್ತದೆ. ಬಲವಾದ ಎರಡು ರೆಕ್ಕೆಗಳಿರುತ್ತವೆ.

(ಬಿ) ಪಾಲಾದೇವ್ಯೋ ಗರುತ್ಮಾನಮ್ಮತ ಘಟ ಗದಾಶಂಖ ಚಕ್ರಸಿನಾಗಾಂ
ಬಿಭ್ರಾಣಃ ಕೃಷ್ಣಪಾದೋ ನಿಜಕರಕಮಲೈರಷ್ಟ ಭಿಷ್ಟರ್ಣವರ್ಣಃ ।
ಪಾಪಘ್ನೈಃ ಪಕ್ಷತಾತ್ಮೆರಖಿಲ ವಿಷಹರ್ಯೆರಾಶ್ರಿ ತಾರ್ಶಿಘ್ನ ವೃತ್ತಃ
ಶ್ರೀ ಮಾನ್ಪ್ಯಾ ಪನ್ನಗಾರಿಸ್ಸಕಲ ವಿಷ ಭಯಾದ್ರಕ್ಷ ಜಾಲೋಜ್ವಲಾಂಗಃ ॥

(ಶಿಲ್ಪರತ್ನಂ)

ಗರುಡಮೂರ್ತಿಯು ಎಂಟು ತೋಳುಗಳನ್ನು ಪಡೆದಿರುತ್ತಾನೆ. ಮುಂದಿನ ಎರಡು ನಿಜಕರಗಳಲ್ಲಿ ನಮಸ್ಕಾರಮುದ್ರೆ ಇರುತ್ತದೆ. ಇನ್ನುಳಿದ ಆರು ಹಸ್ತಗಳಲ್ಲಿ ಅಮೃತಕುಂಭ, ಗದೆ, ಶಂಖ, ಚಕ್ರ, ಕತ್ತಿ, ನಾಗ ಇರುತ್ತವೆ. ಗರುಡನ ರೆಕ್ಕೆಗಳ ಗಾಳಿಯಿಂದಲೇ ಸಕಲ ವಿಷಗಳು

ಉಪಶಮನಗೊಳ್ಳುತ್ತವೆ. ಎಲ್ಲಾ ಪಾಪಗಳು ಆತನ ಬಳಿಸುಳಿಯುತ್ತಲೇ ಭಸ್ಮವಾಗುತ್ತವೆ. ಸಕಲ ವಿಷಗಳ ಭಯವನ್ನೂ ದೂರೀಕರಿಸಬಲ್ಲ ಮೂರ್ತಿ.

**(ಐ) ತಾರ್ಕ್ಷ್ಯೋ ಮರಕತ ಪ್ರಖ್ಯ: ಕೌಶೀಕಾಕಾರನಾಸಿಕಃ**
**ಚತುರ್ಭುಜಸ್ತು ಕರ್ತವ್ಯೋ ವೃತ್ತನೇತ್ರ ಮುಖಸ್ತಥಾ ||**
**ಗೃಧ್ರೋರು ಜಾನುಚರಣಃ ಪಕ್ಷದ್ವಯ ವಿಭೂಷಿತಃ**
**ಪ್ರಭಾಸಂಸ್ಥಾನ ಸೌವರ್ಣಕಲಾಪೇನ ವಿರಾಜಿತಃ ||**
**ಛತ್ರಂ ತು ಪೂರ್ಣಕುಂಭಂ ಚ ಕರಯೋಸ್ತಸ್ಯ ಕಾರಯೇತ್**
**ಕರದ್ವಯಂ ತು ಕರ್ತವ್ಯಂ ತಥಾ ವಿರಚಿತಾಂಜಲಿ ||**
**ಯದಾಸ್ಯ ಭಗವಾನ್ ಪೃಷ್ಠೇ ಛತ್ರ ಕುಂಭಧರೌ ಕರೌ**
**ನಕರ್ತವ್ಯೌ ತು ಕರ್ತವ್ಯೌ ದೇವಪಾದ ಧರೌ ಶುಭೌ ||**
**ಕಿಂಚಿಲ್ಲಂಬೋದರಃ ಕಾರ್ಯಸ್ಸರ್ವಾಭರಣ ಭೂಷಿತಃ**

(ವಿಷ್ಣುಧರ್ಮೋತ್ತರ ಪುರಾಣ)

ಮರಕತ ಮಣಿಯ ಬಣ್ಣದ ಮೈಕಾಂತಿಯಿಂದ, ಗಿಡುಗನ ಕೊಕ್ಕು ಮತ್ತು ಕಾಲುಗಳು ಪಡೆದಿರುವ, ವೃತ್ತಾಕಾರವಾದ ಕಣ್ಣುಗಳು ಇರುವ ಗರುಡ ನಾಲ್ಕು ತೋಳುಗಳನ್ನು ಎರಡು ಬಲವಾದ ರೆಕ್ಕೆಗಳನ್ನು ಪಡೆದಿರುತ್ತಾನೆ. ಒಂದರಲ್ಲಿ ಛತ್ರಿಯನ್ನು ಇನ್ನೊಂದರಲ್ಲಿ ಅಮೃತಕುಂಭವನ್ನು ಹಿಡಿದಿರಬೇಕು. ಉಳಿದ ಎರಡು ಹಸ್ತಗಳು ಅಂಜಲೀಬದ್ಧವಾಗಿದ್ದು ವಕ್ಷಸ್ಥಳದ ಬಳಿ ಇರಬೇಕು. ಗರುಡನಿಗೆ ಸ್ವಲ್ಪ ದೊಡ್ಡದು ಎನಿಸುವಂತಹ ಹೊಟ್ಟೆ ಇರಬೇಕು.

ಇದೇ ಗರುಡನನ್ನು ವಾಹನವಾಗಿ ರೂಪಿಸಬೇಕಾಗಿದ್ದರೆ ಅಮೃತಕುಂಭ ಮತ್ತು ಛತ್ರಿ ಹಿಡಿದಿದ್ದ ಮೇಲಿನ ಹಸ್ತಗಳ ಅಂಗೈಗಳು ಚಾಚಿಕೊಂಡಿದ್ದು ವಿಷ್ಣುದೇವನ ಪಾದಗಳಿಗೆ ಆಸರೆಯಾಗಿರಬೇಕು.

**(ಓ) ಭೂಯೋ ಮೂರ್ತಿ ವಿಶೇಷೋಽಸ್ತಿ ಶೃಣು ವಕ್ಷ್ಯಾಮಿ ಭೂಪತೇ**
**ಚಕ್ರಷಟ್‌ಕೋಣ ಸಂಯುಕ್ತಂ ಮಧ್ಯೇ ಗರುಡ ವಾಹನಮ್ ||**
**ವೈನತೇಯಶ್ಚತುರ್ಬಾಹುಃ ಪೂರ್ವೇ ಬದ್ಧಾಂಜಲಿರ್ಭವೇತ್**
**ಅಪರೇ ಚಕ್ರಶಂಖಾಭ್ಯಾಂ ತಲೇ ಕೃತ್ವಾ ವಿಶೇಷತಃ ||**
**ಅಷ್ಟಬಾಹುಧರೋ ದೇವೋ ಷೋಡಶಂ ವಾ ಸಹಸ್ರಕಮ್**
**ಶಕ್ತಿಂ ಪದ್ಮ ಧನುಃ ಪಾಶಂ ಖಡ್ಗದಂಡಂ ಪರಶ್ವಧಮ್ ||**
**ಶಂಖ ಶೂಲಂ ಗದಾ ಚಕ್ರ ಬಾಣಾಶನಿಶಿಲಾ ಇತಿ**
**ದ್ವಾವಿಂಶೋರ್ಧ್ವಭುಜಾ ವಾ ದ್ವಾವಿಂಶದ್ಭುಜ ಮನ್ಯಥಾ ||**
**ಅಷ್ಟದೇವ್ಯೋರುಭೌ ಪಾರ್ಶ್ವೇ ತಾರ್ಕ್ಷ್ಯ ಪಕ್ಷೇವ್ಯವಸ್ಥಿತಾಃ**
**ಕೀರ್ತಿಸ್ತುತ್ಯಂಕಮಾರೋಪ್ಯ ಶೇಷಃ ಪಕ್ಷೋಪರಿ ಸ್ಥಿತಾಃ ||**

(ವಿಹಗೇಂದ್ರ ಸಂಹಿತಾ, ೩ : ೨೩ - ೨೭)

ಆರು ಕೋಣಗಳ ಚಕ್ರದ ಮಧ್ಯಭಾಗದಲ್ಲಿ ಗರುಡನು ಕುಳಿತಿರುತ್ತಾನೆ. ಈತನು ವಿಷ್ಣುವಿನ ವಾಹನ. ನಾಲ್ಕು ಬಾಹುಗಳಿರುವ ಈತನ ಮುಂದಿನ ಎರಡು ಹಸ್ತಗಳು ನಮಸ್ಕಾರ



ಚಿತ್ರ ೧೩೩ : ಗರುಡ ವಾಹನ (ಸ್ವಾಮಿ ಸಮೇತ)

ಮುದ್ರೆಯಲ್ಲಿರುತ್ತವೆ ಮೇಲಿನ ಎರಡು ಹಸ್ತಗಳಲ್ಲಿ ಶಂಖ ಚಕ್ರ ಧರಿಸಿರಬೇಕು. ಎಂಟು ಅಥವ ಹದಿನಾರು ಭುಜಗಳಿರುವಾಗ ಆರು ಅಥವ ಹದಿನಾಲ್ಕು ಹಸ್ತಗಳಲ್ಲಿ ಈ ಆಯುಧಗಳಿರುತ್ತವೆ - ಶಕ್ತಿ, ಪದ್ಮ, ಧನುಸ್ಸು, ಪಾಶ, ಖಡ್ಗ, ದಂಡ, ಪರಶು, ಶಂಖ, ಶೂಲ, ಗದೆ, ಚಕ್ರ, ಬಾಣ, ವಜ್ರ, ಶಿಲಾ. ಈ ಸ್ವಾಮಿಯನ್ನು ಇಪ್ಪತ್ತೆರಡು ತೋಳುಗಳಿರುವಂತೆಯೂ ರೂಪಿಸಬಹುದು. ಈ ದೇವನು ಅಷ್ಟದೇವಿಯರೊಂದಿಗೆ ಇರುವಂತೆ ರೂಪಿಸಬಹುದು. ಇಬ್ಬರು ಗರುಡನ ಇಕ್ಕೆಲಗಳಲ್ಲಿ ಇರಬೇಕು.

ಹೀಗೆ ಗರುಡ ಮೂರ್ತಿಯು ಬಹು ವಿಶಿಷ್ಟ ರೀತಿಯಲ್ಲಿ ರೂಪಿಸಲ್ಪಟ್ಟಿದ್ದಾನೆ.

## ೩. ಹನುಮಂತ

ಹನುಮಂತ ಅಥವ ಹನೂಮತ್ ಸುಮೇರುವಿನ ಕೇಸರಿನ್ ವಾನರ ರಾಜನ ಪುತ್ರ; ಸುವಿಖ್ಯಾತ ವಾನರ. ಕಿಷ್ಕಿಂಧೆಯ ವಾನರ ರಾಜ ಸುಗ್ರೀವನ ಮಂತ್ರಿ. ಸಂಭಾಷಣಾಚತುರ. ಕುಶಲ ರಾಜನೀತಿಜ್ಞ. ವೀರ ಸೇನಾನಿ. ನಿಪುಣದೂತ. ವಾಲ್ಮೀಕಿ ರಾಮಾಯಣದಲ್ಲಿ (ಉ ೩೫ : ೩) ಈತನ ಶೌರ್ಯ, ಬಲ, ಚಾತುರ್ಯ, ಧೈರ್ಯ, ಪಾಂಡಿತ್ಯ, ಗುಣ, ಪರಾಕ್ರಮ ಮತ್ತು ದೈವೀಗುಣಗಳ ಆಲಯವೆಂದು ಹೇಳಲಾಗಿದೆ

**ಶೌರ್ಯ ದಾಕ್ಷ್ಯಂ ಬಲಂ ಧೈರ್ಯ ಪ್ರಾಜ್ಞತಾ ನಯಸಾಧನಮ್**

**ವಿಕ್ರಮಶ್ಚ ಪ್ರಭಾವಶ್ಚ ಹನೂಮತ್ ಕೃತಾಲಯಾ:**

ನಿಪುಣ ರಾಜನೀತಿಜ್ಞ, ಸಮಯೋಚಿತ ಸಲಹೆಗಳನ್ನು ನೀಡುವ ಸಚಿವೋತ್ತಮ ಮತ್ತು ಮಹಾಪರಾಕ್ರಮಿಯಾಗಿದ್ದರೂ ಬಹು ನಮ್ರನೂ, ನಿರಭಿಮಾನಿಯೂ, ಬಹು ಪ್ರಿಯ ವಚನಿ. ಈತನು ಸತ್ತ್ವಗುಣಾನ್ವಿತನಾಗಿದ್ದ. ಆದ್ದರಿಂದಲೇ ವೀರ ಪುರುಷನಾಗಿ ಮಾತ್ರವೇ ಅಲ್ಲದೆ ರಾಮನ ಪರಮಭಕ್ತನೆಂದೂ ಆದರ್ಶ ಪ್ರಾಯನೆಂದು ಜನ ಇಂದಿಗೂ ಉಲ್ಲೇಖಿಸುತ್ತಾರೆ.

ಹನುಮತ್ ಎಂಬುದು ಆಣಮಂದೀ ಅಥವ ಆಣಮಂತೀಎಂಬ ದ್ರಾವಿಡ ಶಬ್ದದ ಸಂಸ್ಕೃತ ರೂಪ. ಆಣ್ ಗಂಡು, ಮಂದೀ (ತೀ) ಕಪಿ ಎಂಬುದು ಶಬ್ದಾರ್ಥ. ನರ ವಾನರ ರೂಪದ ಕಲ್ಪನೆಯು ಹನುಮತ್ ಹೆಸರಿನಲ್ಲಿದೆ. ಕಾಲ ಕ್ರಮದಲ್ಲಿ ಈತ ದೇವನಾಗಿ ರಾಮ ಲಕ್ಷ್ಮಣರೊಂದಿಗೆ ಸೇರಿ ಪೂಜೆ ಕೈಗೊಳ್ಳುತ್ತಿದ್ದಾನೆ.

ಹನುಮಂತನ ವಾನರಾಕೃತಿಯ ತಪ್ಪು ಕಲ್ಪನೆಯ ಫಲ ಎಂದು ಹೇಳುತ್ತಾರೆ. ಸುಗ್ರೀವ ವಾಲಿಗಳಂತೆ ಈತನು ವಾನರ ಜಾತಿಗೆ ಸೇರಿದ್ದರೂ ಕಪಿಯಲ್ಲ. ರಾಮಾಯಣದಲ್ಲಿ ಉಲ್ಲೇಖಿತವಾಗಿರುವ ಇತರ ವಾನರರಂತೆ ಈತನೂ ಆದಿವಾಸಿಗಳ ಗುಂಪಿಗೆ ಸೇರಿದವನೇ. ಬಹುಶಃ ಅವರು ಕಪಿಯನ್ನು ದೇವರೆಂದು ಭಾವಿಸಿ ಆರಾಧಿಸುತ್ತಿದ್ದರೇನೋ? ಅಥವ ಇವರು ಕಪಿ ಧ್ವಜರಾಗಿದ್ದುದರಿಂದ ಇವರನ್ನು ಕಪಿಗಳೆಂದು ಗುರ್ತಿಸಲಾಯಿತೇನೋ?

ಹನುಮಂತನ ದೇವತಾಕಲ್ಪ ಸಂಶೋಧಕರ ಅನುಸಾರವಾಗಿ ಪ್ರಾರಂಭವಾಗಿರುವುದು ಕೃಷಿ ಸಂಬಂಧದ ದೇವನೆಂದು. ಬಹುಶಃ ಮಳೆಗಾಲದಲ್ಲಿ ಬೀಸುವ ಗಾಳಿಯ ಅಧಿಷ್ಠಾತೃ ದೇವನೆಂದು ಈತನನ್ನು ಪೂಜಿಸಲಾಗುತ್ತಿತ್ತೇನೋ. ಇದೇ ಕಾರಣದಿಂದಲೇ ಹನುಮಂತನ ಬಹುಪಾಲಿನ ವರ್ಣನೆ ವೈದಿಕ ಮರುತ್‌ನ ವಿವರಣೆಗಳನ್ನೇ ಹೋಲುತ್ತದೆ. ಈತನು ವಾಯುಪುತ್ರ. ಮೇಘಗಳಂತೆ ಕಾಮರೂಪಿ ಮತ್ತು ಆಕಾಶಗಾಮಿ. ಈತನು ದಕ್ಷಿಣ ದಿಕ್ಕಿನಿಂದ ಮಳೆ ಬರುವ

ದಿಕ್ಕಿನಿಂದ ಸೀತೆ (ಕೃಷಿ) ಸಂಬಂಧದ ಮಾಹಿತಿ ಬಗ್ಗೆ ರಾಮನಿಗೆ (ಉತ್ತರ ದಿಕ್ಕಿಗೆ ) ವಿವರಗಳನ್ನು ಒದಗಿಸುತ್ತಾನೆ. ಹೀಗೆ ಇಂದ್ರನಂತೆಯೇ ಈತನೂ ಮಳೆಯ ದೇವತೆ ಎಂಬುದಾಗಿ ಭಾಸವಾಗುತ್ತಾನೆ.

ಎಂಟನೆಯ ಶತಮಾನದವರೆವಿಗೂ ಈತನನ್ನು ರುದ್ರಾಂಶನೆಂದು, ವಾಯು ಸಂಭೂತನೆಂದು ಅಂಗೀಕರಿಸಿದ್ದು ಈತನ ಬ್ರಹ್ಮಚರ್ಯದ ಬಗ್ಗೆ ಬಹುವಾದ ಪ್ರಶಂಸೆ ಇತ್ತು. ಈ ಬಗ್ಗೆ ವಿಶ್ವಕರ್ಮ ಸಂಹಿತೆ ಅಧ್ಯಾಯ ೪ ರಲ್ಲಿ ಒಂದು ಆಖ್ಯಾಯಿಕೆ ಇದೆ. ಇದೇ ನಾಗರಖಂಡದಲ್ಲೂ ಪುನರುಕ್ತವಾಗಿರುವಂತೆ ತೋರಿಬರುತ್ತದೆ.

ದೀರ್ಘತಮ ಗೋತಮನ ಪತ್ನಿ ಅಹಲ್ಯೆಗೆ ಅಂಜನಾದೇವಿ ಎಂಬ ಪುತ್ರಿ ಇದ್ದಳು. ಆಕೆ ಹುಟ್ಟು ಕುರುಡಿ. ವಾಯುದೇವನ ಪತ್ನಿ. ಅವರ ಮದುವೆಯೇನೋ ಆಗಿತ್ತು. ಆದರೆ ತನ್ನ ಹೆಂಡತಿ ಕುರುಡಿ ಎಂಬ ಕೊರತೆ ವಾಯುದೇವನನ್ನು ಕಾಡುತ್ತಿತ್ತು. ತಪಸ್ಸಿನಿಂದ ಅಂಧತ್ವ ನಿವಾರಣೆಯಾಗುತ್ತದೆ ಎಂದು ಆಕೆಗೆ ಮಂತ್ರೋಪದೇಶವನ್ನು ಮಾಡಿದ. ಆಲದ ಮರದ ಕೆಳಗೆ ಪದ್ಮಾಸನದಲ್ಲಿ ಅಂಜನಾದೇವಿ ಕುಳಿತು ತಪಸ್ಸು ಪ್ರಾರಂಭಿಸಿದಳು. ಕೈಲಾಸಾಧೀಶ ಭೂಲೋಕ ವೀಕ್ಷಣೆಗೆಂದು ಬಂದ. ಆಕಾಶಮಾರ್ಗದಲ್ಲಿದ್ದ ದೇವನು ಮರ್ಕಟಗಳ ಸಂಯೋಗವನ್ನು ಕಂಡು ಸ್ಖಲಿತನಾದ. ಆ ವೀರ್ಯ ಅಂಜನಾದೇವಿಯ ಅಂಜಲಿಯಲ್ಲಿ ಬಿತ್ತು. ಆಕೆ ಅದು ವಾಯುದೇವನು ತನಗೆ ನೀಡಿರುವ ಆಹಾರವೆಂದು ಭುಜಿಸಿದಳು.

ಆ ವೀರ್ಯವು ಆಕೆಯ ಜಠರವನ್ನು ಪ್ರವೇಶಿಸುತ್ತಲೇ ಆಕೆಗೆ ದೃಷ್ಟಿಬಂತು. ಅಷ್ಟು ಮಾತ್ರವಲ್ಲ. ಒಂಬತ್ತು ಘಳಿಗೆಗಳಲ್ಲಿ ಗರ್ಭವೃದ್ಧಿಗೊಂಡಿತು. ಗರ್ಭಭಾರವನ್ನು ತಡೆಯಲಾರದೆ ಬಳಲಿದ ಅಂಜನಾದೇವಿಯು ಗಂಡನ ಬಳಿ ತನ್ನ ಸಂಕಟವನ್ನು ತೋಡಿಕೊಂಡಳು. ವಾಯುದೇವನು ಬ್ರಹ್ಮದೇವನನ್ನು ಪ್ರಾರ್ಥಿಸಿದ. ಬ್ರಹ್ಮನು ಗರ್ಭದಲ್ಲಿರುವ ಶಿಶುವನ್ನು ಕುರಿತು 'ಎಲೈ ಶಿಶುವೇ ನೀನು ಬೇಗ ತಾಯಿಯ ಗರ್ಭದಿಂದ ಹೊರಬಂದು ನಿನ್ನ ತಾಯಿಯ ಭಾರವನ್ನು ಇಳಿಸು' ಎಂದು ಹೇಳಿದ.

ಶಿಶುವು ಇಂತು ಹೇಳಿತು: ' ನಾನು ಮಾನವಂತ. ಆದ್ದರಿಂದ ನನಗೆ ಕೌಪೀನ, ಯಜ್ಞೋಪವೀತ, ಕರ್ಣಕುಂಡಲ ಮುಂತಾದುವನ್ನು ಕೊಡಿ. ಈಗಲೇ ನಾನು ಹೊರಕ್ಕೆ ಬರುತ್ತೇನೆ'

ಇದರಿಂದ ಬ್ರಹ್ಮ 'ಈ ಕೆಲಸ ನನಗೆ ಅಸಾಧ್ಯವಾದುದು. ಇದು ಸೃಷ್ಟಿ ನಿಯಮದ ಉಲ್ಲಂಘನೆ. ಆದ್ದರಿಂದ ಇದನ್ನು ಜಗತ್ ಸೃಷ್ಟಿಕರ್ತನಾದ ವಿಶ್ವಕರ್ಮನೇ ಬಗೆಹರಿಸಬೇಕು' ಎಂದು ವಿಶ್ವಕರ್ಮನನ್ನು ಪ್ರಾರ್ಥಿಸಿದ.

ಮೇಘವಾಹನವಾಗಿ ಐದು ಮುಖಗಳೊಂದಿಗೆ, ನೊಸಲುಗಣ್ಣುಗಳೊಂದಿಗೆ, ಹತ್ತು ತೋಳುಗಳೊಂದಿಗೆ ವಿಶ್ವಕರ್ಮನು ಪ್ರತ್ಯಕ್ಷನಾದನು. ಪರಿಸ್ಥಿತಿಯನ್ನು ಅರಿಕೆ ಮಾಡಿಕೊಂಡ ಬ್ರಹ್ಮದೇವ. ಆಗ ಪರಮಾತ್ಮನು 'ಎಲೈ ಶಿಶುವೇ, ನೀನು ಕೋರಿರುವ ವಸ್ತುಗಳನ್ನು ನಿನಗೆ ಗರ್ಭದಲ್ಲಿಕೊಡುವುದು ಋತ ನಿಯಮದ ವಿರುದ್ಧವಾಗುತ್ತದೆ. ಆದರೂ ನಿನ್ನ ನಿಷ್ಠೆಯನ್ನು ಮೆಚ್ಚಿ ಕೊಡುತ್ತೇನೆ. ನಿನ್ನಿಂದ ಲೋಕ ಕಲ್ಯಾಣವಾಗುತ್ತದೆ' ಎಂದು ಹೇಳಿದ.

ಆಗ ಶಿಶುವು

ಮದಭೀಷ್ಟಾನಿ ಸರ್ವಾಣಿ ಚೇದ್ದಾಸ್ಯಸಿ ಜಗದ್ಗುರೋ
ಗುರುಸ್ತ್ವಾತ್ತ್ವ ಸರ್ವಜ್ಞ ತ್ವದಾಜ್ಞಾ ಭರಿತೋಽಸ್ಮ್ಯಹಂ ॥
ದಾತಾ ಸಮಸ್ತ ದೇವಾನಾಂ ತ್ವಂ ವಿನಾ ನಾಸ್ತಿ ಕಶ್ಚಿ ಚಿತ್
ಕರೋಮಿ ಶಾಸನಂ ತೇಽದ್ಯ ಆಜ್ಞಾಪಯಾ ಜಗದ್ಗುರೋ ॥

'ನಾನು ಕೋರಿದ ವಸ್ತುಗಳನ್ನು ಕೊಟ್ಟಿರುವ ನೀನು ದೇವತೆಗಳ ದೇವರು. ನೀನೇ ಜಗದ್ಗುರು ವಿಶ್ವಕರ್ಮ. ಅತ್ಯಂತ ಹಿರಿಯನು. ದೇವತೆಗಳಿಗೆಲ್ಲಾ ದಾತನು. ನಿನಗಿಂತಲೂ ಹಿರಿಯರು ಬೇರೆ ಇಲ್ಲ. ಆದ್ದರಿಂದ ನಾನು ಸದಾ ನಿನ್ನ ಆಜ್ಞಾಪಾಲಕನಾಗಿರುತ್ತೇನೆ. ನೀನೇನು ಆಜ್ಞಾಪಿಸುತ್ತೀಯೋ ಈಗಲೇ ಆಜ್ಞಾಪಿಸು. ನಾನು ನಿನ್ನ ಭಟನಾಗಿರುತ್ತೇನೆ '.

ಈ ಮಾತುಗಳನ್ನು ಕೇಳಿದ ವಿಶ್ವಕರ್ಮನು 'ಎಲೈ ಶಿಶುವೇ, ನೀನು ನನ್ನ ಧ್ವಜದಲ್ಲಿ ಸದಾ ಪ್ರಕಾಶಿಸುತ್ತಿರು' ಎಂದು ಹೇಳಿದ.

ವಿಶ್ವಕರ್ಮನು ಸಂಕಲ್ಪ ಮಾತ್ರದಿಂದಲೇ ಶಿಶುವಿಗೆ ಬಂಗಾರದ ಕಟಿಸೂತ್ರ, ಕೌಪೀನ, ಬ್ರಹ್ಮಸೂತ್ರ, ಕುಂಡಲ ಮತ್ತು ಕಮಂಡಲಗಳನ್ನು ದಯಪಾಲಿಸಿದ.

ತಾಯಿ ಗರ್ಭದಿಂದ ಹೊರಬಂದ ಪುತ್ರನಿಗೆ ತಂದೆ ತಾಯಿಗಳು ಹನುಮಂತನೆಂದು ನಾಮಕರಣಮಾಡಿದರು. ಸೃಷ್ಟಿ, ಸ್ಥಿತಿ ಅಂತ್ಯ ತಿರೋಧಾನ ಅನುಗ್ರಹ ಕಾರಣನಾದ ವಿಶ್ವಕರ್ಮ ಪರಮೇಶ್ವರನನ್ನು ದೇವತೆಗಳೆಲ್ಲರು ಭಜಿಸಿದರು. ಹನುಮಂತನು ವಿಶ್ವಕರ್ಮಧ್ವಜವನ್ನು ಸೇರಿದ.

ಇದೇ ಕಾರಣದಿಂದಲೇ ಶಿಲ್ಪಿಗಳು ಹನುಮಂತನು ತಮ್ಮ ವಾಸ್ತು ಸೃಷ್ಟಿಗಳ ರಕ್ಷನೆಂದು ನಂಬುತ್ತಾರೆ. ನಗರ ವಾಸ್ತು ನಿರ್ಮಾಣದಲ್ಲಿ ಊರಿನ ಹೊರಗೆ ಹನುಮಂತನ ಗುಡಿಯನ್ನು ಊರಿನ ರಕ್ಷಣಾರ್ಥವಾಗಿ ನಿರ್ಮಿಸುವ ಪದ್ಧತಿಯು ರೂಢಿಯಲ್ಲಿ ಬಂದಿದೆ.

ಎಂಟನೆಯ ಶತಮಾನದ ನಂತರ ಪ್ರಾಚೀನ ಯಕ್ಷಪೂಜೆಯಲ್ಲಿ ವೀರಪೂಜೆ ಎಂದು ಮಹಾವೀರ ಹನುಮಂತನನ್ನೂ ಸೇರಿಸಲಾಯಿತು. ವೈಷ್ಣವ ಷಡ್ಗುಣ್ಯಗಳಲ್ಲಿಯ ಬಲ ವೀರ್ಯಗಳು ಈತನಲ್ಲಿವೆ ಎಂದು ವೈಷ್ಣವರೂ ಪೂಜಿಸಲು ಪ್ರಾರಂಭಿಸಿದ್ದರಿಂದ ಈ ದೇವನ ಜನಪ್ರಿಯತೆಯು ವರ್ಧಿಸಿತು. ಬರುಬರುತ್ತಾ ಜಗತ್ತಿನ ವೀರರೆಲ್ಲರೂ ಹನುಮಂತನ ಅವತಾರವೇ ಎಂದು ನಂಬುವಷ್ಟು ಬಲವತ್ತರವಾಯಿತು. ಆನಂದ ರಾಮಾಯಣ (೮ : ೭ : ೧೨೩) ವು **ಯೇ ಯೇ ವೀರಾಸ್ತ್ವತ್ರ ಭೂಮ್ಯಾಂ** ವಾಯುಪುತ್ರಾಂಶರೂಪಿಣಃ ಎಂದು ಹೇಳಿತು

ಹನುಮಂತ ಭಾರತಾದ್ಯಂತ ಪೂಜಿಸಲ್ಪಡುವ ದೇವನು. ಹೀಗೆ ಸರ್ವ ವ್ಯಾಪಕತ್ವವನ್ನು ಪಡೆದಿರುವ ದೇವರುಗಳು ಬಹಳವಿಲ್ಲ. ಈತನನ್ನು ರುದ್ರಾವತಾರಿ ಮತ್ತು ಸದಾಚಾರದ ಮೂರ್ತಿ ರೂಪವೆಂದು ಗೌರವಿಸುತ್ತಾರೆ. ವ್ಯಾವಹಾರಿಕ ಇಚ್ಛೆಗಳನ್ನು ಪೂರೈಸುವದೇವ. ಹನುಮಂತನನ್ನು ಆರೋಗ್ಯ, ಸಂತಾನ ಪ್ರಾಪ್ತಿ, ಭೂತಚೇಷ್ಟೆಯ ಪರಿಹಾರ, ದುಃಖ ಹಿಂಸೆಗಳ ನಾಶ ಇತ್ಯಾದಿಗಳಿಗಾಗಿ ಉಪಾಸಿಸಲಾಗುತ್ತದೆ. ಈ ದೇವತಾಸ್ವರೂಪವು ವಾಲ್ಮೀಕಿ ರಾಮಾಯಣದಲ್ಲಿ ನಿರ್ದೇಶಿತ ಹನುಮಂತನಿಗಿಂತಲೂ ಭಿನ್ನವಾದುದು. ಕ್ರಿ.ಶ. ೮ನೆಯ ಶತಮಾನದಲ್ಲಿ ಈ ದೇವನು ಪ್ರಾಚುರ್ಯಕ್ಕೆ ಬಂದಿರುವಂತೆ ತೋರುತ್ತದೆ. ವೈಖಾನಸ ಮತ್ತು ಪಾಂಚರಾತ್ರ ಆಗಮಗಳಲ್ಲಿ ಗರುಡನಿಗೆ ಸಲ್ಲುವ ಪ್ರಾಶಸ್ತ್ಯ, ಸ್ಥಾನ, ಗೌರವಗಳು ಹನುಮಂತನಿಗೆ ಇಲ್ಲ. ಆದರೆ ತಂತ್ರಸಾರದಲ್ಲಿ ಈ ದೇವನಿಗೆ ಬಹುವಾದ ಪ್ರಾಶಸ್ತ್ಯದೊರೆತಿದೆ.

ಪುರಾಣಗಳಲ್ಲಿ ಈತನ ಜನ್ಮದ ಬಗ್ಗೆ ಬಗೆಬಗೆಯ ಉದಂತಗಳಿವೆ. ಎಲ್ಲದರಲ್ಲೂ

ಶಿವ ಅಥವ ವಾಯು ಇವರಿಂದ ಉತ್ಪನ್ನನಾದನೆಂದೇ ಹೇಳಲಾಗಿದೆ. ಈತ ಹುಟ್ಟಿದ್ದು ಚೈತ್ರ ಶುಕ್ಲ ಪೌರ್ಣಮಿ. ಈತನ ಪರ್ಯಾಯ ನಾಮಗಳು ಮರುತ್ತನ ಮಗನಾದುದರಿಂದ ಮಾರುತಿ. ಇಂದ್ರನ ವಜ್ರಾಯುಧದಿಂದ ಈತನ ಹನು (ಗದ್ದ) ಒಡೆದು ಹೋದುದರಿಂದ *ಹನೂಮಾನ್.* ವಜ್ರದೇಹಿಯಾದುದರಿಂದ ಈತನು *ವಜ್ರಾಂಗ*. ಬಹು ಬಲಶಾಲಿಯಾದುದರಿಂದ *ಬಲಭೀಮ*.

ಅನೇಕ ಮನೋವಾಂಛಿತ ಫಲಸಿದ್ಧಿಗಳಿಗಾಗಿ ಈ ದೇವನನ್ನು ಪೂಜಿಸುತ್ತಾರೆ. ಮಂತ್ರಶಾಸ್ತ್ರದಲ್ಲಿ ಈ ಸ್ವಾಮಿಯ ಹಲವು ರೂಪಗಳು, ಯಂತ್ರಗಳು ಬಹು ಪ್ರಸಿದ್ಧವಾಗಿವೆ. ರೋಗಾಪಹಾರಿ ಶೋಕಾಪಹನೆಂದು ವೀರ ಪ್ರತಾಪ ಹನುಮಂತನ ಧ್ಯಾನವು ಇಂತಿದೆ

**ಧ್ಯಾಯೇ ದ್ಬಾಲದಿವಾಕರದ್ಯುತಿನಿಭಂ ದೇವಾದಿದರ್ಪಾಪಹಂ**

**ದೇವೇಂದ್ರ ಪ್ರಮುಖಾಮರ ಸ್ತುತಿಪದಂ ರೋಗಾದಿ ಶೋಕಾಪಹಮ್ ।**

**ಮೌಂಜೀರತ್ನ ವಿಚಿತ್ರ ಕುಂಡಲಧರಂ ಕೌಪೀನ ಕೃಷ್ಣಾಜಿನಂ**

**ವಜ್ರಪ್ರಾಯ ಮಹಾಬಲಂ ಕಪಿವರಂ ಶ್ರೀರಾಮದೂತಂ ಭಜೇ ॥**

ಬಾಲ ಸೂರ್ಯನ ಪ್ರಕಾಶದಲ್ಲಿ ಕಂಗೊಳಿಸುತ್ತಾ ದೇವಾನುದೇವತೆಗಳ ದರ್ಪನಾಶಕನಾದ ಈ ಸ್ವಾಮಿಯು ದೇವಾಂದ್ರಿ ಪ್ರಮುಖ ದೇವತೆಗಳಿಂದ ಸ್ತುತಿಸಲ್ಪಡುತ್ತಾನೆ. ಈತನು ಸಕಲ ರೋಗ, ಶೋಕಗಳ ಪರಿಹಾರಕಾರಕ. ಯಜ್ಞೋಪವೀತ, ಕಟಿಸೂತ್ರ, ಕರ್ಣಕುಂಡಲಗಳ ಧಾರಿಯಾದ ಈತನು ಕೌಪೀನ ಧಾರಿ. ಶ್ರೀ ರಾಮದೂತನಾದ ಈತನು ಮಹಾಬಲಶಾಲಿ; ವಜ್ರದೇಹಿ. ಇವುಗಳ ಸಂಕೇತವಾಗಿ ಸಂಜೀವಿನಿ ಪರ್ವತಧಾರಿಯಾಗಿ, ಗದಾಧಾರಿಯಾಗಿ ಈತನನ್ನು ಚಿತ್ರಿಸಲಾಗುತ್ತದೆ.

ಸಕಲ ಭಯಗಳ ನಿವಾರಕನಾಗಿ ಈತನನ್ನು ವಿಹಿತಾಂಜಲಿ ಹನುಮಂತನೆಂದು ರೂಪಿಸುವುದೂ ಉಂಟು.

**ದಹನ ತಪ್ತ ಸುವರ್ಣ ಸಮಪ್ರಭಂ ಭಯಹರಂ ಹೃದಯೇ ವಿಹಿತಾಂಜಲಿಮ್**

**ಶ್ರವಣ ಕುಂಡಲ ಶೋಭಿ ಮುಖಾಂಬುಜಂ ನಮತವಾನರರಾಜ ವಿಹಾದ್ಭುತಮ್ ॥**

ಕಾಯಿಸಿದ ಚಿನ್ನದ ಮೈ ಕಾಂತಿಯಲ್ಲಿರುವ ಈ ದೇವನು ನಮಸ್ಕಾರ ಮುದ್ರೆಯಲ್ಲಿ ನಿಂತಿರುತ್ತಾನೆ. ತನ್ನ ಜೋಡಿಸಿದ ಹಸ್ತಗಳು ಈತನ ವಕ್ಷದ ಮುಂದೆ ಇರುತ್ತವೆ. ಕರ್ಣಕುಂಡಲಗಳಿಂದ ಅಲಂಕೃತವಾಗಿರುವ ಮುಖವು ಬಹುಸುಂದರವಾಗಿದ್ದು ಈ ವಾನರರಾಜನು ಮಹಾದ್ಭುತ ಕಾಯನಾಗಿರುತ್ತಾನೆ.

ಈ ಸ್ವಾಮಿಯ ಪಂಚಮುಖ ರೂಪವೂ ಇದೆ.

**ಪಂಚವಕ್ತ್ರಂ ಮಹಾಭೀಮಂ ತ್ರಿಪಂಚನಯನೈರ್ಯುತಮ್**

**ಕೋಟಿ ಸೂರ್ಯ ಪ್ರತೀಕಾಶಂ ಕಪಿವಕ್ತ್ರಂ ಸುತೇಜಸಮ್ ॥**

**ದಂಷ್ಟ್ರ ಕರಾಳ ವದನಂ ಭೃಕುಟೀ ಕುಟಿಲೇಕ್ಷಣಮ್**

**ಅ ಸ್ಯೈಕಂ ದಕ್ಷಿಣಂ ವಕ್ತ್ರಂ ನಾರಸಿಂಹಂ ಮಹಾದ್ಭುತಮ್ ॥**

**ಅತ್ಯುಗ್ರತೇಜೋವಪುಷಂ ಭೀಷಣಂ ಭಯನಾಶನಮ್**

**ಪಶ್ಚಿಮೇ ಗಾರುಡಂ ವಕ್ತ್ರಂ ವಕ್ರತುಂಡಂ ಮಹಾದ್ಯುತಿ ॥**

**ಪಾತಾಲಸಿದ್ಧಿದಂ ಘೋರಂ ವಿಷಭೂತಾದಿ ಕೃಂತನಮ್**

**ಉತ್ತರಂ ಸೌಕರಂ ವಕ್ತ್ರಂ ಕೃಷ್ಣಂ ದೀಪ್ತಂ ಶಿಖೋಜ್ವಲಮ್ ॥**



ಚಿತ್ರ ೧೩೪ : ವೀರ ಪ್ರತಾಪ ಹನುಮಂತ



ಚಿತ್ರ ೧೩೫ : ವಿಹಿತಾಂಜಲಿ ಹನುಮಂತ

**ಸರ್ವಭೂತ ಪ್ರಶಮನಂ ತಾಪಜ್ವರ ನಿವಾರಣಮ್**
**ಊರ್ಧ್ವಾಂ ಹಯಾನನಂ ಘೋರಂ ದಾನವಾಂತಕರಂ ಪರಮ್ ॥**
**ಖಡ್ಗ ತ್ರಿಶೂಲ ಖಟ್ವಾಂಗ ಪಾಶ ಮಂಕುಶ ಪರ್ವತೌ**
**ಪ್ರಮಗೋಮುದ್ರಿಕಾ ಮುಂಡಂ ದಧಾನಂ ಸುರವಂದಿತಮ್ ॥**

(ಸುದರ್ಶನ ಸಂಹಿತೆ)

ಬಂಗಾರದಂತಹ ಹಳದಿ ಛಾಯೆಯಲ್ಲಿ ಮೈಕಾಂತಿಯನ್ನು ಪಡೆದಿರುವ ಪಂಚಮುಖ ಆಂಜನೇಯಸ್ವಾಮಿಯು ಪ್ರತಿಮುಖದಲ್ಲೂ ಮೂರು ಕಣ್ಣುಗಳಿರುವ ಐದು ಮುಖಗಳನ್ನು ಹೊಂದಿರುತ್ತಾನೆ. ಈತನಿಗೆ ಹತ್ತು ಬಾಹುಗಳು. ಪೂರ್ವದಿಕ್ಕಿನ ಮುಖವು ಕಪಿಮುಖ. ಅದು ಕೋಟಿ ಸೂರ್ಯ ಪ್ರಕಾಶದಿಂದ ಬೆಳಗುತ್ತಿರುತ್ತದೆ. ದಕ್ಷಿಣ ದಿಕ್ಕಿನ ಮುಖವು ನಾರಸಿಂಹ ಮುಖ. ಏರಿಸಿರುವ ಹುಬ್ಬುಗಳಿಂದ ಕ್ರೂರವಾಗಿದ್ದು ಕೋರೆಗಳಿಂದ ಭಯಂಕರವಾಗಿರುತ್ತದೆ. ಪಶ್ಚಿಮ ದಿಕ್ಕಿನ ಮುಖವು ಗರುಡನ ಮುಖ. ಬಹು ತೇಜದಿಂದ ಭಯವನ್ನುಂಟು ಮಾಡುವಂತಹ ಕೊಕ್ಕಿನ ಮೂಗಿನಿಂದ ಕೂಡಿರುತ್ತದೆ. ಇದು ಎಲ್ಲ ಭಯಗಳನ್ನೂ ಓಡಿಸುತ್ತದೆ. ಉತ್ತರ ಮುಖವು ವರಾಹ ಮುಖ. ಕಪ್ಪುಬಣ್ಣದಾಗಿದ್ದು ಕೋರೆಗಳನ್ನು ಹೊಂದಿರುತ್ತದೆ. ಊರ್ಧ್ವ ದಿಕ್ಕಿನ ಮುಖವು ಕುದುರೆ ಮುಖ. ಇದು ಭಯಂಕರವಾದ ದಾನವರನ್ನು ನಶಿಸುವಂತೆ ಮಾಡುತ್ತದೆ. ಎಲ್ಲಾ ಭೂತಗಳ ಚೇಷ್ಟೆಗಳನ್ನು ಜ್ವರ, ನರಳಿಕೆ, ತಾಪಗಳನ್ನು ಪರಿಹರಿಸುತ್ತದೆ.

ಬಲಪಾರ್ಶ್ವದಲ್ಲಿ ಕೆಳಭಾಗದಿಂದ ಮೇಲಕ್ಕೆ ಆಯುಧಗಳನ್ನು ಹಿಡಿದಿರುವ ಕ್ರಮವು ಇಂತಿರುತ್ತದೆ: ಗೋಮುಖ ಮುದ್ರೆ, ಖಡ್ಗ, ತ್ರಿಶೂಲ, ಅಂಕುಶ, ಪರ್ವತ. ಇದೇ ರೀತಿಯಾಗಿ ಎಡಪಾರ್ಶ್ವದಲ್ಲಿ ಕೆಳಭಾಗದಿಂದ ಮೇಲಕ್ಕೆ ಕಪಾಲ, ಖಟ್ವಂಗ, ಪಾಶ, ಕಲ್ಪವೃಕ್ಷ ಎತ್ತಿದಕೈ (ಊರ್ಧ್ವಬಾಹು) ಇರುತ್ತವೆ.

ದೇವತೆಗಳಿಂದ ಸ್ತುತಿಸಲ್ಪಡುತ್ತಿರುವ ಈ ರೂಪದಲ್ಲಿರುವ ಪಂಚಮುಖ ಆಂಜನೆಯಸ್ವಾಮಿಗೆ ನಮಸ್ಕರಿಸುತ್ತಿದ್ದೇನೆ.

## ೪. ವಿಷ್ವಕ್ಸೇನ

ಶೈವಾಲಯಗಳಲ್ಲಿ ಗಣಗಳೆಲ್ಲರ ನಾಯಕರಾಗಿ ಗಣಪತಿ ಇರುವಂತೆ ವೈಷ್ಣವಾಲಯಗಳಲ್ಲಿ ಸಮಾನ ದೇವನು ವಿಷ್ವಕ್ಸೇನನಿರುತ್ತಾನೆ. ಈತನು ಸರ್ವಗಣಾಧ್ಯಕ್ಷ ಅಥವ ವೈಕುಂಠ ಸೇನಾನಿ. ಸ್ವಾಮಿಯನ್ನು ನಾನಾ ಅರ್ಚನಾದಿಗಳಿಂದ ಪೂಜಿಸುವ ಮೊದಲು ಭಕ್ತನಾದವನು ಈ ದೇವನನ್ನು ಪೂಜಸಬೇಕು. ಆದ್ದರಿಂದ ದೇವಾಲಯದಲ್ಲಿ ವಿಷ್ವಕ್ಸೇನನು ವಿಶಿಷ್ಟವಾದ ಸ್ಥಾನವನ್ನು ಪಡೆದಿರುತ್ತಾನೆ.

ಈತನು ಹುಟ್ಟಿದ್ದು ಭಾದ್ರಪದಮಾಸದಲ್ಲಿ ಪೂರ್ವಾಷಾಡ ನಕ್ಷತ್ರದಲ್ಲಿ. ಶ್ರೀವೈಷ್ಣವ ಗುರು ಪರಂಪರೆಯಲ್ಲಿ ಈತನು ಮೂರನೇಯವನು. ಮೊದಲಿಗೆ ವಿಷ್ಣು. ಎರಡನೆಯ ಗುರು ಲಕ್ಷ್ಮೀ. ಮೂರನೆಯವನೇ ವಿಷ್ವಕ್ಸೇನ. ಈತನು ವಿಷ್ಣುವಿನ ನಿರ್ಮಾಲ್ಯಧಾರಿ. ಶ್ರೀವತ್ಸವನ್ನು, ಬ್ರಹ್ಮಸೂತ್ರವನ್ನು ಧರಿಸಿರುವುದಿಲ್ಲ. ಕಾಳಿಕಾಪುರಾಣದಲ್ಲಿ ಈತನು ದೀರ್ಘ ಶ್ಮಶ್ರು ಜಟಾಧಾರಿ ಎಂದು ವರ್ಣಿತವಾಗಿದ್ದಾನೆ. ಚಕ್ರ - ಶಂಖ - ಗದಾ ಧಾರಿಯಾಗಿದ್ದು ನಾಲ್ಕನೆಯ ಹಸ್ತವು ತರ್ಜನಿ ಅಥವ ಪುಷ್ಪ ಹಸ್ತವಾಗಿರಬಹುದು ಎಂದು ಹೇಳುತ್ತದೆ. ಈತನನ್ನು ನವತಾಲದಲ್ಲಿ ರೂಪಿಸಬೇಕು.

(ಅ) ಸಾಧಾರಣವಾಗಿ ಈ ದೇವನು ನಾಲ್ಕು ಭುಜಗಳು ಪಡೆದಿದ್ದು ಶಂಖಚಕ್ರಗಳನ್ನು ಅಭಯ ಅಥವ ಜ್ಞಾನಮುದ್ರೆಯನ್ನು ಮತ್ತು ಗದೆಯನ್ನು ಧರಿಸಿರುತ್ತಾನೆ. ಈತನು ಮುಕ್ತಿ ಹಾಗೂ ಜ್ಞಾನದಾಯಕ ದೇವನೆಂದು ಪ್ರಖ್ಯಾತನಾಗಿದ್ದಾನೆ ಪದ್ಮಪೀಠದಲ್ಲಿ ಮಂಡಿಸಿರುವ ಈತನು ಬಲಗಾಲನ್ನು ಚಾಚಿದ್ದು ಎಡಗಾಲನ್ನು ಮಡಚಿಕೊಂಡಿರುತ್ತಾನೆ. ಜ್ಞಾನದ ಅಧಿದೇವತೆಯು ವಿಷ್ವಕ್ಸೇನ. ಈ ಅಂಶಗಳನ್ನು ಪರಾಶರ ಸಂಹಿತೆಯು (೧೯) ಹೀಗೆ ವಿವರಿಸಿದೆ:

**ಶಂಖ ಚಕ್ರ ಗದಾಸರ್ವಜ್ಞಾನ ಮುದ್ರಾದಿಧಾರಿಣಮ್**
**ಕಿರೀಟಾದಿ ವಿಭೂಷಾಂಗ ಮಾಸೀನಂ ಪದ್ಮಪೀಠಕೇ ॥**



ಚಿತ್ರ ೧೩೭ : ಪಂಚಮುಖ ಆಂಜನೇಯಸ್ವಾಮಿ

ಪ್ರಸಾರ್ಯ ದಕ್ಷಿಣಂ ಪಾದಂ ವಾಮಪಾದಂ ಸುಕುಂಚಿತಮ್
ವಿಷ್ವಕ್ಸೇನ ಮಹಂ ವಂದೇ ಮುಕ್ತಿ ಜ್ಞಾನಾದಿಸಾಧಕಮ್ ||
(ಆ )ಶ್ಯಾಮವರ್ಣಃ ಚತುರ್ಭುಜಃ ಸ್ತರ್ಜನೀ ಶಂಖ ಚಕ್ರಗದಾ ದಧಾನಃ
ಪೀಠಾಧಸ್ತಾ ತ್ಪ್ರ ಸಾರಿತ ದಕ್ಷಿಣಪಾದಃ ಆಕುಂಚಿತ ವಾಮಪಾದಃ ||
ಕಿರೀಟಾದಿ ಸರ್ವಾಲಂಕಾರ ಭೂಷಿತೋ ವಿಷ್ವಕ್ಸೇನಃ

(ಪಾದ್ಮಸಂಹಿತೆ)

ನಾಲ್ಕು ತೋಳುಗಳಿದ್ದು, ಶ್ಯಾಮಲ ವರ್ಣದ ಕಿರೀಟಾದಿ ಆಭರಣಗಳಿಂದ ಅಲಂಕೃತನಾಗಿರುವ ಈ ಸ್ವಾಮಿಯು ಬಲಪಾರ್ಶ್ವದ ಮುಂದಿನ ಹಸ್ತದಲ್ಲಿ ತರ್ಜನಿಮುದ್ರೆಯನ್ನು, ಮೇಲಿನ ಹಸ್ತದಲ್ಲಿ ಚಕ್ರವನ್ನು, ಎಡಪಾರ್ಶ್ವದ ಮುಂದಿನ ಹಸ್ತದಲ್ಲಿ ಗದೆಯನ್ನು, ಮೇಲಿನ ಹಸ್ತದಲ್ಲಿ ಶಂಖವನ್ನು ಧರಿಸಿರುತ್ತಾನೆ. ಸ್ವಾಮಿಯು ಬಲಪಾದವನ್ನು ಪೀಠದಿಂದ ಕೆಳಕ್ಕೆ ಚಾಚಿರುತ್ತಾನೆ. ಎಡ ಪಾದವು ಸ್ವಲ್ಪ ಬಗ್ಗಿ ರುತ್ತದೆ.

(ಇ) ವಿಷ್ವಕ್ಸೇನಂ ಚತುರ್ಬಾಹುಂ ಶ್ಯಾಮವರ್ಣಂ ಕಿರೀಟಿನಮ್
ಲಂಬೋದರಂ ಚ ಮುಖ್ಯೇನ ಕರೇಣಾತಿಭಯದಾಯಿನಮ್ ||
ದಕ್ಷಿಣೇನ ಪ್ರಸವ್ಯೇನ ಸಮಾಲಂಬ್ಯ ಕಟಿಂ ಸ್ಥಿತಮ್
ಆಸೀನಮಪರಾಭ್ಯಾಂ ಚ ಹಸ್ತಾಭ್ಯಾಂ ಶಂಖಚಕ್ರಿಣಮ್ ||
ಅಥವ ಪೂರ್ವಕರಯೋರ್ಗದಾಮೇಕತ್ರ ಕಲ್ಪಯೇತ್
ಅನ್ಯತ್ರ ತರ್ಜನೀ ಮುದ್ರಾಂ ಯದ್ವಾ ದಕ್ಷಿಣ ಹಸ್ತಯೋಃ ||
ಮುಖ್ಯೇತಿಭಿತಿರಮುಖ್ಯೇ ತು ಚಕ್ರಮನ್ಯತ್ರ ಹಸ್ತಯೋಃ
ಗದಾಂ ಮುಖ್ಯೇ ಜಘನ್ಯೇ ತು ಶಂಖಂ ಚ ಪರಿಕಲ್ಪಯೇತ್ ||
ಶಂಖ ಚಕ್ರಧರಂ ಯದ್ವಾ ಸ್ಥಿತಂ ಮುಖ್ಯೇ ಕರದ್ವಯೇ
ಬಿಭ್ರಾಣಂ ಕ್ಷುರಿಕಾಂ ವೇತ್ರಂ ಕೃತಜ್ಞಾಂಜಲಿಪುಟಂ ಸ್ಥಿತಮ್ ||
ದೇವೀಂ ಚ ವಿಷ್ವಕ್ಸೇನಸ್ಯ ವಾಮಪಾರ್ಶ್ವೇ ಪ್ರತಿಷ್ಠಿತಾಮ್
ನಾಮ್ನಾ ಪುಷ್ಪಧರಾಂ ಕುರ್ಯಾತ್ಕಮಲಾಮಿವ ಲಕ್ಷಣಾಮ್ ||

(ಪಾದ್ಮಸಂಹಿತೆ, ಕ್ರಿ : ೨೨ : ೩೭ - ೪೧)

ಶ್ಯಾಮಲವರ್ಣದ ವಿಷ್ವಕ್ಸೇನ ಮೂರ್ತಿಯು ನಾಲ್ಕು ತೋಳುಗಳನ್ನು ಪಡೆದಿರುತ್ತಾನೆ. *ಲಂಬೋದರ*ನಾಗಿರುವ ಈ ಸ್ವಾಮಿಯ ಮುಂದಿನ ಹಸ್ತದಲ್ಲಿ ಅಭಯ ಮುದ್ರೆ ಇರುತ್ತದೆ. ಇನ್ನೊಂದು ಹಸ್ತವು ಕಟ್ಯಾವಲಂಬಿತ ಹಸ್ತವಾಗಿ ರೂಪಿಸ ಬೇಕು. ಮೇಲಿನ ಹಸ್ತಗಳಲ್ಲಿ ಶಂಖ ಚಕ್ರಗಳಿರುತ್ತವೆ.

ಅಥವಾ ಮುಂದಿನ ಹಸ್ತಗಳಲ್ಲಿ ಒಂದರಲ್ಲಿ ಗದೆ ಹಿಡಿದಿರುವಂತೆ ರೂಪಿಸಿ ಇನ್ನೊಂದರಲ್ಲಿ ತರ್ಜನೀ ಮುದ್ರೆಯನ್ನು ರೂಪಿಸಬೇಕು. ಮೇಲಿನ ಹಸ್ತಗಳಲ್ಲಿ ಶಂಖ ಚಕ್ರಗಳನ್ನು ಧರಿಸಿರಬೇಕು.

ಅಥವಾ ಈ ಮೂರ್ತಿಯು ಶಂಖ - ಚಕ್ರ ಮೇಲಿನ ಹಸ್ತಗಳಲ್ಲಿ ಖಡ್ಗ - ದಂಡವನ್ನು ಮುಂದಿನ ಹಸ್ತಗಳಲ್ಲಿ ಹಿಡಿದಿರಬಹುದು. ಅಥವ ಕೃತಜ್ಞಾಂಜಲಿಯಲ್ಲಿ ನಿಂತಿರಬಹುದು.

ವಿಷ್ವಕ್ಸೇನನ ಎಡ ಪಾರ್ಶ್ವದಲ್ಲಿ ದೇವಿ ನಿಂತಿರಬೇಕು. ಆಕೆಯು ಒಂದು ಕೈಯಲ್ಲಿ ಕಮಲವನ್ನು ಹಿಡಿದಿರುತ್ತಾಳೆ.

ಲಂಬೋದರ ಎನ್ನುವ ಕಾರಣದಿಂದ ಈತನು ಗಜಮುಖನಲ್ಲ. ಗಜಮುಖನಾದ ವೈಷ್ಣವ ಗಣೇಶ್ವರನೇ ಪ್ರತ್ಯೇಕವಾಗಿರುತ್ತಾನೆ. ಈ ಬಗ್ಗೆ ಸೂಕ್ತ ಸಂದರ್ಭದಲ್ಲಿ ವಿವರಣೆ ನೀಡಲಾಗುವುದು.



ಚಿತ್ರ ೧೩೭ : ವಿಷ್ವಕ್ಸೇನ

## ೫. ಸುದರ್ಶನ ಮೂರ್ತಿ

ವಿಷ್ಣುವಿನ ಚಕ್ರದ ಹೆಸರು ಸುದರ್ಶನ . ಇದರ ಮೂರ್ತಿರೂಪವೇ ಈ ಸ್ವಾಮಿ. ಶ್ರೀವೈಷ್ಣವರು ಇದನ್ನು *ಚಕ್ರತ್ತಾಳ್ವರ್* ಎಂದೂ ಕರೆಯುತ್ತಾರೆ. ಆಯುಧವಾಗಿ ಚಕ್ರಕ್ಕೆ ವಿಶೇಷವಾದ ಗೌರವ ಉಂಟು. ಸುದರ್ಶನವನ್ನು ಸ್ವತಂತ್ರ ಆಲಯವನ್ನಾಗಿ ನಿರ್ಮಿಸಿ ಪೂಜಿಸುವುದೂ ಉಂಟು. ಇದು ಬಹು ಕ್ರೂರವಾಗಿಯೇ ನಿರೂಪಿತವಾಗಿದ್ದರೂ ಭಕ್ತರ ಪಾಲಿನ ತವನಿಧಿ. ಸಂಪತ್ತು, ಆರೋಗ್ಯ, ಇಷ್ಟಾರ್ಥಸಿದ್ಧಿಗಾಗಿ ಭಕ್ತರು ಈ ಸ್ವಾಮಿಗೆ ವಿಶೇಷ ಪೂಜೆಗಳನ್ನು ಸಲ್ಲಿಸುತ್ತಾರೆ. ಈ ದೇವನಿಗೆ ನಾಲ್ಕು, ಆರು, ಎಂಟು, ಹದಿನಾರು ಅಥವ ಮುವ್ವತ್ತೆರಡು ಬಾಹುಗಳಿರುವಂತೆ ರೂಪಿಸಬಹುದು.

**ಶಂಖಂ ಚಕ್ರಂ ಚ ಪಾಶಂ ಪರಶು ಮುಸಿಮಿಷುಂ ಶೂಲಚಾಪಾಂಕುಶಾಗ್ನಿಂ**
**(ಬಿ ಭೃತ್ತಂ) ಬಿಭ್ರಾಣಂ ವಜ್ರಖೇಟಂ ಹಲಮುಸಲಗದಾ ಕುಂತ ಮತ್ಯುಗ್ರದಂಷ್ಟ್ರಮ್ ।**
**ಜ್ವಾಲಾ ಕೇಶಂ ತ್ರಿನೇತ್ರಂ ಜ್ವಲದನಲ ನಿಭಂ ಹಾರಕೇಯೂರಭೂಷಂ**
**ಧ್ಯಾಯೇ ತ್ಷಟ್ಕೋಣ ಸಂಸ್ಥಂ ಸಕಲರಿಪುಜನ ಪ್ರಾಣ ಸಂಹಾರ ಚಕ್ರಮ್ ॥**

(ಪಾಂಚರಾತ್ರಾಗಮ)

ಉರಿಯುತ್ತಿರುವ ಬೆಂಕಿಯಂತೆ ಕೆಂಪು ಮೈಕಾಂತಿಯಿಂದ ತೇಜೋವಂತನಾಗಿದ್ದು, ಮೂರು ಕಣ್ಣುಗಳುಳ್ಳ ಒಂದೇ ಮುಖದಲ್ಲಿ ಭಯಂಕರವಾದ ಕೋರೆಗಳಿರುತ್ತವೆ. ಅಗ್ನಿ ಜ್ವಾಲೆಗಳಂತೆ ಕೇಶಗಳು ಹದಿನಾರು ತೋಳುಗಳಿರುತ್ತವೆ. ಹಾರಗಳು, ಮಾಲೆಗಳು, ಆಭರಣಗಳು ಮುಂತಾದ ಸರ್ವಾಲಂಕಾರಗಳೊಂದಿಗೆ ಆರು ಕೋಣಗಳುಳ್ಳ ಪೀಠದ ಮೇಲೆ ಕುಳಿತಿರುತ್ತಾನೆ.

ಹದಿನಾರು ತೋಳುಗಳ ಈ ಸ್ವಾಮಿಯ ಬಲ ಪಾರ್ಶ್ವದ ಹಸ್ತಗಳಲ್ಲಿ ಕೆಳಗಿನಿಂದ ಮೇಲಕ್ಕೆ ಕ್ರಮವಾಗಿ ಶೂಲ, ಖಡ್ಗ, ಮುಸಲ, ನೇಗಿಲು, ಪರಶು (ಕೊಡಲಿ), ಬಾಣ, ಅಂಕುಶ, ಚಕ್ರ ಇರುತ್ತವೆ. ಇದೇ ರೀತಿಯಾಗಿ ಎಡ ಪಾರ್ಶ್ವದ ಹಸ್ತಗಳಲ್ಲಿ ಕೆಳಗಿನಿಂದ ಮೇಲಕ್ಕೆ ಕ್ರಮವಾಗಿ ಗದೆ, ಖೇಟಕ, ಪಾಶ, ಕುಂತ, ಅಗ್ನಿ, ಬಿಲ್ಲು, ವಜ್ರ, ಶಂಖ ಇರುತ್ತವೆ.

ಈ ರೂಪದಲ್ಲಿ ಸಕಲ ಶತ್ರು ಜನವನ್ನು ಸಂಹರಿಸುವ ಶ್ರೀ ಸುದರ್ಶನ ಮೂರ್ತಿಯನ್ನು ಧ್ಯಾನಿಸೋಣ.

ಶಿಲ್ಪರತ್ನದಲ್ಲಿಯೂ ಇದೇ ರೀತಿಯ ಧ್ಯಾನವಿದೆ.

(ಅ) ಈ ಮೂರ್ತಿಯನ್ನು ನಾರಸಿಂಹ ಮೂರ್ತಿಯೊಂದಿಗೆ ಸೇರಿಸಿ ಉಪಾಸನೆ ನಡೆಸುವ ವಾಡಿಕೆಯೂ ಇದೆ. ವಿಹಗೇಂದ್ರ ಸಂಹಿತೆಯಲ್ಲಿ (೪ : ೧ - ೬) ದೊರೆಯುವ ಈ ಧ್ಯಾನಶ್ಲೋಕವನ್ನು ನೋಡಿ.

**ಶೃಣು ರಾಜನ್ ಮಹಾವೀರ ಚಕ್ರಮೂರ್ತಿ ವಿಶೇಷಕಮ್**
**ಪೂರ್ವಂ ಸುದರ್ಶನಂ ದೇವಪರೇಣ ನ್ರಸಿಂಹಕಮ್ ॥**
**ಅಷ್ಟಬಾಹುಸ್ತ್ವಥಾಷ್ಟಷ್ಟೌ ಷೋಡಶ ಸ್ಮೃತಃ**
**ಯಾವದ್ಬಾಹು ವಿವೃದ್ಧಿಃ ಸ್ಯಾತ್ ತಾವದ್ಬಾಹು ವಿವೃದ್ಧಿಕಮ್ ॥**
**ಸರ್ವೇಷು ಚಕ್ರಂ ಬಿಭೃಯಾತ್ ಅಪರಾಂಗೇ ವಿಶೇಷತಃ**
**ಅಷ್ಟಾಯುಧಧರಂ ದೇವಮಷ್ಟಾಯುಧ ಧರೇಣ ಚ ॥**
**ನೃಹರಿ ಸ್ಥಾನಕೇ ಪೂರ್ವೇ ಪಾದ್ಮಾದ್ಯಷ್ಟಾಯುಧಂ ಭವೇತ್**
**ಅಪರೇ ಸುದರ್ಶನಂ ಚೈವ ಚಕ್ರಧೃಕ್ ಚಕ್ರ ಬಾಹುಕಃ ॥**
**ಅಷ್ಟಬಾಹುಸ ಕೋ ದೇವೋ ತತ್ಕುರ್ಯಾತ್ ಸ್ಥಾನಕಂ ಭವೇತ್**
**ಆಲಿಖ್ಯ ಷೋಡಶಭುಜ ಮಪರಾಂಗೇ ನೃಸಿಂಹಕಮ್ ॥**
**ಸುದರ್ಶನ ನೃಸಿಂಹಂ ಚ ನರಸಿಂಹಂ ಸುದರ್ಶನಮ್**
**ಸುದರ್ಶನೇ ನೃಸಿಂಹೇ ವಾ ವಿಕರೂಪ ಮಿಹೋಚ್ಯತೇ ॥**

ವಿಶೇಷವಾದ ಚಕ್ರಮೂರ್ತಿಯ ಧ್ಯಾನವನ್ನು ತಿಳಿಸುತ್ತೇವೆ. ಮುಂದೆ ಸುದರ್ಶನಮೂರ್ತಿ ಹಿಂಭಾಗದಲ್ಲಿ ನೃಸಿಂಹಮೂರ್ತಿಯನ್ನು ರೂಪಿಸಬೇಕು. ಸುದರ್ಶನಮೂರ್ತಿಗೆ ಹದಿನಾರು ತೋಳುಗಳು ಇರುತ್ತವೆ. ದೇವನು ಹದಿನಾರು ಆಯುಧಗಳನ್ನು ಧರಿಸಿರುತ್ತಾನೆ. ನರಸಿಂಹಸ್ವಾಮಿಯು ನಾಲ್ಕು ತೋಳು ಪಡೆದಿರುತ್ತಾನೆ. ಒಂದುವೇಳೆ ಮುಂಭಾಗದ ಸುದರ್ಶನ

ಸ್ವಾಮಿಯು ಎಂಟು ತೋಳು ಇದ್ದರೆ ಇನ್ನೊಂದು ಕಡೆ ಅದೇ ಮೂರ್ತಿಯನ್ನು ರೂಪಿಸಬಹುದು. ಆಗ ನರಸಿಂಹ ಮೂರ್ತಿಯನ್ನು ರೂಪಿಸಬೇಕಾಗಿಲ್ಲ. ನೃಸಿಂಹಮೂರ್ತಿ ಇದ್ದಾಗ ಇದನ್ನು ಸುದರ್ಶನ ನೃಸಿಂಹ ಎಂದು ಕರೆಯಬಹುದು.ನರಸಿಂಹನಿಗೂ ಸುದರ್ಶನಿಗೂ ಅಂತರವೇ ಇಲ್ಲ ಎಂಬುದು ಶಾಸ್ತ್ರದ ಘೋಷಣೆ.

(ಇ) ಪಾಂಚರಾತ್ರಾಗಮದಲ್ಲಿ ಈ ರೀತಿಯ ಧ್ಯಾನವು ದೊರೆಯುತ್ತದೆ

**ತಿರ್ಯಗ್ ಜ್ವಾಲಾಗ್ನಿ ರೂಪಂ ಜ್ವಲಿತ ಶಿಖಿ ಶಿಖೋತ್ತುಂಗ ಕೇಯೂರ ಬಾಹುಂ**
**ಪಿಂಗಾಕ್ಷಂ ದೀಪ್ತ ಜಿಹ್ವಂ ದಶಶತ ವಿಲಸತ್ತೀಕ್ಷ್ಣಧರಾತಿರೌದ್ರಮ್ ।**
**ಶಾರ್ಙ್ಗಂ ಚಕ್ರಾಬ್ಜ ಶಂಖಾನ್ ಶರ ಮುಸಲಧರಂ ಸರ್ವ ಶತ್ರೂನ್ ದಹಂತಂ**
**ಷಟ್ಕೋಣಾಭ್ಯಂತರಸ್ಥಂ ರವಿನಿಯುತನಿಭಂ ಚಕ್ರರಾಜಂ (ಪ್ರಸನ್ನಮ್) ನಮಾಮಿ ॥**

ಸುದರ್ಶನ ಚಕ್ರಮೂರ್ತಿಯು ಉರಿಯುತ್ತಿರುವ ಅಗ್ನಿಯಂತೆ ಕೆಂಪು ಮೈಕಾಂತಿಯಿಂದ ದಪ್ಪವಾದ ಕಡಗಗಳುಳ್ಳ ತೋಳುಗಳು, ತಿಳಿಹಳದಿ ಬಣ್ಣದ ಕಣ್ಣುಗಳು ಪಡೆದಿದ್ದು ಸಾವಿರ ಸೂರ್ಯಕಾಂತಿಯಿಂದ, ಆರು ತೋಳುಗಳಿಂದ ಪ್ರಕಾಶಿಸುತ್ತಿರುವ ನಾಲಿಗೆಯಿಂದ ಆರು ಕೋಣಗಳುಳ್ಳ ಪೀಠದ ಮಧ್ಯೆ ಇರುತ್ತಾನೆ. ಬಲ ಪಾರ್ಶ್ವದಲ್ಲಿ ಕೆಳಹಸ್ತದಿಂದ ಮೇಲಕ್ಕೆ ಕ್ರಮವಾಗಿ ಚಕ್ರ, ಬಾಣ, ಮುಸಲ ಹಾಗೆಯೇ ಎಡಪಾರ್ಶ್ವದಲ್ಲಿ ಕೆಳಗಿನಿಂದ ಮೇಲಕ್ಕೆ ಶಂಖ, ಧನುಸ್ಸು (ಶಾರ್ಙ್ಗ), ಪದ್ಮ ಧರಿಸಿರುತ್ತಾನೆ.

ಇಂತಹ ರೂಪದಲ್ಲಿರುವ ಪ್ರಸನ್ನ ಸುದರ್ಶನ ಚಕ್ರಮೂರ್ತಿಯನ್ನು ನಮಸ್ಕರಿಸುತ್ತೇನೆ.

ಸುದರ್ಶನ ಚಕ್ರ ರೂಪದಲ್ಲ ಈ ಮೂರ್ತಿಯನ್ನು ಆವರಣದೇವನಾಗಿಯೂ ರೂಪಿಸುತ್ತಾರೆ. ಆಗ ಚಕ್ರಮೂರ್ತಿಯು ನರಾಕಾರದಲ್ಲಿಯೂ ಇರಬಹುದು ಅಥವ ಕೇವಲ ಚಕ್ರಾಕಾರವಾಗಿಯೂ ಇರಬಹುದು. ಈ ವಿಷಯವನ್ನು ಆವರಣದೇವತೆಗಳನ್ನು ವಿವರಿಸುವಾಗ ಪ್ರತ್ಯೇಕವಾಗಿ ವಿವರಿಸಲಾಗುತ್ತದೆ.

## ೬. ದ್ವಾರಪಾಲಕರು

ಯಾವುದೇ ದೇವನಾದರೂ ದ್ವಾರ ಪಾಲಕರಿಲ್ಲದೆ ಇರುವುದು ಸಾಧ್ಯವಿಲ್ಲ. ಆದ್ದರಿಂದ ಆಲಯದ ಪ್ರವೇಶ ದ್ವಾರದಲ್ಲಿ, ಗರ್ಭಗುಡಿಯ ಬಾಗಿಲಿನ ಇಕ್ಕೆಲಗಳಲ್ಲಿ ದ್ವಾರ ಪಾಲಕರು ಇರುತ್ತಾರೆ. ಇವರು ಸದಾ ಜೊತೆಯಾಗಿರುತ್ತಾರೆ. ವಿಷ್ಣುವಿನ ದೇವಾಲಯಗಳಲ್ಲಿ ಇವರ ಹೆಸರುಗಳು ( i ) ಚಂಡ - ಪ್ರಚಂಡ, ( ii ) ಧಾತೃ - ವಿಧಾತೃ, ( iii ) ಜಯ - ವಿಜಯ, (iv) ಭದ್ರ - ಸುಭದ್ರ. ಇವರನ್ನು ಗಣೇಶ್ವರರು ಎನ್ನುತ್ತಾರೆ. ಇವರ ಸಾಮಾನ್ಯ ಲಕ್ಷಣಗಳು ಇಂತಿರುತ್ತವೆ.

ದ್ವಾರಪಾಲಕರು ಸದಾ ನಿಂತೇ ಇರುತ್ತಾರೆ. ಇವರು ದೃಢಕಾಯರಾಗಿರುತ್ತಾರೆ. ಇವರು ಪುಷ್ಪಮಾಲೆಗಳನ್ನು ಧರಿಸಿರುವುದಿಲ್ಲ. ಇವರಿಗೆ ತಲೆಯ ಹಿಂದೆ ಪ್ರಭಾವಲಯಗಳು ಇರಕೂಡದು. ಇವರು ಸದಾ ಆಯುಧಧಾರಿಗಳಾಗಿರುತ್ತಾರೆ. ಇವರು ಗರ್ಭಗುಡಿಯ ಅಥವ ದೇವಾಲಯದ ಬಾಗಿಲುಗಳ ಇಕ್ಕೆಲಗಳಲ್ಲೂ ಇರುತ್ತಾರೆ. ಸದಾ ಇವರು ಜೋಡಿಗಳಾಗಿಯೇ ಇರುತ್ತಾರೆ.

**(i) ಚಂಡ - ಪ್ರಚಂಡ**

ಇವರ ಬಗ್ಗೆ ಪಾರಮೇಶ್ವರ ಸಂಹಿತೆ (೧೧ : ೧೨ - ೧೯), ಪೌಷ್ಕರ ಸಂಹಿತೆ (೪ : ೧೬೩ - ೧೬೯) ಮತ್ತು ಈಶ್ವರ ಸಂಹಿತೆ (೯ : ೧೨ - ೧೮) ಈ ರೀತಿ ವಿವರಣೆಗಳನ್ನು ಹೇಳಿವೆ.

**ತರುಣಾದಿತ್ಯ ಸಂಕಾಶೋ ಮಹೋರಸ್ಕಶ್ಚತುರ್ಭುಜಃ**
**ಉನ್ನತಶ್ಚೋನ್ನತಾಂಸಶ್ಚ ಪೂರ್ಣಾಂಗೋ ನಾತಿ ಮಾಂಸಲಃ ॥**
**ತನೂದರೋ ನಿಮ್ನ ನಾಭೋ ರೋಮರಾಜಿವಿ ರಾಜಿತಃ**
**ದಂಷ್ಟ್ರಾ ಕರಾಲವದನಃ ಪಿಂಗಶ್ಮಶ್ರು ಜಟಾಧರಃ ॥**
**ಮಧು ಪಿಂಗಲನೇತ್ರಶ್ಚ ಕುಟಿಲ ಭ್ರೂಲತಾಯುತಃ**
**ಪ್ರಲಂಬಲೋಲಶ್ರವಣಃ ಪೃಥು ಘ್ರಾಣಃ ಸ್ಮಿತಾನನಃ**
**ಕುಂಡಲಾಲಂಕೃತ ಶ್ಚೈವ ಹಾರಕೇಯೂರ ಭೂಷಿತಃ ॥**



(ಗಮನಿಕೆ : ಈ ಮೂರ್ತಿಯ ಹಿಂಭಾಗದಲ್ಲಿ ನೃಸಿಂಹ ಮೂರ್ತಿಯನ್ನು ರೂಪಿಸಿ ಒಂದಾಗಿಯೇ ಪೂಜಿಸುವ ವಾಡಿಕೆ ಇದೆ. ಹಾಗೆ ರೂಪಿಸುವ ನೃಸಿಂಹ ಮೂರ್ತಿಯ ಚಿತ್ರವನ್ನು ಪುಟ ೯೧ (ಚಿತ್ರ ೧೯) ಕೊಡಲಾಗಿದೆ. ಈ ಮೂರ್ತಿಯನ್ನು ಪಂಚಲೋಹ, ಬೆಳ್ಳಿ, ಚಿನ್ನಗಳಲ್ಲಿ ತಯಾರಿಸಿ ಪೂಜಿಸಬಹುದು).

**ಚಿತ್ರ ೧೩೮ : ಸುದರ್ಶನ ಚಕ್ರಮೂರ್ತಿ**

ಬದ್ಧೋಷ್ಣೀಷ ಲಲಾಟಶ್ಚ ತಿಲಕೇ ಸಾಪ್ಯಲಂಕೃತಃ
ಶುಕ್ಲಾಂಬರಧರಃ ಸ್ರಗ್ವೀ ಭುಜಯುಗ್ಮೋಽಪಿಸ್ಯ ದಕ್ಷಿಣೇ
ಪ್ರೋದ್ಯತಂ ಸಂಸ್ಮರೇಚ್ಚಕ್ರಂ ಪ್ರಜ್ವಲಂತೀಂ ಗಾದಾಂ ಪರೇ ॥
ಪ್ರೋಣೀತಟನ್ನಿಷಣ್ಣಾಂ ಚ ವಿಶ್ರಾಂತಾಂ ವಸುಧಾತಲೇ
ಪೂರ್ವೇ ವಾಮಕರೇ ಶಂಖಮನ್ಯಸ್ಮಿಂಶ್ಚಾಕ್ಷಸೂತ್ರಕಮ್ ॥
ಏವಂ ಗಣಾಧಿಪಶ್ಚಂಡೋ ವಿಕ್ರಮೇಣಾಪರಾಜಿತಃ
ಕೃದ್ಧೋ ವಿಶ್ವಾಯುತಾನಾಂ ಚ ಕ್ಷಣಾ ತ್ಸಂಹರಣಕ್ಷಮಃ ॥
ಧ್ಯೇಯೋ ಗರ್ಭಗೃಹದ್ವಾರ ಶಾಖಾಮೂಲೇ ತು ದಕ್ಷಿಣೇ

ಬಾಲಸೂರ್ಯನಂತೆ ಪ್ರಕಾಶಮಾನವಾಗಿದ್ದು ವಿಶಾಲವಾದ ವಕ್ಷಸ್ಥಳವನ್ನು ಪಡೆದುಕೊಂಡು ನಾಲ್ಕು ತೋಳುಗಳು, ತುಂಬಿ ದುಂಡಾಗಿರುವ ಅಂಗಾಂಗ ಸೌಷ್ಟವ ಪಡೆದುಕೊಂಡು, ನಾಭಿಯ ಅಡಿಪ್ರದೇಶವೆಲ್ಲಾ ರೋಮಗಳಿಂದ ತುಂಬಿದ್ದು, ಕೋರೆಗಳಿಂದ ಭಯಂಕರವಾಗಿರುವ ಮುಖ, ಮೀಸೆ ಮತ್ತು ಜಟೆಗಳಿಂದ ಶೋಭಾಯಮಾನವಾಗಿರುವ, ಪಿಂಗಳ ಅಥವ ಮಧುವರ್ಣದ ಕಣ್ಣುಗಳು, ಪೊದರಾಗಿರುವ ಹುಬ್ಬುಗಳು, ಕರ್ಣಕುಂಡಲ, ಹಾರ ಕೇಯೂರಗಳಿಂದ ಅಲಂಕೃತರಾಗಿರುವ ಅವರು ಅಲಂಕೃತಗೊಂಡ ಜಟೆ ಮತ್ತು ಉಷ್ಣೀಷಗಳೊಂದಿಗೆ ಹಣೆಯಲ್ಲಿ ತಿಲಕವನ್ನು ಧರಿಸಿರುತ್ತಾರೆ. ಬಿಳಿಯ ಬಟ್ಟೆಗಳನ್ನು ಧರಿಸಿದ್ದು ಮೇಲಿನ ಹಸ್ತಗಳಲ್ಲಿ ಶಂಖ - ಚಕ್ರಗಳನ್ನು ಧರಿಸಿರುತ್ತಾರೆ. ಮುಂದಿನ ಹಸ್ತಗಳಲ್ಲಿ ಒಂದರಲ್ಲಿ ಗದೆ ಹಿಡಿದಿರುತ್ತಾನೆ. ಇನ್ನೊಂದು ಹಸ್ತದಲ್ಲಿ ಅಕ್ಷಸೂತ್ರವನ್ನು ಧರಿಸಿರುತ್ತಾನೆ. ಇವನು ಗಣಾಧಿಪನಾದ ಚಂಡ. ಬಹು ವಿಕ್ರಮರನ್ನು ಸೋಲಿಸಿರುವನು. ಬಯಸಿದರೆ ಅರೆಕ್ಷಣದಲ್ಲಿ ಎಂಥಾ ವೀರನನ್ನಾದರೂ ಕೊಲ್ಲಬಲ್ಲ ಸಾಮರ್ಥ್ಯ ಇರುವವನು. ಇಂಥ ಚಂಡನು ಗರ್ಭಗೃಹದ ಬಲಭಾಗದಲ್ಲಿ ಕಾವಲಾಗಿರುತ್ತಾನೆ. ಇವನಂತೆಯೇ ಪ್ರಚಂಡನು ಇರುತ್ತಾನೆ. ಅವನು ಎಡ ಭಾಗದಲ್ಲಿ ಕಾವಾಲಾಗಿ ನಿಂತಿರುತ್ತಾನೆ.

**(ii) ಧಾತೃ - ವಿಧಾತೃ**

ಅಥಾಗ್ರಮಂಟಪ ದ್ವಾರಶಾಖಾಯುಗಲ ಸಂಸ್ಥಿತೌ
ಪದ್ಮಗರ್ಭ ಪ್ರತೀಕಾಶಾವತೀ ಭೀಮ ಪರಾಕ್ರಮೌ ॥
ಚಂಡ ಪ್ರಚಂಡಸದೃಶೌ ಭುಜಲಾಂಛನ ಭೂಷಣೌ
ರಕ್ತಾಂಬರಧರೌ ಚೈವ ರಕ್ತ ಸ್ರಗನುಲೇಪನೌ ॥
ಗಣೌ ಧಾತೃವಿಧಾತಾರೌ ಧ್ಯಾತ್ವಾ ಸಂಪೂಜ್ಯ ತತ್ಪರಃ

(ಈಶ್ವರ ಸಂಹಿತೆ, ೯ : ೨೯ - ೩೧, ಪಾರಮೇಶ್ವರ ೧೧ : ೨೮ - ೩೦)

ಅಗ್ರಮಂಟಪದ ದ್ವಾರದ ಇಕ್ಕೆಲಗಳಲ್ಲೂ ಇವರು ನಿಂತಿರುತ್ತಾರೆ. ಇವರು ಚಂಡ ಪ್ರಚಂಡರಂತೆ ಅತುಳ ಪರಾಕ್ರಮಿಗಳು. ಭುಜಲಾಂಛನಗಳನ್ನು, ಆಭೂಷಣಗಳನ್ನು ಧರಿಸಿರುತ್ತಾರೆ. ಕೆಂಪುವಸ್ತ್ರ ಧರಿಸಿ, ರಕ್ತ ಚಂದನವನ್ನು ಧರಿಸಿರುತ್ತಾರೆ. ಧಾತೃ ವಿಧಾತೃಗಳು ನಾಲ್ಕು ಬಾಹುಗಳನ್ನು ಅಥವ ಎರಡು ಬಾಹುಗಳನ್ನು ಹೊಂದಿರುವಾಗ ಇವರು ಹಳದಿವರ್ಣದ ವಸ್ತ್ರಗಳನ್ನು ಧರಿಸಿರುತ್ತಾರೆ (**ಚತುರ್ಬಾಹುಂ ದ್ವಿಬಾಹುಂ ಧ್ಯಾಯೇತ್ ದ್ವಾರಸ್ಯ ವಾಮಕೇಂ ಧಾತಾರಂ ಪೀತವರ್ಣಂ ತು ವಿಧಾತಾರಮನು ಪ್ರಭಮ್॥**)

**(iii) ಜಯ - ವಿಜಯ :**

ಅತಸೀ ಕುಸುಮಶ್ಯಾಮೌ ಪೀತಾಮಾಲ್ಯಂಬರಾನ್ವಿತೌ
ಕಿರೀಟೋಷ್ಣೀಷಧರೌ ರೌದ್ರೌ ಪ್ರಾಗ್ವಿದ್ಭುಜವಿಭೂಷಿತೌ ॥
ಗಣೌ ಚಂಡಕೃತಿಧರೌ ದುರ್ದಶೌ ದುರಾತಿಕ್ರಮೌ
ಜಯಂ ಚ ವಿಜಯಂ ಚ ನಾಮ್ನಾ ಪ್ರತ್ಯಗ್ಭಾಗೇ ತಥಾ ನ್ಯಸೇತ್ ॥

(ಪೌಷ್ಕರ ಸಂಹಿತೆ, ೪ : ೧೭೫ - ೧೭೬, ಈಶ್ವರ ಸಂಹಿತೆ, ೯ : ೪೯ - ೫೧, ಪಾರಮೇಶ್ವರ ಸಂಹಿತೆ ೧೧ : ೫೪ - ೫೫)



ಚಿತ್ರ ೧೩೯ : ಚಂಡ



ಚಿತ್ರ ೧೪೦ : ಭದ್ರ



ಚಿತ್ರ ೧೪೧ : ಸುಭದ್ರ

ಅಗಸೇ ಹೂವ್ವಿನಂತೆ ಕೆಂಪು ಬಣ್ಣದ ಮಾಲೆಯನ್ನು ಧರಿಸಿದ್ದು ಅದೇ ಬಣ್ಣದ ಉಷ್ಣೀಷ ಧರಿಸಿರುವವರು, ಬ್ರಾಹ್ಮಣ ವೇಷದಲ್ಲಿ (ಎಂದರೆ ಕಚ್ಚೆಪಂಚೆ - ಅಂಗ್ರವಸ್ತ್ರವನ್ನು ಧರಿಸಿದ್ದು) ಚಂಡನಂತೆಯೇ ಇರುವ ಇವರು ಬಹುಬಲಶಾಲಿಗಳು. ಇವರನ್ನು ಜಯ - ವಿಜಯ ಎನ್ನುತ್ತಾರೆ.

**(iv) ಭದ್ರ - ಸುಭದ್ರ**

**ಕ್ಷೀರ ಕುಂದಾವದಾತೌ ಚ ನೀಲಕೌಶೇಯ ವಾಸಸೌ ||**
**ನೀಲನೀರಜವರ್ಣಾಭೌ: ಪುಷ್ಪೈರ್ಭೂಷಿತ ವಿಗ್ರಹೌ**
**ಪೂರ್ವೋಕ್ತ ಗಣ ಸಾದೃಶ್ಯೌ ನಾಮ್ನ ಭದ್ರ ಸುಭದ್ರಕೌ ||**
**ತದ್ದ್ವಾರ ಬಾಹ್ಯತಃ ಪಶ್ಚಾತ್ಪಾರ್ಶ್ವ ಯೋರ್ಗೋಪುರಸ್ಥಿತೌ**
**ಏತೌ ಗಣೇಶ್ವರೌ ನ್ಯಸೇತ್ ಧ್ಯಾತ್ವಾ ವಾ ಪರಿಕಲ್ಪ್ಯ ವಾ ||**
**ಅಥವಾ ದ್ವಿಭುಜಾವೇತೌ ತದಾ ಭದ್ರಸ್ಯ ದಕ್ಷಿಣಮ್**
**ಕರಂ ತು ತರ್ಜನೀಯುಕ್ತಂ ವಾಮಮೀಷತ್ತು ಕುಂಚಿತಾಮ್ ||**
**ಗದಾಗ್ರೇ ಪರಿ ವಿಶ್ರಾಂತಂ ಗದಮೂಲೋಪರಿ ಸ್ಥಿತಮ್**
**ವ್ಯತ್ಯಸ್ಥಂ ದಕ್ಷಿಣಂ ಪಾಮಂ ಪಾದಂ ತು ಭುವಿ ಸಂಸ್ಥಿತಮ್ ||**
**ಭದ್ರಸ್ಯ ವಾಮಯೋರ್ವಿಪ್ರಾ ಯದುಕ್ತಂ ಪಾಣಿಪಾದಯೋ:**
**ದಕ್ಷಿಣಯೋಸ್ತತ್ಸುಭದ್ರಸ್ಯ ದಕ್ಷೋಕ್ತಂ ವಾಮಕಂ ಭವೇತ್ ||**
**ಕಿಂತು ತದ್ವಾಮಹಸ್ತಂ ತು ಯುಕ್ತಂ ವಿಸ್ಮಯಮುದ್ರಯಾ**
**ಯದ್ವಾ ಭದ್ರೋ ದಕ್ಷಕರೋಕಭಿತಿ ಮುದ್ರಾಸಮನ್ವಿತಃ ||**
**ಗದೋ ಪರಿಸ್ಥ್ಯಾದಿ ಶ್ರಾಂತ ವಾಮಹಸ್ತೋ ದ್ವಿಜೋತ್ತಮಾ:**
**ಪಶ್ಚಾತ್ಕರದ್ವಯೇನಾಪಿ ಚಕ್ರ ಶಂಖಧರಃ ಕ್ರಮಾತ್ ||**
**ಸುಭದ್ರಸ್ತು ಗದಾನ್ಯಸ್ತ ದಕ್ಷಹಸ್ತಸ್ತಥೇತರೇ**
**ಅಭೀತಾ ಮುದ್ರಾ ಸಂಯುಕ್ತಶ್ಚಕ್ರ ಶಂಖ ಸಮನ್ವಿತಃ ||**

(ಈಶ್ವರ ಸಂಹಿತೆ, ೯ : ೭೫ - ೮೩)

ಹಾಲು ಅಥವ ಮಲ್ಲಿಗೆಯ ಬಿಳುಪಿನ ಮೈಕಾಂತಿಯಿಂದ, ನೀಲವರ್ಣದ ವಸ್ತ್ರಗಳನ್ನು ಧರಿಸಿರುವ ಈ ಮೊದಲೇ ವರ್ಣಿಸಿರುವ ಗಣಗಳಂತೆಯೇ ಭದ್ರ - ಸುಭದ್ರ ಇಬ್ಬರೂ ಇರುತ್ತಾರೆ. ಇವರನ್ನು ಎರಡು ಭುಜಗಳಿರುವಂತೆ ರೂಪಿಸಬಹುದು. ತರ್ಜನೀ ಮುದ್ರೆ ಧರಿಸಿದ್ದು ಎಡಭಾಗಕ್ಕೆ ಸ್ವಲ್ಪ ಬಗ್ಗಿರಬೇಕು. ಗದೆಯ ತುದಿಯ ಮೇಲೆ ವಿಶ್ರಾಂತಿ ಪಡೆಯುತ್ತಿರುವಂತೆ, ಅಥವ ಗದೆಯನ್ನೂರಿಕೊಂಡು ಅದರ ಮೇಲೆ ಕಾಲಿರಿಸಿಕೊಂಡು ನಿಂತಿರುವಂತೆ ಇರುತ್ತಾರೆ. ಅವರು ಎಡ ಬಲಗಳಲ್ಲಿ ಸಮಾನರಾಗಿದ್ದು ವ್ಯತಸ್ಥಭಂಗಿಯಲ್ಲಿ ನಿಂತಿರುತ್ತಾರೆ. ನಾಲ್ಕು ಭುಜಗಳಿರುವಾಗ ಮೇಲಿನ ತೋಳುಗಳಲ್ಲಿ ಶಂಖ ಚಕ್ರಗಳನ್ನು ಧರಿಸಿರುತ್ತಾರೆ.

ಈ ದ್ವಾರ ಪಾಲಕರೊಂದಿಗೆ ಇವರ ಪಾರ್ಶ್ವಗಳಲ್ಲಿ ಅಜಮುಖ ಆಕಾರಗಳು, ದಿವ್ಯ ಆಯುಧಧರರು ಇರುತ್ತಾರೆ. ಇವರು ತಮ್ಮ ಆಯುಧಗಳನ್ನು ತಮ್ಮ ಹಣೆ ಅಥವ ಕಿರೀಟಗಳಲ್ಲಿ ಧರಿಸಿರುತ್ತಾರೆ. ಇವರಲ್ಲಿ ಚಕ್ರೀ, ಮುಸಲವಾನ್, ಖಡ್ಗೀ, ಗದಾಧರ, ಶಾರ್ಙ್ಗೀ, ಪದ್ಮೀ, ವಜ್ರೀ ಇವರೆಲ್ಲರೂ ನರಾಕಾರದಲ್ಲಿದ್ದು ಎರಡು ಹಸ್ತಗಳನ್ನು ಪಡೆದುಕೊಂಡರುತ್ತಾರೆ. ಬಲಹಸ್ತವು ತರ್ಜನೀ ಮುದ್ರೆಯಲ್ಲಿ, ಎಡಹಸ್ತವು ಕಟ್ಯಾವಲಂಬಿತ ಮುದ್ರೆಯಲ್ಲಿರುತ್ತವೆ.

*ಇತಿ ಶ್ರೀ ಬ್ರಾಹ್ [illegible] ಕರ್ಮ ಶಾಸ್ತ್ರೇ ಪ್ರಾದುರ್ಭಾವ ಕಾಂಡೇ ಆದಿಮೂರ್ತಿ ನಾಮ [illegible] ಯಃ*

